

ರೀಯೋ ಒಲಿಂಪಿಕ್ಸ್‌ನಲ್ಲಿ ಬೆಳ್ಳಿ ಮತ್ತು ಕಂಚಿನ ಪದಕ ಪಡೆದ ದೇಶದ ಹೆಮ್ಮೆಯ ಪುತ್ರಿಯರಾದ ಸಿಂಧು ಮತ್ತು ಸಾಕ್ಷಿ ಅವರಿಗೆ ಹೊಸತು ಬಳಗದ ಅಭಿನಂದನೆಗಳು



# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ಸುನಿಲ್ ಮಿಶ್ರಾ, ತನು, ವಿ. ಗೋಪಾಲ್
ಬಿ. ಎಂ. ಬೊಮ್ನಳ್ಳಿ, ಗೋಪಿ ಹಿರೇಬೆಟ್ಟು, ವಿ.ಆರ್.ಸಿ. ಶೇಖರ್

**ಮುಖಪುಟ :** ಮಹಾದಾಯಿ ರೈತ ಹೋರಾಟದಲ್ಲಿ ಪೋಲಿಸ್ ದೌರ್ಜನ್ಯಕ್ಕೆ ಒಳಗಾದ ಮಹಿಳೆ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಗಳು

ಮುಂಬರುವ ಶಾಸನಸಭಾ ಚುನಾವಣೆಗಳನ್ನು ಗಮನದಲ್ಲಿರಿಸಿ ಕೊಂಡು ಪ್ರಧಾನಿ ನರೇಂದ್ರ ಮೋದಿ ಗೋರಕ್ಷಣೆಯ ಹೆಸರಿನಲ್ಲಿ ನಡೆಯುತ್ತಿರುವ ಅತಿರೇಕಗಳನ್ನು, ಹಿಂಸಾಚಾರಗಳನ್ನು ಅಬ್ಬರದಿಂದ ಆಕ್ಷೇಪಿಸಿ, ಎಚ್ಚರಿಕೆ ನುಡಿಗಳನ್ನು ಆಡಿ, ರಾಜ್ಯಗಳ ಮೇಲೆ ಗೂಬೆ ಕೂರಿಸಿದರು. ಮುಜುಗರದ ಸಂಗತಿಗಳ ವಿಚಾರದಲ್ಲಿ ಮೌನವ್ರತ ಆಚರಿಸುವ ಪ್ರಧಾನಿ ಬಾಯಿಬಿಟ್ಟರಲ್ಲ ಅದೇ ಅತಿಶಯ. ಆದರೆ ಪ್ರಧಾನಿ ಎಚ್ಚರಿಕೆಗಳಿಗೆ ಸಂಘಪರಿವಾರದ ಅಂಗಸಂಸ್ಥೆಗಳಾದ ಭಜರಂಗದಳ, ವಿಶ್ವ ಹಿಂದೂ ಪರಿಷತ್ ಹಾಗೂ ಇತರ ಹಿಂದೂಪರ ಸಂಘಟನೆಗಳು ಕ್ಯಾರೇ ಅನ್ನಲಿಲ್ಲ. ಅವು ತಮ್ಮ ದುಷ್ಟ ಕಲಾಪವನ್ನು ಮುಂದುವರಿಸಿ ಕೊಂಡು ಹೋಗುತ್ತಿವೆ. ಗೋಹತ್ಯೆ ಆರೋಪಿಸಿ ದಲಿತರನ್ನು, ಮುಸಲ್ಮಾನರನ್ನು ಥಳಿಸುವುದು, ನಾನಾ ಬಗೆಯಲ್ಲಿ ಹಿಂಸೆ ಮಾಡುವುದು ಲಾಗಾಯ್ತಿನಿಂದ ಬಂದದ್ದು. ಈಗ ಮೋದಿ ಸರಕಾರ ಅಧಿಕಾರಕ್ಕೆ ಬಂದಮೇಲೆ ಅದು ಹೆಚ್ಚಾಗಿದೆ. ಉತ್ತರ ಪ್ರದೇಶ, ದೆಹಲಿ, ಮುಂಬಯಿ ಮತ್ತಿತರ ಕಡೆಗಳಲ್ಲಿ ನಡೆದಿರುವ ಪ್ರಕರಣಗಳನ್ನು ನೋಡಿದ್ದೇವೆ. ದೇಶದ ಹಲವೆಡೆ ಇದು ಒಂದು ದಂಧೆಯಾಗಿ ಬಿಟ್ಟಿದೆ. ಹೆದರಿಸಿ, ಬೆದರಿಸಿ ಈ ಸಂಘಟನೆಗಳ ಅನುಯಾಯಿಗಳು ಹಣ ಕೀಳುತ್ತಿದ್ದಾರೆ. ಗೋರಕ್ಷಣೆಯ ಹೆಸರಿನಲ್ಲಿ ನಡೆಯುತ್ತಿರುವ ಈ ವ್ಯವಹಾರದಿಂದ ಸಾಕಷ್ಟು ಹಣ ಮಾಡಿಕೊಳ್ಳುತ್ತಿದ್ದಾರೆ. ಗೋಮಾತೆಯ ರಕ್ಷಣೆಯ ನೆಪದಲ್ಲಿ ಮತ ಬ್ಯಾಂಕ್‌ಗಳನ್ನು ಕಾಪಾಡಿಕೊಳ್ಳಲಾಗುತ್ತಿದೆ.

ಕರ್ನಾಟಕ ರಾಜ್ಯದಲ್ಲಿ ಚಿಕ್ಕಮಗಳೂರು, ಮಂಗಳೂರು, ಉಡುಪಿ ಜಿಲ್ಲೆಗಳು ಹಿಂದುತ್ವವಾದಿಗಳ ಉಪಟಳಕ್ಕೆ ಕೇಂದ್ರವಾಗಿಬಿಟ್ಟಿವೆ. ಭಜರಂಗದಳ ಮತ್ತು ವಿಶ್ವ ಹಿಂದೂ ಪರಿಷತ್‌ನ ಕಾರ್ಯಕರ್ತರು ಕೋಟಿ ಕೋಟಿ ಹಣ ಸಂಪಾದಿಸುತ್ತಿದ್ದಾರೆ. ಗೋಹತ್ಯೆ ನಡೆದಾಗ ಜಾತಿ, ಧರ್ಮಗಳ ನಡುವಿನ ಸಂಘರ್ಷದಲ್ಲೂ ಮುಂದೆ ಇರುವ ಇವರು ಗೋವುಗಳನ್ನು ಕಸಾಯಿಖಾನೆಗೆ ಸಾಗಿಸುವುದಕ್ಕೆ ಅನುವು ಮಾಡಿಕೊಡಲು ಹಣ ಕೀಳುತ್ತಾರೆ. ಗೋವನ್ನು ಕದ್ದು ಮಂಗಳೂರು, ಕಾಸರಗೋಡು, ಕೇರಳದವರೆಗೆ ಸಾಗಿಸಿಕೊಟ್ಟರೆ ಕನಿಷ್ಠ ಲಾಭ ರೂ. ೨೦ ಸಾವಿರ ದೊರೆಯುತ್ತದೆ ಎಂದು ಅಂದಾಜು. ಸಂಘಪರಿವಾರದ ಈ ವ್ಯವಹಾರದಲ್ಲಿ ಪೊಲೀಸರೂ ಕೂಡ ಶಾಮೀಲಾಗಿದ್ದಾರೆಂಬ ದೂರು ಇದೆ. ಮಲೆನಾಡಿನಲ್ಲಿ ಶ್ರೀಗಂಧ, ಮರಳು, ಅರಣ್ಯನಾಶ, ಕಳ್ಳ ಸಾಗಾಣಿಕೆಗಳ ಜೊತೆಗೆ ಈಗ ಗೋವುಗಳ ಸಾಗಾಣಿಕೆ ಬೇರೆ ಸೇರಿದೆ. ಗೋವಿನ ಹೆಸರಿನಲ್ಲಿ ಬ್ಲ್ಯಾಕ್ ಮೇಲ್ ಮಾಡುವವರು ಪ್ರಧಾನಿಯ ಬೆದರಿಕೆಗಳಿಗೆ ಖಂಡಿತ ಹೆದರುವುದಿಲ್ಲ. ಇದು ಪ್ರಾಯಶಃ ನಮಗೂ ಚೆನ್ನಾಗಿ ಗೊತ್ತು.

✶ ✶ ✶

ಹದಿನಾರು ವರ್ಷಗಳಿಂದ ಉಪವಾಸ ಸತ್ಯಾಗ್ರಹದಲ್ಲಿ ನಿರತಳಾಗಿದ್ದ ಇರೋಮ್ ಶರ್ಮಿಳಾ ಕೊನೆಗೂ ಆಗಸ್ಟ್ ೯ರಂದು ಉಪವಾಸ ಅಂತ್ಯಗೊಳಿಸಿದ್ದಾರೆ. ಮಣಿಪುರದ ಈ ಹೋರಾಟಗಾರ್ತಿ ಇಷ್ಟು ವರ್ಷ ಬದುಕಿ ಉಳಿದಿದ್ದುದು ಬಲವಂತವಾಗಿ ದ್ರವರೂಪದ ಆಹಾರವನ್ನು ತುರುಕುತ್ತಿದ್ದ ಕಾರಣ. ಕಾರಾಗೃಹ ಮತ್ತು ಆಸ್ಪತ್ರೆಗಳಲ್ಲೇ ಇದ್ದ ಈಕೆ ಚೇತರಿಸಿಕೊಳ್ಳಲು ಇನ್ನೂ ಕೆಲ ದಿನಗಳು ಬೇಕಾದೀತು. ಆಕೆಯ ಹೋರಾಟ ಸೇನಾಪಡೆಗಳ ವಿಶೇಷಾಧಿಕಾರದ ಕಾಯಿದೆ ವಿರುದ್ಧವಾಗಿ. ಈ ಸರ್ವೋಚ್ಚ ನ್ಯಾಯಾಲಯ ಈ ಕಾಯಿದೆ ಅಡಿಯಲ್ಲಿ ಸೇನೆಗೆ ನೀಡಿರುವ ವಿನಾಯಿತಿ ನ್ಯಾಯಯುತವಾದ್ದಲ್ಲ. ಮಾನವಜೀವಕ್ಕೆ ಬೆಲೆ ಇದೆ. ಹಾಗಾಗಿ ಯಾವುದೇ ವಿಭಾಗದವರಿಗೆ ವಿಶೇಷ ರಿಯಾಯಿತಿ ನೀಡುವುದು ಸರಿಯಲ್ಲ ಎಂದು ಹೇಳಿರುವುದನ್ನು ನೆನಪು ಮಾಡಿಕೊಳ್ಳಬಹುದು. ಸರಕಾರ ಇದುವರೆಗೆ ಈ ಕಾಯಿದೆಯನ್ನು ರದ್ದುಗೊಳಿಸುವ ಸೂಚನೆ ನೀಡಿಲ್ಲ. ಕಾಶ್ಮೀರದಲ್ಲಿ ಒಂದು ತಿಂಗಳಿಗೂ ಹೆಚ್ಚು ಕಾಲದಿಂದ ನಡೆಯುತ್ತಿರುವ ಸಂಘರ್ಷದ ಹಿನ್ನೆಲೆಯಲ್ಲಿ ಸೇನಾಪಡೆಗಳಿಗೆ ನೀಡಲಾಗಿರುವ ವಿಶೇಷ ವಿನಾಯಿತಿ ಕಾಯಿದೆ ಸದ್ಯಕ್ಕಂತೂ ರದ್ದಾಗದು. ಇರೋಮ್ ಶರ್ಮಿಳಾ ಕಾಯಿದೆ ವಿರುದ್ಧವಾಗಿ ಹೋರಾಟ ಮುಂದುವರಿಸಲು

*(೭ನೇ ಪುಟಕ್ಕೆ)*






ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೧೮ ಸಂಚಿಕೆ–೨ ಸೆಪ್ಟೆಂಬರ್ ೨೦೧೬

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೨೯೨೪೭೩, ೨೨೨೦೩೫೮೨
ಫ್ಯಾಕ್ಸ್ : ೨೨೨೦೩೫೮೦
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಸಂಪಾದಕೀಯ

## ಮಹಾದಾಯಿ ತಿರುವು

**ಕ**ರ್ನಾಟಕದ ನದಿ ನೀರಿನ ವಿವಾದಗಳಲ್ಲಿ ಸಾಮಾನ್ಯವಾಗಿ ರಾಜ್ಯದ ಹಿತಾಸಕ್ತಿಗೆ ಮಾರಕವಾದ ತೀರ್ಪುಗಳೇ ನ್ಯಾಯಾಲಯ, ನ್ಯಾಯಾಧಿಕರಣ, ನ್ಯಾಯ ಮಂಡಲಿಗಳಿಂದ ಪ್ರಕಟವಾಗಿವೆ. ಅಂತರ್ ರಾಜ್ಯ ವಿವಾದಗಳಲ್ಲಿ ಕಾವೇರಿ ನದಿ ನೀರಿನ ವಿವಾದ ಕೇವಲ ನ್ಯಾಯಕ್ಕೆ ಸಂಬಂಧಪಡದೆ ರಾಜಕೀಯ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತದೆ. ಕೆಲವು ವರ್ಷ ಕೃಷ್ಣಾನದಿ ವಿವಾದವೂ ಹೀಗೇ ಬೆಳೆದು ಈಗ ಒಂದು ಹಂತ ತಲುಪಿದೆ. ಭೀಮಾನದಿ ವಿವಾದ ಆಗಾಗ ಮುನ್ನೆಲೆಗೆ ಬರುತ್ತದೆ. ಈಗ ಮಹಾದಾಯಿ ನದಿ ತಿರುವಿನ ವಿವಾದ ಹಲವು ವರ್ಷದಿಂದ ನಡೆದು ನ್ಯಾಯ ಮಂಡಲಿಯ ಮಧ್ಯಂತರ ತೀರ್ಪಿನಿಂದಾಗಿ ಹೊಸ ತಿರುವು ಪಡೆದಿದೆ. ಕಳೆದ ಒಂದು ವರ್ಷದಿಂದ ಧಾರವಾಡ, ಗದಗ, ಬೆಳಗಾವಿ, ಬಾಗಲಕೋಟೆ ಜಿಲ್ಲೆಗಳಲ್ಲಿ ಮಹಾದಾಯಿ ನದಿಯ ಕಳಸಾ ಬಂಡೂರಿ ತಿರುವಿನ ಯೋಜನೆ ಜಾರಿಗಾಗಿ ಆ ಭಾಗದಲ್ಲಿ ನಿರಂತರ ಹೋರಾಟ ನಡೆದಿದೆ. ಮಹಾದಾಯಿ ನದಿಯ ೨೦೦ ಟಿ.ಎಂ.ಸಿ. ನೀರಿನಲ್ಲಿ ತನ್ನ ಪಾಲು ನಿಗದಿಪಡಿಸಲು ಕರ್ನಾಟಕ ಸರಕಾರ ನ್ಯಾಯಾಧಿಕರಣದ ಮುಂದೆ ತನ್ನ ಬೇಡಿಕೆ ಮಂಡಿಸಿದೆ. ಕಳೆದ ವರ್ಷ ತೀವ್ರವಾದ ಬರಗಾಲದಿಂದಾಗಿ ಆ ನಾಲ್ಕು ಜಿಲ್ಲೆಗಳ ಮಲಪ್ರಭಾ ನದಿ ಹರಿವ ಪ್ರದೇಶದಲ್ಲಿ ನಗರ ಗ್ರಾಮಗಳಿಗೆ ಕುಡಿವ ನೀರಿಗೂ ಬರ ಬಂದು ಜನ ತೊಂದರೆಗೊಳಗಾದರು. ಇಂಥ ಸಂದರ್ಭದಲ್ಲಿ ಅಂತಿಮ ತೀರ್ಪು ಪಡೆಯಲು ಇನ್ನೂ ಕಾಲಾವಕಾಶ ಬೇಕಿರುವುದರಿಂದ ಕುಡಿವ ನೀರಿಗಾಗಿ ೭.೫ ಟಿ.ಎಂ.ಸಿ. ನೀರು ಬಳಸಲು ಮಧ್ಯಂತರ ಆದೇಶಕ್ಕಾಗಿ ಕರ್ನಾಟಕ ಸರಕಾರ ನ್ಯಾಯಾಧಿಕರಣದ ಮುಂದೆ ಅಹವಾಲು ಸಲ್ಲಿಸಿತು. ಆದರೆ ಕಳೆದ ತಿಂಗಳು ೨೭ರಂದು ನ್ಯಾಯಾಧಿಕರಣ ಕುಡಿವ ನೀರಿಗಾಗಿ ಸಲ್ಲಿಸಿದ ಅಹವಾಲನ್ನು ತಿರಸ್ಕರಿಸಿತ್ತು. ಕಳೆದ ಒಂದು ವರ್ಷದಿಂದ ನಿರಂತರವಾಗಿ ಹೋರಾಡುತ್ತಿರುವ ನವಲಗುಂದ, ನರಗುಂದ ಪ್ರದೇಶದಲ್ಲಿನ ಜನರು ಕೇಳಿದಷ್ಟು ನೀರು ಸಿಗಲಿಕ್ಕಿಲ್ಲ, ಆದರೆ ಕುಡಿವ ನೀರಿಗಾದರೂ ಪರಿಹಾರ ಸಿಗಬಹುದೆಂಬ ನಿರೀಕ್ಷೆಯಲ್ಲಿದ್ದರು. ಆದರೆ ಮಧ್ಯಂತರ ತೀರ್ಪು ಬೇಡಿಕೆಯನ್ನೇ ತಿರಸ್ಕರಿಸಿದಾಗ ರೊಚ್ಚಿಗೆದ್ದಿದ್ದಾರೆ. ರೊಚ್ಚಿಗೆದ್ದ ಜನಸಮೂಹ ಸರಕಾರಿ ಆಫೀಸುಗಳಿಗೆ ನುಗ್ಗಿ ಗದ್ದಲ ಮಾಡಿದ್ದಾರೆ. ನವಲಗುಂದದಲ್ಲಿ ಹೆಚ್ಚಿನ ಹಾನಿ ಸಂಭವಿಸಿದೆ. ಆಕ್ರೋಶಗೊಂಡ ಜನಸಮೂಹಕ್ಕೆ ವಿವೇಚನೆ ಕಡಿಮೆ. ಒಂದು ವರ್ಷದಿಂದ ಶಾಂತಿಯುತವಾಗಿ ನಡೆಸಿದ ಹೋರಾಟಕ್ಕೆ ಪ್ರತಿಫಲ ದೊರೆಯದೇ ಇದ್ದಾಗ ಜನ ಶಾಂತಿಮಾರ್ಗವನ್ನು ಕೈಬಿಟ್ಟಿದ್ದಾರೆ. ಅವರಿಗೆ ೧೯೮೦ರಲ್ಲಿ ಅದೇ ಪ್ರದೇಶದಲ್ಲಾದ ರೈತ ಬಂಡಾಯ ಸ್ಮರಣೆಗೆ ಬಂದಿದೆ. ಗ್ರಾಮೀಣ ಜನರಿಗೆ ಸರಕಾರದ ತೀರ್ಮಾನ ಹಾಗೂ ನ್ಯಾಯಾಧಿಕರಣದ ತೀರ್ಪಿನ ಮಧ್ಯದ ವ್ಯತ್ಯಾಸಗಳು ಅರ್ಥವಾಗುವುದಿಲ್ಲ. ರಾಜ್ಯ ಮತ್ತು ಕೇಂದ್ರದ ಸರಕಾರಗಳು ತಮ್ಮ ಹಿತಾಸಕ್ತಿಯನ್ನು ಕಾಯುತ್ತಿಲ್ಲ ಎಂಬ ಆಕ್ರೋಶ ಜನರ ಮಧ್ಯೆ ಇತ್ತು. ಇಂಥ ವಾತಾವರಣದಲ್ಲಿ ಪ್ರಕಟವಾದ ತೀರ್ಪು ಜನರ ತಾಳ್ಮೆ, ಸಹನೆಯನ್ನು ಕದಡಿದೆ. ಇಷ್ಟಕ್ಕೂ ಅದು ಸಂಘಟಿತವಾದ ದೊಂಬಿಯೇನಲ್ಲ. ಆದರೆ ಆ ದೊಂಬಿಯಲ್ಲಿ ರಾಜ್ಯ ಸರಕಾರದ ವಿರುದ್ಧ ಜನರ ರೋಷವನ್ನು ತಿರುಗಿಸುವ ಸ್ವಾರ್ಥವೂ ಕೆಲಮಟ್ಟಿಗೆ ಕೆಲಸ ಮಾಡಿರುವ ಸಾಧ್ಯತೆಗಳಿವೆ.

ಜುಲೈ ೨೭ ಹಾಗೂ ೨೮ರಂದು ತೀರ್ಪು ಪ್ರಕಟವಾದ ನಂತರದ ಗಲಭೆಗಳನ್ನು ನಿಯಂತ್ರಿಸುವಲ್ಲಿ ರಾಜ್ಯದ ಪೊಲೀಸ್ ವ್ಯವಸ್ಥೆ ಸಂಯಮ ತೋರಬೇಕಿತ್ತು. ಗಲಭೆ ನಡೆವ ಸಂದರ್ಭದಲ್ಲಿ ಪೊಲೀಸರ ನಡತೆಯನ್ನು ಯಾರೂ ಪ್ರಶ್ನಿಸುವುದಿಲ್ಲ. ಆದರೆ ಗಲಭೆಗೆ ಕಾರಣರಾದವರನ್ನು ಬಂಧಿಸಲು ಯಮನೂರು, ಅರೇಕುರಹಟ್ಟಿ, ಅಳಗವಾಡಿ ಮುಂತಾದ ನವಲಗುಂದ ತಾಲ್ಲೂಕಿನ ಹಳ್ಳಿಗಳಿಗೆ ಹೋದ ಪೊಲೀಸರು ಬ್ರಿಟಿಷ್ ಕಾಲದ ಪೊಲೀಸರನ್ನು ನೆನಪಿಸಿಕೊಳ್ಳುವಂತೆ ಮಾಡಿದ್ದಾರೆ. ರಾಜ್ಯ ಸರಕಾರ ಈ ರೈತರ ಚಳುವಳಿಗೆ ನೈತಿಕ ಬೆಂಬಲವಿದೆ ಎಂದು ಹೇಳಿದ್ದರೂ ಪೊಲೀಸರು ರೈತರನ್ನು ದೇಶದ ಶತ್ರುಗಳೆಂದು ಪರಿಗಣಿಸಿ ಕಾರ್ಯಾಚರಣೆಗಿಳಿದಿದ್ದಾರೆ. ಕೆಲವೆಡೆ ರೈತರಿಗೂ ಪೊಲೀಸರಿಗೂ ಘರ್ಷಣೆಯಾಗುವಂಥ ಸಂದರ್ಭ ಉಂಟಾಗಿದ್ದೂ ನಿಜ. ಆದರೆ ಪೊಲೀಸರೂ ರೊಚ್ಚಿಗೆದ್ದ ಜನರಂತೆ ತಮ್ಮ ವಿವೇಚನೆಯನ್ನು ಕಳೆದುಕೊಂಡರೆ ಹೇಗೆ? ಮಕ್ಕಳನ್ನು, ಮಹಿಳೆಯರನ್ನು, ಗರ್ಭಿಣಿಯರನ್ನು, ವಯೋವೃದ್ಧರನ್ನು, ಎದುರಿಗೆ ಸಿಕ್ಕ ಎಲ್ಲರನ್ನೂ ಶತ್ರುಗಳಂತೆ ಭಾವಿಸಿ ಥಳಿಸಿದ್ದಾರೆ. ಯಮನೂರು, ಅಳಗವಾಡಿ ಗ್ರಾಮಗಳಲ್ಲಿ ಭಯೋತ್ಪಾದಕರಂತೆ ವರ್ತಿಸಿದ್ದಾರೆ. ಅದೇ ಪ್ರದೇಶದಲ್ಲಿ ೧೯೮೦ರಲ್ಲಿ ಪೊಲೀಸರ ಇಂಥ ವರ್ತನೆಯೇ ದೊಡ್ಡ ಅನಾಹುತಗಳಿಗೆ, ಸಾವು ನೋವುಗಳಿಗೆ ಕಾರಣವಾಗಿತ್ತು. ೧೯೮ರಲ್ಲಿ ಹಾಸನ ಜಿಲ್ಲೆಯಲ್ಲಿ ನಡೆದ ಬಾಗೂರು–ನವಿಲೆ ರೈತ ಚಳುವಳಿಯಲ್ಲಿಯೂ ಪೊಲೀಸರು ರಾಕ್ಷಸರಂತೆ ಅಲ್ಲಿನ ಹಳ್ಳಿಗಳಲ್ಲಿ ವರ್ತಿಸಿದ್ದರು. ಅಂದು ರಾಜ್ಯದಲ್ಲಿ ಜೆ.ಡಿ.ಎಸ್.ನ ಜೆ. ಎಚ್. ಪಟೇಲರು ಮುಖ್ಯಮಂತ್ರಿಗಳಾಗಿದ್ದರೆ, ಕೇಂದ್ರದಲ್ಲಿ ಹಾಸನದವರೇ ಆದ ದೇವೇಗೌಡರು ಪ್ರಧಾನಿಯಾಗಿದ್ದರು. ಒಬ್ಬ ಸಮಾಜವಾದಿ ಮುಖ್ಯಮಂತ್ರಿ, ಮಣ್ಣಿನ ಮಗ ಪ್ರಧಾನಮಂತ್ರಿಯಾಗಿದ್ದರೂ ರೈತರ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳದೆ ಹೋರಾಟಗಾರ ರೈತರ

ಮೇಲೆ ಪೊಲೀಸರನ್ನು 'ಛೂ' ಬಿಟ್ಟಿದ್ದರು. ಪೊಲೀಸರು ಯಾವತ್ತೂ ಪೊಲೀಸರೇ. ಪ್ರಭುತ್ವ ರಕ್ಷಣೆಯ ಹೆಸರಿನಲ್ಲಿ ಅವರನ್ನು ರಾಕ್ಷಸರನ್ನಾಗಿಸಲಾಗುತ್ತದೆ. ನವಲಗುಂದ ತಾಲೂಕಿನ ಮಹಾದಾಯಿ ರೈತ ಹೋರಾಟಗಾರರ ಮೇಲೆ ಪೊಲೀಸ್ ದೌರ್ಜನ್ಯ ಖಂಡನೀಯವೆಂದು ಹೇಳುತ್ತಲೆ, ಇದಕ್ಕೆ ಸರಕಾರಗಳು ಬೆಲೆ ತೆರಬೇಕಾಗುತ್ತದೆ ಎಂಬ ವಾಸ್ತವವನ್ನೂ ಗಮನಿಸಬೇಕು.

ಮಹಾದಾಯಿ ನದಿ ತಿರುವಿನ ವಿಷಯದಲ್ಲಿ ಕೇಂದ್ರ ಸರಕಾರ ಮಧ್ಯ ಪ್ರವೇಶ ಮಾಡಿ ಜನರ ಹಿತಾಸಕ್ತಿ ಕಾಯುವಲ್ಲಿ ವಿಫಲವಾಗಿದೆ. ಪ್ರಧಾನಿ ನರೇಂದ್ರ ಮೋದಿ ನೀರಿನ ವಿಷಯದಲ್ಲಿ ರಾಜಕಾರಣ ಮಾಡಿದ್ದಾರೆ. ಕರ್ನಾಟಕ, ಗೋವಾ ಮತ್ತು ಮಹಾರಾಷ್ಟ್ರ ಸರಕಾರಗಳ ಮುಖ್ಯಮಂತ್ರಿಗಳ ಸಭೆ ಕರೆದು ಕುಡಿವ ನೀರಿನ ಸಮಸ್ಯೆಯನ್ನು ನ್ಯಾಯಾಧಿಕರಣದಾಚೆ ಬಗೆಹರಿಸಬಹುದಿತ್ತು. ಕರ್ನಾಟಕದ ಸರಕಾರ ಸರ್ವಪಕ್ಷ ನಿಯೋಗದೊಂದಿಗೆ ಹೋಗಿ ಮನವಿ ಸಲ್ಲಿಸಿತ್ತು. ಮಹಾರಾಷ್ಟ್ರ ಇಂಥ ಪರಿಹಾರದಿಂದ ಕಳೆದುಕೊಳ್ಳ ಬೇಕಾದದ್ದೇನೂ ಇಲ್ಲದೇ ಇರುವುದರಿಂದ ಅದರ ವಿರೋಧ ಇಲ್ಲ. ಗೋವಾದಲ್ಲಿ ಪ್ರಧಾನಿ ಮೋದಿಯವರ ಪಕ್ಷದ ಸರಕಾರವೇ ಇದೆ. ಕರ್ನಾಟಕದ ಪಾಲಿನ ನೀರಿನಲ್ಲಿ ಕುಡಿವ ನೀರಿಗಾಗಿ ೭.೫ ಟಿ.ಎಂ.ಸಿ. ನೀರಿಗೆ ತಕರಾರು ತೆಗೆಯದಿರಲು ಮನ ಒಲಿಸಬಹುದಿತ್ತು. ಆದರೆ ಆ ಕೆಲಸವನ್ನು ಪ್ರಧಾನಿಯಾಗಲೀ, ಆ ಭಾಗದ ಬಿ.ಜೆ.ಪಿ. ಸಂಸದರಾಗಲೀ ಮಾಡಲಿಲ್ಲ. ಇಲ್ಲಿ ಒಂದು ಅಂಶ ಸ್ಪಷ್ಟವಾಗುತ್ತದೆ. ರಾಜ್ಯದಲ್ಲಿ ಕಾಂಗ್ರೆಸ್ ಸರಕಾರವಿದ್ದಾಗ ಈ ರೀತಿಯ ರಾಜಕೀಯ ನಡೆ ಕಾಂಗ್ರೆಸ್‌ಗೆ ಅನುಕೂಲವಾಗಬಹುದೆಂಬ ಆತಂಕ ಬಿ.ಜೆ.ಪಿ.ಗೆ ಇದೆ. ಈ ವಿಷಯದಲ್ಲಿ ಕಾಂಗ್ರೆಸ್ ಪಕ್ಷ ಸಹ ಮೂರು ರಾಜ್ಯಗಳಲ್ಲಿ ತನ್ನ ಪಕ್ಷದ ಉನ್ನತ ನಾಯಕರ, ವಿರೋಧ ಪಕ್ಷದ ನಾಯಕರ ಸಭೆ ಕರೆದು ಮೂರೂ ರಾಜ್ಯಗಳಲ್ಲಿ ಸಹಮತ ಮೂಡಿಸುವ ಕೆಲಸ ಮಾಡಬಹುದಿತ್ತು. ಅಥವಾ ಅಂಥ ಮಾದರಿಯನ್ನು ಬಿ.ಜೆ.ಪಿ.ಯ ಮುಂದಿಡಬಹುದಿತ್ತು. ಈ ಎರಡೂ ಪಕ್ಷಗಳ ದೂರಾಲೋಚನೆಯ ಕೊರತೆಯಿಂದಾಗಿ ಮಹಾದಾಯಿ ನದಿ ರಾಜಕೀಯ ತಿರುವು ಪಡೆದುಕೊಂಡು ದುರಾಲೋಚನೆಗೆ ಬಲಿಯಾಗಿದೆ.

ಮಹಾದಾಯಿ ರೈತರ ಹೋರಾಟ, ಕಾವೇರಿ, ಕೃಷ್ಣ ನದಿ ವಿವಾದದ ಸಂದರ್ಭದ ಹೋರಾಟಗಳಿಗಿಂತ ಭಿನ್ನವಾಗಿದೆ. ನದಿ ಚಿಕ್ಕದಾದರೂ, ನೀರಿನ ಪಾಲು ಕಡಿಮೆ ಇದ್ದರೂ ಲಭ್ಯವಾಗಬಹುದಾದ ನೀರಿನ ಅವಶ್ಯಕತೆ ಹೆಚ್ಚಿದೆ. ಮಹಾದಾಯಿ ನದಿ ನೀರಿಗಾಗಿ ನಡೆದ ಹೋರಾಟ ರಾಜ್ಯದ ಜನತೆಯ ಗಮನ ಸೆಳೆದಿದೆ, ಬೆಂಬಲ ಪಡೆದಿದೆ. ಕೇಂದ್ರ, ರಾಜ್ಯ ಸರಕಾರಗಳು ಇಕ್ಕಟ್ಟಿಗೆ ಸಿಲುಕಿವೆ. ಇಷ್ಟೆಲ್ಲಾ ಪ್ರಭಾವ, ಪರಿಣಾಮ ಆ ಚಳುವಳಿಯಿಂದಾಗಿದ್ದರೂ ಆ ಪ್ರದೇಶದ ರೈತ ಚಳುವಳಿ ಅಸಂಘಟಿತವಾಗಿದೆ. ಹತ್ತಾರು ಹೋರಾಟ ಸಮಿತಿಗಳು, ನೂರಾರು ನಾಯಕರು ಆ ಚಳುವಳಿಗೆ ಒಂದು ಏಕಮುಖಿ ಪ್ರವಾಹ ರೂಪಿಸುವಲ್ಲಿ ವಿಫಲರಾಗಿದ್ದಾರೆ. ಖ್ಯಾತಿಗಾಗಿ, ಪ್ರಚಾರಕ್ಕಾಗಿ ತಿಕ್ಕಾಟವಿದೆ. ಇದರ ಹಿಂದೆ ರಾಜಕೀಯ ಹುನ್ನಾರಗಳೂ ಇವೆ. ಅಂತಿಮ ತೀರ್ಪು ಆ ಪ್ರದೇಶದ ಜನತೆಯ ಹಿತಕ್ಕೆ ವಿರುದ್ಧವಾದರೆ ಆಗ ಈ ಅನೈಕ್ಯತೆ ಆ ಪ್ರದೇಶದ ಜನರ ಬದುಕಿಗೆ ಮಾರಕವಾಗುತ್ತದೆ. ಚಳುವಳಿಯ ನಾಯಕರು ತೀರ್ಮಾನಗಳನ್ನು ಸಂಘಟಿತವಾಗಿ, ಸಹಮತದಿಂದ ತೆಗೆದುಕೊಳ್ಳಬೇಕು ಇಲ್ಲವಾದರೆ ಚಳುವಳಿ ದಾರಿ ತಪ್ಪುತ್ತದೆ. ಈಗಲೇ ಹಾಗಾಗಿದೆ. ಕಳೆದ ಒಂದು ವರ್ಷದಿಂದ ನೀರಿಗಾಗಿ ಹೋರಾಟ ನಡೆದಿದ್ದರೆ, ಪೊಲೀಸ್ ಕಾರ್ಯಾಚರಣೆಯ ನಂತರ ಪೊಲೀಸ್ ದೌರ್ಜನ್ಯದ ವಿರುದ್ಧ ಹೋರಾಟ ನಡೆದಿದೆ. ಅಂದರೆ ಆದ್ಯತೆ ಬದಲಾಗಿದೆ. ಹೀಗೆ ಆದ್ಯತೆ ಬದಲಾಗದಂತೆ ಕೇಂದ್ರ ಹಾಗೂ ರಾಜ್ಯ ಸರಕಾರಗಳು ಪಕ್ಷ ಹಿತಾಸಕ್ತಿಗಿಂತ ಜನತೆಯ ಹಿತಾಸಕ್ತಿ ಮುಖ್ಯ ಎಂಬುದನ್ನು ಪರಿಗಣಿಸುವಂತೆ ಮಾಡಲು ಪ್ರಬಲವಾದ, ಏಕಮುಖಿಯಾದ ಜನಾಂದೋಲನ ನಡೆಯಬೇಕು. ಎಲ್ಲರನ್ನೂ ಒಳಗೊಂಡ ಒಂದೇ ಹೋರಾಟ ಸಮಿತಿ ರೂಪುಗೊಳ್ಳಬೇಕು. ಯಾಕೆಂದರೆ ಇನ್ನೂ ಪ್ರಯಾಣದ ಗುರಿ ದೂರವಿದೆ.

ಸಿದ್ದನಗೌಡ ಪಾಟೀಲ

## ೭೦ನೇ ಸ್ವಾತಂತ್ರ್ಯೋತ್ಸವ – ಪ್ರಧಾನಿಯ ಶಬ್ದಾಡಂಬರ

**ಕಾ**ಶ್ಮೀರದಲ್ಲಿ ಮುಂದುವರಿದಿರುವ ಹಿಂಸಾಚಾರ, ಕರ್ಫ್ಯೂ, ನಿಷೇಧ, ಗೋರಕ್ಷಕ ತಂಡಗಳಿಂದ ದಲಿತರ ಮೇಲೆ ದೇಶದ ವಿವಿಧ ಕಡೆಗಳಲ್ಲಿ ನಡೆಯುತ್ತಿರುವ ದಾಂಧಲೆ, ಹಲ್ಲೆ, ನ್ಯಾಯಮೂರ್ತಿಗಳ ನೇಮಕಾತಿಯಲ್ಲಿ ವಿಳಂಬ ಮುಂತಾದ ಗಂಭೀರ ಸಮಸ್ಯೆಗಳನ್ನು ಎಲ್ಲೂ ನೇರವಾಗಿ ಪ್ರಸ್ತಾಪಿಸದೆ, ತಮ್ಮ ಸರಕಾರದ ಸಾಧನೆಗಳನ್ನು ವೈಭವೀಕರಿಸಿದ ಪ್ರಧಾನ ಮಂತ್ರಿ ನರೇಂದ್ರ ಮೋದಿಯವರ ಸ್ವಾತಂತ್ರ್ಯೋತ್ಸವ ದಿನದ ಒಂದೂವರೆ ಗಂಟೆಯ ಭಾಷಣ ಕೇಳುಗರನ್ನು ನಿದ್ರೆಗೆ ದೂಡುವಂತಿತ್ತು. ಎಂದಿನಂತೆ ಎಪ್ಪತ್ತನೇ ಸ್ವಾತಂತ್ರ್ಯೋತ್ಸವದ ದಿನದಂದು ಸಾಲಂಕೃತರಾಗಿ ಆಗಮಿಸಿದ ಪ್ರಧಾನಿ ದೆಹಲಿಯ ಕೆಂಪುಕೋಟೆಯ ವೇದಿಕೆಯ ಮೇಲೆ ನಿಂತು ತಮ್ಮ ಯಾವತ್ತಿನ ಹಾವಭಾವಗಳಿಂದ, ಶುದ್ಧ ಹಿಂದಿ ವಾಕ್ಚಾತುರಿಯಿಂದ ಮಾಡಿದ ಭಾಷಣ ಮುಂಬರುವ ಐದು ರಾಜ್ಯಗಳ ಶಾಸನಸಭಾ ಚುನಾವಣೆಗಳನ್ನು ಗಮನದಲ್ಲಿರಿಸಿಕೊಂಡು ಬಿಗಿದಂತಿತ್ತು. ಈ ಬಾರಿಯ ಸ್ವಾತಂತ್ರ್ಯ ದಿನದ ಭಾಷಣಕ್ಕೆ ಜನಸಾಮಾನ್ಯರಿಂದ ಸಲಹೆಗಳನ್ನು ಆಹ್ವಾನಿಸಿದ್ದರು ಮೋದಿ,





**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳಿಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಜನದನಿಯಾಗುವ ಮಹದಾಸೆಯಿಂದ. ಇದಕ್ಕೆ ಲಕ್ಷಗಟ್ಟಲೆ ಜನ ಸ್ಪಂದಿಸಿದ್ದರು. ಆದರೆ ಮೋದಿಯವರಿಗೆ ತಮ್ಮ ಸರಕಾರದ ಸಾಧನೆಗಳನ್ನು ಕೊಚ್ಚಿಕೊಳ್ಳುವುದಕ್ಕೇ ಹೆಚ್ಚು ಸಮಯ ವಿನಿಯೋಗವಾಯಿತು.

ಸರಕಾರದ ಸಾಧನೆಗಳನ್ನು ಪಟ್ಟಿಮಾಡುತ್ತಾ ಹೋದರೆ ಒಂದು ವಾರ ಬೇಕಾಗುತ್ತದೆ ಎಂದು ಎಚ್ಚರಿಸಿದ ಪ್ರಧಾನಿ ಮೋದಿ ಹಲವು ಅಂಕಿ–ಅಂಶಗಳನ್ನು ತೂರಾಡಿದರು. ಪ್ರಧಾನ ಮಂತ್ರಿ ಜನಧನ್ ಯೋಜನೆ, ಸ್ವಚ್ಛ ಭಾರತ, ಗ್ರಾಮಾಂತರ ಪ್ರದೇಶಗಳಲ್ಲಿ ಶೌಚಾಲಯಗಳ ನಿರ್ಮಾಣ, ಬಡ ಕುಟುಂಬಗಳಿಗೆ ಇಂಧನಾನಿಲ ಸರಬರಾಜು, ಸಬ್ಸಿಡಿಯ ಉಳಿತಾಯ, ಆಡಳಿತೆಯಲ್ಲಿ ಚುರುಕು ಇವುಗಳನ್ನು ಕುರಿತು ಸುದೀರ್ಘವಾಗಿ ಮಾತನಾಡಿದ ಅವರು ತಮ್ಮ ಸಾಧನೆಗಳನ್ನು ಸಾಕಷ್ಟು ವೈಭವೀಕರಿಸಿದರು. ಬೇಕಾದಷ್ಟು ಅಂಕಿ–ಅಂಶಗಳನ್ನು ಸಾದರಪಡಿಸಿದರು. ಆದರೆ ವಸ್ತುಸ್ಥಿತಿ ಬೇರೆಯೇ ಆಗಿದೆ. ಅಗತ್ಯ ವಸ್ತುಗಳ ಬೆಲೆ ಏರಿಕೆಯಿಂದ ಜನಸಾಮಾನ್ಯರು ತತ್ತರಿಸುತ್ತಿದ್ದಾರೆ. ಹಣದುಬ್ಬರದಲ್ಲಿ ಹೆಚ್ಚಿನ ವ್ಯತ್ಯಾಸವೇನಾಗಿಲ್ಲ, ಇಂಧನಾನಿಲ ಸಬ್ಸಿಡಿ ಉಳಿತಾಯ ಬರೀ ಉತ್ಪ್ರೇಕ್ಷೆ. ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ವರದಿಯು ಸರಕಾರದ ಅಂಕಿ–ಅಂಶಗಳ ಪೊಳ್ಳನ್ನು ಬಹಿರಂಗಗೊಳಿಸಿದೆ. ಮೋದಿ ಆಡಳಿತದ ಎರಡು ವರ್ಷಗಳಲ್ಲಿ ಬಡತನದ ರೇಖೆಯಿಂದ ಕೆಳಗಿರುವವರ ಸಂಖ್ಯೆ ಅಧಿಕಗೊಂಡಿದೆ. ಸರಕಾರ ಅನುಸರಿಸುತ್ತಿರುವ ನೀತಿಗಳು ಕಾರ್ಪೊರೇಟ್ ವಲಯಕ್ಕೆ ಹೆಚ್ಚು ಪ್ರಯೋಜನವಾಗಿದೆಯೇ ಹೊರತು ಜನಸಾಮಾನ್ಯರಿಗಲ್ಲ. ಪ್ರಧಾನಿ ಅಬ್ಬರದಿಂದ ಪ್ರಚಾರ ಮಾಡಿದ ಯೋಜನೆಗಳು ಕಾಗದದ ಮೇಲೇ ಉಳಿದಿವೆ. ಈ ಹಲವಾರು ಸಮಸ್ಯೆಗಳ ಕುರಿತು ಸರಕಾರ ಏನು ಕ್ರಮ ಕೈಗೊಳ್ಳಲಿದೆ ಎಂಬುದನ್ನು ಪ್ರಸ್ತಾಪಿಸುವ ಗೋಜಿಗೆ ಪ್ರಧಾನಿ ಹೋಗಲಿಲ್ಲ. ಮಾತನಾಡಿದರೆ ಅಭಿವೃದ್ಧಿ ಮಂತ್ರ ಜಪಿಸುವ ಮೋದಿ, ಮಾತಿನಲ್ಲೇ ಮಂಟಪ ಕಟ್ಟುತ್ತಾರೆಯೇ ಹೊರತು ಬೇರೇನಿಲ್ಲ. ವಿದೇಶೀ ಬಂಡವಾಳ ಹರಿಸಿದ್ದಾಯಿತು. ಎಲ್ಲ ಕ್ಷೇತ್ರಗಳಲ್ಲಿ, ಕಪ್ಪು ಹಣ ತಂದು ಹಂಚಿಯಾಯಿತು, ಕಾಳಸಂತೆಕೋರರನ್ನು, ವಂಚಿಸುವವರನ್ನು ಬಗ್ಗುಬಡಿದಾಯಿತು, ಭಾರತ ದೇಶವನ್ನು ಸ್ವಚ್ಛಗೊಳಿಸಿ ಆಯಿತು, ಇನ್ನೇನು ಬೇಕು ? ಇದುವರೆಗೆ 'ಜಿಎಸ್‌ಟಿ' (ಸರಕು ಮತ್ತು ಸೇವಾ ತೆರಿಗೆ) ಅಭಿವೃದ್ಧಿಗೆ ಅಡ್ಡಗಾಲಾಗಿತ್ತು. ಈಗ ಕಾಯಿದೆ ಅನುಮೋದನೆಯಾಗಿದೆ. ಮುಂದೇನಾದೀತು ನೋಡಬೇಕು. ಕಲ್ಪನೆಗಿಂತ ವಾಸ್ತವ ಕಹಿ.

ಪ್ರಚಾರಪ್ರಿಯ ಮೋದಿ ಆಕರ್ಷಕ ನುಡಿಗಟ್ಟುಗಳನ್ನು ಬಳಸುವುದರಲ್ಲಿ, ಆಂಗಿಕ ಅಭಿನಯ ಪ್ರದರ್ಶಿಸುವುದರಲ್ಲಿ ನಿಸ್ಸೀಮ. ಈ ಸ್ವಾತಂತ್ರ್ಯದ ದಿನವೂ ಅದಕ್ಕೆ ಕೊರತೆಯಿರಲಿಲ್ಲ. ಪಾಕಿಸ್ತಾನದೊಂದಿಗೆ ಸಂಬಂಧಗಳು ತೀರಾ ಕೆಳಮಟ್ಟದಲ್ಲಿವೆ ಈಗ. ಹಾಗೆಯೇ ಭಾಜಪ ಅಧಿಕಾರ ಹಂಚಿಕೊಂಡಿರುವ ಜಮ್ಮು–ಕಾಶ್ಮೀರದಲ್ಲಿ ಕಳೆದ ಮೂವತ್ತೈದು ದಿನಗಳಿಂದ ಪರಿಸ್ಥಿತಿ ಬಿಗಡಾಯಿಸಿದೆ. ಇಂಥ ಸಮಯದಲ್ಲಿ ಪಾಕಿಸ್ತಾನದ ಭಾಗವಾಗಿರುವ ಬಲೂಚಿಸ್ತಾನ, ಗಿಲ್ಗಿಟ್ ಹಾಗೂ ಪಾಕ್ ಆಕ್ರಮಿತ ಕಾಶ್ಮೀರದಲ್ಲಿನ ಅಸ್ಥಿರ ಪರಿಸ್ಥಿತಿ, ಆಂದೋಳನ ಮತ್ತು ಮಾನವ ಹಕ್ಕುಗಳ ಉಲ್ಲಂಘನೆಯ ಕುರಿತು ತಮ್ಮ ಭಾಷಣದಲ್ಲಿ ಪ್ರಧಾನಿ ಮೋದಿ ಅಬ್ಬರಿಸಿದ್ದರ ಔಚಿತ್ಯ ಪ್ರಶ್ನಾರ್ಹವಾದದ್ದು. ಇದು ಪಾಕಿಸ್ತಾನದ ಪ್ರಚೋದನೆಗಳಿಗೆ ಪ್ರತಿಯಾಗಿ ನಡೆಸಿದ ವಾಗ್ದಾಳಿಯೇ ಹೊರತು ಬೇರೇನಿಲ್ಲ. ಇದರಿಂದ ಪಾಕಿಸ್ತಾನ ಕಾಶ್ಮೀರದಲ್ಲಿ ನಡೆಸುತ್ತಿರುವ ಪ್ರಚೋದನೆ ಏನೂ ಕಮ್ಮಿಯಾಗುವುದಿಲ್ಲ. ಈ ರೀತಿಯ ಪ್ರತೀಕಾರದ ಮನೋವೃತ್ತಿಯಿಂದ ಪರಿಸ್ಥಿತಿ ಬದಲಾಗದು. ಬದಲಾಗಿ ಸಂಬಂಧಗಳು ಮತ್ತಷ್ಟು ಹದಗೆಡುತ್ತವೆ. 'ಸಾರ್ಕ್' ಗೃಹಸಚಿವರ ಸಮಾವೇಶದಲ್ಲಿ ಭಾಗವಹಿಸಿದ್ದ ಗೃಹಸಚಿವ ರಾಜನಾಥ ಸಿಂಗ್ ಪಾಕ್ ರಾಜಧಾನಿ ಇಸ್ಲಾಮಾಬಾದ್‌ನಿಂದ ಮಧ್ಯದಲ್ಲೇ ದೆಹಲಿಗೆ ಹಿಂದಿರುಗಿದರು. ಈಗ ಹಣಕಾಸು ಸಚಿವರ ಸಮಾವೇಶದಲ್ಲಿ ವಿತ್ತ ಸಚಿವ ಅರುಣ್ ಜೇಟ್ಲಿ ಪಾಲ್ಗೊಳ್ಳುವುದಿಲ್ಲ ಎಂಬ ಸೂಚನೆ ಬಂದಿದೆ. ಈ ಬೆಳವಣಿಗೆಗಳು ದ್ವಿಪಕ್ಷೀಯ ಸಂಬಂಧಗಳನ್ನು ಸುಧಾರಿಸುವುದಕ್ಕೆ ತರವಲ್ಲ. ಮೋದಿ–ಷರೀಫ್ ಮಾತುಕತೆ ಪುನರಾರಂಭಿಸುವುದಕ್ಕೆ ಅನುವಾಗುವುದಿಲ್ಲ. ಮುಯ್ಯಿಗೆ ಮುಯ್ಯಿಗಿಂತ ಮಾತುಕತೆಯೇ ಲೇಸು.

### ದಿ॥ ಯು. ಎಸ್. ವೆಂಕಟರಾಮನ್ ಪುರಸ್ಕಾರ

ಕಾರ್ಮಿಕ ನಾಯಕರೂ ಚಿತ್ರಕಲಾವಿದರೂ ಆಗಿದ್ದ, ವೈವಿಧ್ಯಮಯ ವ್ಯಕ್ತಿತ್ವದ ದಿ॥ ಕಾಮ್ರೇಡ್ ಯು. ಎಸ್. ವೆಂಕಟರಾಮನ್ ಅವರ ಹೆಸರಿನಲ್ಲಿ ಅವರ ಕುಟುಂಬದ ಸದಸ್ಯರು 'ಹೊಸತು' ಪತ್ರಿಕೆಯಲ್ಲಿ ಪ್ರಕಟವಾಗುವ ಕಾರ್ಮಿಕ–ದುಡಿಯುವ ಜನತೆಯ ಕುರಿತ ಆಯ್ದ ಒಳ್ಳೆಯ ಲೇಖನ ಮತ್ತು ಉತ್ತಮ ಕಲಾಕೃತಿಗಳಿಗೆ ತಲಾ ೫೦೦೦/– ರೂ.ಗಳ ಬಹುಮಾನವನ್ನು ಪ್ರತಿವರ್ಷ ಪ್ರಾಯೋಜಿಸುತ್ತಿದ್ದಾರೆ. ಆ ಸಂಬಂಧ ೨೦೧೪–೧೫ರ ಸಾಲಿನ ಬಹುಮಾನಗಳನ್ನು ಕುರಿತ ಲೇಖನ **ಅಭಿವೃದ್ಧಿ ಮತ್ತು ಭೂಸುಧಾರಣೆ** (ಪ್ರ. ಜನವರಿ ೨೦೧೫) ಲೇಖಕ ಡಾ॥ ಎಂ. ಚಂದ್ರ ಪೂಜಾರಿ ಹಾಗೂ ಉತ್ತಮ ಕಲಾಕೃತಿಗಳಿಗೆ ಕೊಡುವ ಬಹುಮಾನವನ್ನು ಶ್ರೀ ವೀರಣ್ಣ ಕರಡಿ (ಪ್ರ. ಮೇ ೨೦೧೫) ಅವರಿಗೆ ನೀಡಲಾಗಿದೆ.

– *ಸಂ.*

## ಯಮುನೆಯ ನೀರು ಕಪ್ಪು

ಬಿಳಿಗಲ್ಲ ಹಾಸಿನ ತುಂಬೆಲ್ಲ ಅರಸಿದೆ
ನಿನ್ನ ಹೆಜ್ಜೆ ಗುರುತುಗಳ
ಯಮುನೆಯ ಜುಳುಜುಳು ಆಲಿಸಿದೆ
ನಿನ್ನ ದನಿ ಕೇಳಬಹುದೆಂದು
ಎಷ್ಟೊಂದು ಭವ್ಯ ! ಎಂಥ ಚಿತ್ತಾರ !
ಹುಡುಕಿದೆ ನಿನ್ನ ಬದುಕಿನ ಚಿತ್ತಾರ
ಯಾಕೆ ಗೆಳತಿ ನಿನ್ನ ಗುರುತೇ ಸಿಗದಲ್ಲೇ ? ಎಲ್ಲಿರುವೆ ಗೆಳತಿ ?
ಗೋರಿಯೊಡೆದು ಒಮ್ಮೆ ಎದ್ದು ಬಾರೆ
ನಿನ್ನೊಳಗು ಅರಿಯಲು ಕಾದಿರುವೆ

* * *

ಚಂದ್ರಕಾಂತ ಶಿಲೆಯ ಹೊಳಪು ಹಾಲ್ಗಲ್ಲದ ಕಂದನ ನೆನಪು
ಯಮುನೆಯ ಜುಳುಜುಳು ಮನದ ತುಂಬ ತಳಮಳ
ಗೋಡೆ ತುಂಬ ಚಿತ್ತಾರದ ಮೋಡಿ ಮಹಲಿನ ತಾಜಾತನ
ಪ್ರೇಮ ವೈಭವ ! ಕಂಡು ಲೋಕ ನಿಬ್ಬೆರಗು
ಹೃದಯ ಸಾಮ್ರಾಜ್ಞಿ ಹೆತ್ತಿದ್ದು ಹತ್ತೋ
ಮೇಲೊಂದಿಷ್ಟೋ ಲೆಕ್ಕ ಇಟ್ಟವರಾರು ?
ತಾಯ್ತನಕ್ಕೆಷ್ಟು ಕೊಂಬುಗಳೋ !
ಮಟಮಟ ಮಧ್ಯಾಹ್ನವೇ ಬದುಕು ಮುಕ್ತಾಯ

ಕತೆಗೆ ರೆಕ್ಕೆಪುಕ್ಕ ಬಂದು ಹಾರಾಟ
ಈಗದು ನೆಲಕ್ಕಂಟಿದ ಇತಿಹಾಸ
ಪ್ರೇಮದ ಸಿಂಹಾಸನದಲ್ಲಿ ವಿರಾಜಮಾನ
ಶ್ವೇತಶಿಲೆಯ ಅಂಚಿನಲ್ಲಿ ಯಾವ ಗುರುತು
ಹಾಸಿನ ಸಂದಿಗೊಂದಿಗಳಲ್ಲಿ ನಿಟ್ಟುಸಿರು
ಚಿತ್ತಾರದ ಬಳ್ಳಿಗೆ ನಗುವಿನ ಲೇಪನ
ಯಮುನೆಯ ನೀರು ಕಪ್ಪು ಜೊತೆಗೆ
ಒಂದಿಷ್ಟು ಉಪ್ಪು

**ಡಾ॥ ಚಂದ್ರಮತಿ ಸೋಂದಾ**
೫೫೧, ೭ನೇ ಅಡ್ಡರಸ್ತೆ, ಹೆಬ್ಬಾಳ ೨ನೇ ಹಂತ
ಮೈಸೂರು – ೫೭೦೦೧೭



*(ಈ ತಿಂಗಳು : ೩ನೇ ಪುಟದಿಂದ)*

ಅನ್ಯಮಾರ್ಗಗಳನ್ನು ಅನುಸರಿಸಲಿದ್ದಾರೆ. ಅವುಗಳಲ್ಲೊಂದು ರಾಜಕೀಯ ಪ್ರವೇಶಿಸುವುದುದಾಗಿದೆ. ಈಶಾನ್ಯ ಭಾರತ, ಕಾಶ್ಮೀರ ಮುಂತಾದ ಕಡೆಗಳಲ್ಲಿ ಜಾರಿಯಲ್ಲಿರುವ ವಿಶೇಷ ಕಾಯಿದೆ ಜನಸಾಮಾನ್ಯರಲ್ಲಿ ಆಕ್ರೋಶ ಉಂಟುಮಾಡಿದೆ. ಭದ್ರತಾ ಸಿಬ್ಬಂದಿಯವರು ಅತಿರೇಕದಿಂದ ವರ್ತಿಸುತ್ತಿರುವುದೂ ಅದಕ್ಕೆ ಒಂದು ಕಾರಣ. ಒಂದು ಬಗೆಯ ಪ್ರತ್ಯೇಕತೆಯ ಭಾವ ಈ ಭಾಗದ ಜನರಲ್ಲಿ ಮೂಡಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಸರಕಾರ ಈ ಜನವಿರೋಧಿ ಕಾಯಿದೆಯನ್ನು ಆದಷ್ಟು ಶೀಘ್ರವಾಗಿ ರದ್ದುಗೊಳಿಸುವುದು ಸೂಕ್ತ.

✶ ✶ ✶

ಕಳೆದ ವರ್ಷ ಚೆನ್ನೈನಲ್ಲಿ ಸುರಿದ ಮಳೆ ಇಡೀ ನಗರವನ್ನು ಮುಳುಗಿಸಿತು. ಜನ ಪರದಾಡಬೇಕಾಯಿತು. ಈ ನಗರದಲ್ಲಿ ಮಳೆ ಸುರಿದರೆ ಜಗೋ ಎಂದು ವಾರಪೂರ್ತಿ ಸುರಿಯುತ್ತದೆ. ಆಗೆಲ್ಲ ಆಳೆತ್ತರದ ನೀರು ರಸ್ತೆಗಳಲ್ಲಿ ಹರಿಯುತ್ತದೆ. ಬೆಂಗಳೂರು ನಗರದಲ್ಲಿ ಮಳೆಗಾಲ ಪ್ರಾರಂಭವಾಯಿತು ಎಂದರೆ ಕೆಲವು ಪ್ರದೇಶಗಳು ಜಲಾವೃತವಾಗುತ್ತವೆ. ಇದು ಪ್ರತಿವರ್ಷ ಸಂಭವಿಸುತ್ತಿದ್ದರೂ ನಗರ ಪಾಲಿಕೆ ಮಾತ್ರ ತೂಕಡಿಸುತ್ತದೆ. ಈ ಸಲ ಬಿದ್ದ ಮಳೆಗೆ ನಗರದ ಹಲವು ಪ್ರದೇಶಗಳಲ್ಲಿ ಮನೆಗಳಿಗೆ ನೀರು ನುಗ್ಗಿ ಅನಾಹುತ ಉಂಟಾಯಿತು. ಸರಕಾರ, ನಗರ ಪಾಲಿಕೆ ಅಧಿಕಾರಿಗಳು ಎಚ್ಚೆತ್ತು ಇದಕ್ಕೆ ಕಾರಣ ರಾಜಕಾಲುವೆಗಳ ಒತ್ತುವರಿ ಎಂದು ಪತ್ತೆ ಮಾಡಿದರು. ಮುಖ್ಯಮಂತ್ರಿ ಸಿದ್ದರಾಮಯ್ಯ ಅಧಿಕಾರಿಗಳ ಸಭೆ ನಡೆಸಿ ರಾಜಕಾಲುವೆ ಒತ್ತುವರಿಯನ್ನು ನಿರ್ಮೂಲಗೊಳಿಸಲು ಫರ್ಮಾನ್ ಹೊರಡಿಸಿದರು. ಮೂರು ದಿನಗಳ ಕಾಲಾವಧಿ ನಿಗದಿಯನ್ನೂ ಮಾಡಿದರು. ರಾಜಕಾಲುವೆಗಳ ಹೂಳೆತ್ತುವ, ಕಸದ ರಾಶಿ ತೆಗೆಯುವ ಕಾರ್ಯವನ್ನು ಸಮರ್ಪಕವಾಗಿ ಮಳೆಗಾಲಕ್ಕೆ ಮುಂಚೆ ಮಾಡಿದ್ದರೆ ಇಂಥ ಪ್ರಶ್ನೆ ಉದ್ಭವಿಸುತ್ತಿರಲಿಲ್ಲ. ಮಳೆನೀರು ಸರಾಗವಾಗಿ ಹರಿದುಹೋಗುತ್ತಿತ್ತು.

ಈ ನಗರ ಪಾಲಿಕೆ ದಿಢೀರ್ ಎಂದು ರಾಜಕಾಲುವೆ ಒತ್ತುವರಿಯಾಗಿ ನಿರ್ಮಾಣಗೊಂಡಿರುವ ಕಟ್ಟಡಗಳನ್ನು ಒಡೆದುಹಾಕತೊಡಗಿತು. ಯಾವುದೇ ಮುನ್ಸೂಚನೆಯನ್ನು ನೀಡದೆ ಒತ್ತುವರಿ ನಿರ್ಮೂಲನದ ಕಾರ್ಯ ಈಗಲೂ ಮುಂದುವರಿಯುತ್ತಿದೆ. ಅಲ್ಲಿ ಮನೆ ಕಟ್ಟಿಕೊಂಡಿದ್ದವರ ಗೋಳು ಹೇಳತೀರದು. ಇಡೀ ಜೀವಿತಕಾಲದಲ್ಲಿ ಉಳಿತಾಯ ಮಾಡಿ ಕಟ್ಟಿಕೊಂಡಿದ್ದ ಮನೆಗಳು ಮಣ್ಣು ಪಾಲಾಗಿವೆ. ಕೆಲವು ಬಹುಮಹಡಿ ಕಟ್ಟಡಗಳೂ ಹೋದುವು ಈ ಅವಾಂತರದಲ್ಲಿ. ಬಿಲ್ಡರುಗಳು ಹಣ ಪಡೆದು ಕಾಲ್ಕಿತ್ತಿದ್ದಾರೆ, ಈಗ ಸಂಕಷ್ಟಕ್ಕೊಳಗಾಗಿರುವವರು ಮಧ್ಯಮ ವರ್ಗದ ಜನ. ಇವರೆಲ್ಲ ನಗರ ಪಾಲಿಕೆಯಿಂದ ಕಾನೂನುರೀತ್ಯ ಖಾತಾ, ಎಂದರೆ ಹಕ್ಕು ಪತ್ರ ಪಡೆದುಕೊಂಡಿದ್ದವರು ಮತ್ತು ಪ್ರತಿವರ್ಷವೂ ತಪ್ಪದೆ ಆಸ್ತಿ ತೆರಿಗೆ ಕೊಡುತ್ತಿದ್ದವರು. ಮುನ್ಸೂಚನೆ ನೀಡದೆ ಕಟ್ಟಡ ನೆಲಸಮ ಮಾಡುವುದಕ್ಕೆ ಕ್ರಮ ತೆಗೆದುಕೊಂಡದ್ದು ಆಸ್ತಿದಾರರು ನ್ಯಾಯಾಲಯದ ಮೆಟ್ಟಿಲೇರಬಹುದೆಂಬ ಭೀತಿ. ನಗರ ಪಾಲಿಕೆಯ ಭ್ರಷ್ಟ ಅಧಿಕಾರಿಗಳು ಲಂಚ ಸ್ವೀಕರಿಸಿ ನೀಡಿದ ಪರವಾನಗಿ ಈಗ ಜನಸಾಮಾನ್ಯರ ಕುತ್ತಿಗೆಗೆ ಬಂದಿದೆ. ಇದನ್ನು ಕೇಳುವವರು ಯಾರು ? ಮನೆಮಾರು ಕಳೆದುಕೊಂಡು ಬೀದಿಪಾಲಾಗಿರುವ ಜನರ ಗೋಳು ಹೇಳತೀರದು. ಕಟ್ಟಡ ಕಟ್ಟಲು ಪರವಾನಗಿ ನೀಡಿದ ಅಧಿಕಾರಿಗಳ ಪೈಕಿ ಹಲವರು ನಿವೃತ್ತರಾಗಿದ್ದಾರೆ. ಈಗ ನಗರ ಪಾಲಿಕೆ ಮತ್ತು ಸರಕಾರ ಕೆಲವು ಅಧಿಕಾರಿಗಳನ್ನು ಅಮಾನತುಗೊಳಿಸಿ ಕ್ರಮ ಕೈಗೊಂಡಿದೆ. ಆದರೆ ಅದರಿಂದ ಮನೆ ಕಳೆದುಕೊಂಡವರಿಗೆ ಪರಿಹಾರವೇನೂ ದೊರಕದು. ರಾಜಕಾಲುವೆ ಒತ್ತುವರಿಯಾಗಿ ಕಟ್ಟಡ ನಿರ್ಮಾಣ ಎಗ್ಗಿಲ್ಲದೆ ನಡೆದಿರುವುದಕ್ಕೆ ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಸರಕಾರವೇ ಹೊಣೆ. ಹಾಗಾಗಿ ಮನೆ ಕಳೆದುಕೊಂಡಿರುವ ಜನಸಾಮಾನ್ಯರಿಗೆ ಪರಿಹಾರ ನೀಡುವುದೂ ಅವರದೇ ಹೊಣೆ.

✶ ✶ ✶

ಬ್ರೆಜಿಲ್‌ನ ರಿಯೋಡಿ ಜನ್ಯೆರೋದಲ್ಲಿ ನಡೆಯುತ್ತಿರುವ ೨೦೧೬ರ ಒಲಿಂಪಿಕ್ಸ್ ಪಂದ್ಯಗಳಲ್ಲಿ ಭಾರತಕ್ಕೆ ಈವರೆಗೆ ಯಾವ ಪದಕವೂ ದೊರಕದೆ ನಿರಾಶೆ ಉಂಟಾಗಿದೆ ಕ್ರೀಡಾಭಿಮಾನಿಗಳಲ್ಲಿ. ಇದಕ್ಕೆ ಯಾರು ಹೊಣೆಗಾರರು ಎಂದು ದೂಷಿಸಿ ಪ್ರಯೋಜನವಾಗದು. ನಮ್ಮ ಕ್ರೀಡಾನೀತಿ ಹಾಗೂ ವ್ಯವಸ್ಥೆಯೇ ಪ್ರಧಾನ ಕಾರಣ ಎಂದು ಹೇಳಬಹುದು. ಹಿಂದೆ ಮಾಸ್ಕೋದಲ್ಲಿ ಜರುಗಿದ ಒಲಿಂಪಿಕ್ಸ್‌ನಲ್ಲಿ ಹಲವು ದೇಶಗಳು ಭಾಗವಹಿಸದೇ ಹೋದ್ದರಿಂದ ಭಾರತಕ್ಕೆ ಹೆಚ್ಚು ಪದಕಗಳು ಬಂದಿದ್ದುವು. ಅನಂತರದ ಒಲಿಂಪಿಕ್ಸ್‌ನಲ್ಲಿ ನಮ್ಮ ದೇಶದ ಪ್ರದರ್ಶನ ಅಷ್ಟೇನೂ ತೃಪ್ತಿಕರವಾಗಿರಲಿಲ್ಲ, ಒಂದೆರಡು ಪದಕಗಳನ್ನು ಬಿಟ್ಟರೆ. ಕ್ರೀಡೆಯಲ್ಲಿ ನಾವು ಎಷ್ಟು ಹಿಂದೆ ಇದ್ದೇವೆ ಎನ್ನುವುದನ್ನು ಅದು ತೋರಿಸುತ್ತದೆ.

ಈ ಒಲಿಂಪಿಕ್ಸ್ ಪಂದ್ಯಗಳಲ್ಲಿ ಭಾಗವಹಿಸಲು ಭಾರತ ದೊಡ್ಡ ತಂಡವನ್ನೇ ಕಳಿಸಿದೆ. ೧೨೨ ಮಂದಿ ಕ್ರೀಡಾಪಟುಗಳು ಬೇರೆ ಬೇರೆ ಕ್ರೀಡೆಗಳಲ್ಲಿ ಭಾಗವಹಿಸಿದ್ದಾರೆ. ಹಲವು ತಿಂಗಳುಗಳು ಅಭ್ಯಾಸ ಮಾಡಿದ್ದರು ಕ್ರೀಡಾಪಟುಗಳು. ಆದರೂ ಸಫಲವಾಗಲಿಲ್ಲ. ಭಾರತದ ಕಳಪೆ ಸಾಧನೆಗೆ ಹಲವು ಕಾರಣಗಳಿವೆ. ನಮ್ಮ ದೇಶದಲ್ಲಿ ಕ್ರಿಕೆಟ್ಟಿಗೆ ಇರುವ ಪ್ರಾಧಾನ್ಯ, ಹಣ ಎರಡೂ ಇತರ ಕ್ರೀಡೆಗಳಿಗೆ ಲಭ್ಯ ಇಲ್ಲದಿರುವುದು ಎದ್ದು ಕಾಣುವಂಥದ್ದು. ಇನ್ನೊಂದು, ಕ್ರೀಡಾ ವ್ಯವಸ್ಥೆಯಲ್ಲಿ ಬೇರೂರಿರುವ ರಾಜಕೀಯ. ಇತರ ಎಲ್ಲ ಕ್ಷೇತ್ರಗಳಲ್ಲಿನಂತೆಯೇ ಕ್ರೀಡಾ ಪ್ರಪಂಚದಲ್ಲೂ ಇರುವ ಅವ್ಯವಸ್ಥೆ ಮತ್ತು ಭ್ರಷ್ಟತೆ. ಸರಕಾರ ಈಗಲಾದರೂ ಎಚ್ಚೆತ್ತು ಸೂಕ್ತಕ್ರಮ ಕೈಗೊಳ್ಳದೇ ಹೋದಲ್ಲಿ ಒಲಿಂಪಿಕ್ಸ್‌ನಲ್ಲಿ ಶೂನ್ಯ ಸಂಪಾದನೆಯೇ ಆಗುತ್ತದೆ.

ಒಲಿಂಪಿಕ್ಸ್‌ನಲ್ಲಿ ಪದಕ ಗಳಿಸಿ ಸುದ್ದಿ ಮಾಡದಿದ್ದರೂ ಕ್ರೀಡಾ ಸಚಿವರು ಮತ್ತು ಅವರ ಸಿಬ್ಬಂದಿ ಸುದ್ದಿ ಮಾಡಿದರು. ಪ್ರತಿಸಲ ಒಲಿಂಪಿಕ್ಸ್‌ಗೆ ಕ್ರೀಡಾಪಟುಗಳಿಗಿಂತ, ಅಧಿಕಾರಿಗಳದ್ದೇ ಹೆಚ್ಚು ಕಾರುಬಾರು. ಅವರ ಸಂಖ್ಯೆಯೂ ದೊಡ್ಡದಾಗೇ ಇರುತ್ತದೆ. ಕ್ರೀಡಾ ಸಚಿವರು ಅಕ್ರಮವಾಗಿ ಕ್ರೀಡಾ ಮೈದಾನದಲ್ಲಿ ಪ್ರವೇಶಿಸಿ ಪೇಚಿಗೆ ಸಿಕ್ಕಿಕೊಂಡರು. ಅವರನ್ನನುಸರಿಸಿ ಅಧಿಕಾರಿಗಳು ತೋರಿದ ಅತ್ಯುತ್ಸಾಹ, ಒಲಿಂಪಿಕ್ಸ್ ಸಮಿತಿಯ ಕೆಂಗಣ್ಣಿಗೆ ಗುರಿಯಾಯಿತು. ಸಮಿತಿ ಸಚಿವರಿಗೆ ಬರೆದಿರುವ ಪತ್ರದಲ್ಲಿ ಮುಂದೆ ಇಂಥ ಪ್ರಕರಣಕ್ಕೆ ಅವಕಾಶ ನೀಡಿದರೆ ನೀಡಿರುವ ಪರವಾನಗಿ ರದ್ದುಗೊಳಿಸುವುದಾಗಿ ಎಚ್ಚರಿಸಿತು. ಈ ಪ್ರಕರಣ ನಮ್ಮ ಸುದ್ದಿವಾಹಿನಿಗಳಿಗೆ ಒಳ್ಳೆಯ ಮಸಾಲೆ ಒದಗಿಸಿತು. ಆದರೆ ಸಚಿವರು ಮಾತ್ರ ಏನೂ ಆಗಿಲ್ಲವೆಂಬಂತೆ ರಿಯೋಡಿ ಜನ್ಯೆರೋದಲ್ಲೇ ಉಳಿದುಕೊಂಡಿದ್ದಾರೆ.

✶ ✶ ✶

ನರಗುಂದ ಮತ್ತು ನವಲಗುಂದ ನಮ್ಮ ರಾಜ್ಯದ ಇತಿಹಾಸದಲ್ಲಿ ಮಹತ್ವದ ಸ್ಥಾನ ಪಡೆದಿವೆ. ಮುಖ್ಯಮಂತ್ರಿ ಗುಂಡೂರಾವ್ ಕಾಲದಲ್ಲಿ ನಡೆದ ಬೃಹತ್ ರೈತ ಪ್ರತಿಭಟನೆಗೆ ನರಗುಂದವೇ ಮೂಲಸೆಲೆ. ಅದಕ್ಕೂ ಮುಂಚೆ ಬ್ರಿಟಿಷರ ವಿರುದ್ಧದ ಹೋರಾಟದಲ್ಲೂ ನರಗುಂದದ ಬಂಡಾಯ ಪ್ರಸಿದ್ಧವಾದ್ದು. ಈಚಿನ ದಿನಗಳಲ್ಲಿ ಮಹಾದಾಯಿ ನೀರಿಗಾಗಿ ನಡೆಯುತ್ತಿರುವ ಹೋರಾಟದಲ್ಲಿ ನರಗುಂದ–ನವಲಗುಂದ ಪ್ರಧಾನ ಪಾತ್ರವನ್ನು ನಿರ್ವಹಿಸುತ್ತಾ ಬಂದಿವೆ. ಈ ಪರಂಪರೆಯಲ್ಲಿ ರೈತಾಪಿಗಳ ಶ್ರೇಯೋಗಾಥೆ ಒಂದು ಕಡೆಗಾದರೆ ಜನರ ಮರ್ದನದ ಪೈಶಾಚಿಕತೆ ಇನ್ನೊಂದು ಕಡೆಯಲ್ಲಿದೆ. ಅಂದು ನರಗುಂದದಲ್ಲಿ ಗುಂಡಿಕ್ಕಿ ರೈತನನ್ನು ಕೊಲ್ಲಲಾಗಿತ್ತು, ಇಂದು ಇಡೀ ಊರನ್ನು ಧ್ವಂಸಗೊಳಿಸುವ ಕರಾಳ ನರ್ತನವನ್ನು ಸರ್ಕಾರದ ಪೊಲೀಸ್ ಪಡೆ ಅತಿ ಗರ್ವದಿಂದ ನಡೆಸಿದೆ. ಯಮನೂರಿಗೆ ಯಮನೋಪಾದಿಯಲ್ಲಿ ಎರಗಿದ ಪೊಲೀಸ್ ಪಡೆಗೆ ಮತ್ತು ಅರೇಕುರಹಟ್ಟಿ ಹಾಗೂ ಅಳಗವಾಡಿಗಳಲ್ಲಿ ಅಮಾನವೀಯ ಕ್ರೌರ್ಯವನ್ನು ಪ್ರದರ್ಶಿಸಿದ ಪ್ರಭುತ್ವದ ದೈತ್ಯ ಶಕ್ತಿಗೆ ಪ್ರೇರಣೆ ಮತ್ತು ಕುಮ್ಮಕ್ಕು ಯಾವ ವಲಯದಿಂದ ಬಂದಿತೆಂಬುದನ್ನು ತನಿಖೆ ಮಾಡಬೇಕು. ಮೇಲಿನ ಪೊಲೀಸ್ ಅಧಿಕಾರಿಗಳ ಆಜ್ಞೆಯ ಜೊತೆಯಲ್ಲಿ ಯಾವುದಾದರೂ ಪ್ರಬಲ ರಾಜಕೀಯ ಪಕ್ಷವು ತನ್ನ ಬೇಳೆ ಬೇಯಿಸಿಕೊಳ್ಳುವ ಪ್ರಯತ್ನವನ್ನು ಸೇರಿಸಿಬಿಟ್ಟಿತೆ ? ಏಟು ತಿಂದು ಜೈಲುಗಳಿಗೆ ಹೋದವರನ್ನು ಬಿಡುಗಡೆಗೊಳಿಸಲು ಕಾನೂನಿನ ತಾಂತ್ರಿಕತೆಗಳು ಅಡ್ಡಿಯಾಗಿವೆಯೆಂದು ಸರ್ಕಾರ ಹೇಳಿದೆ. ಆ ತಾಂತ್ರಿಕತೆಗಳನ್ನು ಎಷ್ಟು ಕಾಲ ನಡೆಸಬೇಕು ? ತ್ವರಿತ ಗತಿಯಲ್ಲಿ ಒಂದೆರಡು ದಿನಗಳಲ್ಲಿ ಅವನ್ನು ಪೂರೈಸಲಾಗದೆ ಈ ಸರ್ಕಾರಕ್ಕೆ ? ಮೂರು ಪಕ್ಷಗಳ ರಾಜಕೀಯ ಚದುರಂಗದಾಟದಲ್ಲಿ ನವಲಗುಂದದ ಬಳಿಯ ಎರಡು ಹಳ್ಳಿಗಳ ಜನ ಹೊಸಕಿಹಾಕಲ್ಪಟ್ಟಿದ್ದಾರೆ. ಎಂದೂ ಮತ್ತು ಎಲ್ಲೂ ನಡೆಯದಿದ್ದಂತಹ ವಿಧ್ವಂಸಕ ಕೃತ್ಯಗಳನ್ನು ಈ ಹಳ್ಳಿಗಳಲ್ಲಿ ಮಾಡಲಾಗಿರಲಿಲ್ಲ. ಪೀಠೋಪಕರಣಗಳು ಮತ್ತು ಒಂದೆರಡು ಗಣಕಯಂತ್ರಗಳು ನುಚ್ಚುನೂರಾಗಿದ್ದರೆ ಅದಕ್ಕೆ ಪ್ರತೀಕಾರವು ಹಳ್ಳಿಗಳ ಸಾವಿರ ಹೃದಯಗಳನ್ನು ನುಚ್ಚುನೂರುಗೊಳಿಸುವುದಲ್ಲ. ಇಷ್ಟು ಸರಳ ವಿಚಾರವು ಗೃಹಮಂತ್ರಿ ಮತ್ತು ಮುಖ್ಯಮಂತ್ರಿಗಳಿಗೆ ತಿಳಿಯುವುದಿಲ್ಲವೇಕೆ ? ಅಥವಾ, ಪ್ರತಿಪಕ್ಷಗಳ ಕುತಂತ್ರದಿಂದಾಗಿಯೇ ಆ ಹಳ್ಳಿಗಳಲ್ಲಿ ಜನರು ತೀವ್ರವಾಗಿ ಪ್ರತಿಭಟಿಸಿದರೆಂದು ಭಾವಿಸಿ ಅವರ ಮೇಲೆ ಸೇಡುತೀರಿಸಿಕೊಳ್ಳುವ ಹುನ್ನಾರವೋ ? ಸೆಪ್ಟೆಂಬರ್‌ನ 'ಹೊಸತು' ಹೊರಬರುವ ವೇಳೆಗೆ ಕಾರಾಗೃಹಗಳಲ್ಲಿರುವ ಎಲ್ಲ

ಹಳ್ಳಿಗಳ ಜನರೂ ಹೊರಬಂದಿರುತ್ತಾರೆಂಬ ಆಸೆ ನಮ್ಮದು. ಅವರೆಲ್ಲರ ಮೇಲಿನ ಮೊಕದ್ದಮೆಗಳನ್ನೂ ಸರ್ಕಾರವು ಆ ವೇಳೆಗೆ ರದ್ದುಗೊಳಿಸಬೇಕು. ಪ್ರತ್ಯೇಕವಾಗಿ ಅದಕ್ಕೆಂದೇ ಸಂಪುಟದ ಸಭೆಯೊಂದನ್ನು ನಡೆಸಲು ಮುಖ್ಯಮಂತ್ರಿ ಮುಂದಾಗಬೇಕು.

ಈ ಹಳ್ಳಿಗಳಲ್ಲಿ ಪೊಲೀಸರು ಎಸಗಿದ ದೌರ್ಜನ್ಯವನ್ನು ಖಂಡಿಸುತ್ತಾ ಮಾಜಿ ಮುಖ್ಯಮಂತ್ರಿ ಎಚ್. ಡಿ. ಕುಮಾರಸ್ವಾಮಿಯವರು ಹೇಳಿದ್ದಾರೆ, "ಇಂತಹ ವಿಕೃತ ದೌರ್ಜನ್ಯವು ನಮ್ಮ ರಾಜ್ಯದಲ್ಲಿ ಹಿಂದೆಂದೂ ನಡೆದಿರಲಿಲ್ಲ" ಎಂದು. ಈ ಮಾತು ಅಪ್ಪಟ ಸುಳ್ಳು, ಏಕೆಂದರೆ ಕುಮಾರಣ್ಣನವರ ತಂದೆ ಪ್ರಧಾನಿಯಾಗಿದ್ದಾಗ, ಕುಮಾರಣ್ಣನವರ ಅಣ್ಣ ರೇವಣ್ಣನವರು ರಾಜ್ಯದ ಒಬ್ಬ ಸಚಿವರಾಗಿದ್ದಾಗ, ಚನ್ನರಾಯಪಟ್ಟಣದ ಬಳಿ ಇರುವ ಬಾಗೂರು–ನವಿಲೆ ಗ್ರಾಮಗಳಲ್ಲಿ ಇದಕ್ಕೆ ಸಮನಾದ, ಇಲ್ಲವೇ ಇದನ್ನು ಮೀರಿಸಿದ್ದ, ಹಲ್ಲೆ ನಡೆದಿದ್ದುದು ರಾಜ್ಯದ ಜನರ ಸ್ಮೃತಿಯಲ್ಲಿ ಉಳಿದಿದೆ. ಬಾಗೂರು–ನವಿಲೆ ರೈತ ಸಮುದಾಯದ ನಾಯಕರೊಬ್ಬರ ಹತ್ಯೆಗೆ ಸಹ ಸಂಚು ಹೂಡಲಾಗಿತ್ತು. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ವಿಶೇಷ ಪ್ರತಿನಿಧಿಯನ್ನು ತನಿಖೆಗಾಗಿ ಈ ಹಳ್ಳಿಗಳಿಗೆ ಕಳಿಸಿತ್ತು. ಆ ಪ್ರತಿನಿಧಿಯೊಡನೆ ಹಳ್ಳಿಗಳಿಗೆ ಜಿ. ರಾಮಕೃಷ್ಣ ಮತ್ತು ಇತರರು ತೆರಳಿದ್ದರು. ತನಿಖೆಗೆ ಬಂದಿದ್ದವರು ಮಾನವ ಹಕ್ಕು ಆಯೋಗದ ಪೊಲೀಸ್ ಕಮಿಷನರ್ ಒಬ್ಬರು. ಅವರು ನೀಡಿದ ವರದಿಯನ್ನು ಅಂದಿನ ಸರ್ಕಾರ ಪ್ರಕಟಿಸಲಿಲ್ಲ, ಆದರೆ ರಾಷ್ಟ್ರೀಯ ಆಯೋಗದಿಂದ ವರದಿಯ ಒಂದು ಪ್ರತಿಯನ್ನು ಪಡೆದು ರೈತ ಹೋರಾಟಗಾರರೇ ಪ್ರಕಟಿಸಿದರು. ಮಾನ್ಯ ಕುಮಾರಣ್ಣನವರು ಈಗಲಾದರೂ ಆ ವರದಿಯನ್ನು ಪಡೆದು ಅಧಿಕೃತವಾಗಿ ಪ್ರಕಟಿಸಿದರೆ ಯಮಲೂರಿನ ಸೋದರ–ಸೋದರಿಯರಿಗೆ ಒಂದು ಹಾದಿ ತೋರಿಸಿದಂತಾಗುತ್ತದೆ.

✳ ✳ ✳

ಓದಲೇಬೇಕಿಲ್ಲದ ಕೆಲವು ಲೇಖನಗಳನ್ನು ಪತ್ರಿಕೆಗಳಲ್ಲಿ ಮತ್ತು ನಿಯತಕಾಲಿಕೆಗಳಲ್ಲಿ ಆಗಾಗ್ಗೆ ಪ್ರಕಟಿಸುವ ತಥಾಕಥಿತ ಧೀಮಂತ ಮಹಿಳೆ ಶೋಭಾ ಡೇ ಹೆಸರು ಕೇಳಿದ್ದೀರಲ್ಲವೆ? ಪ್ರತಿಷ್ಠಿತ ಸಾಮಾಜಿಕ ವಲಯಗಳಲ್ಲಿ ಕಾಣಿಸಿಕೊಳ್ಳುವಾಗ ಸುಂದರ ಮಹಿಳೆಯರು ಹೇಗೆ ಅಲಂಕರಿಸಿಕೊಳ್ಳಬೇಕು, ಎಂಥ ಉಡುಪು ಧರಿಸಬೇಕು ಅಥವಾ ಧರಿಸಬಾರದು, ಎಷ್ಟು ಮತ್ತು ಹೇಗೆ ವ್ಯಾಕ್ಸ್ ಪೂಸಿಸಿಕೊಳ್ಳಬೇಕು, ಉಗುರುಗಳಿಗೆ ಎಂತಹ ಮೆರುಗು ಕೊಡಬೇಕು, ಇತ್ಯಾದಿ "ಅತಿಮುಖ್ಯ" ವಿಷಯಗಳನ್ನು ಕುರಿತು ಪರಿಣತ ನಿರ್ದೇಶನ ನೀಡುವುದರಲ್ಲಿ ಈಕೆ ಪ್ರತಿಭಾವಂತೆ ಎಂದು ಕೇಳಿಬರುತ್ತದೆ. ಒಬ್ಬ ಕೋಟ್ಯಾಧೀಶನ ಪತ್ನಿಯಾಗಿ ಈಕೆ ಸೌಂದರ್ಯವರ್ಧಕಗಳನ್ನು ಮನಬಂದಂತೆ ಕೊಳ್ಳಲು ಶಕ್ತರು. "ರೋಚಕವಾಗಿ ಮತ್ತು ರಾಜಾರೋಷವಾಗಿ ಬರೆಯುತ್ತಾರೆ" ಎಂಬ ಹೆಗ್ಗಳಿಕೆ ಈಕೆಗಿದೆಯಂತೆ. ಕೆಲವರು ಸಕಾರಣವಾಗಿ ಈಕೆಯನ್ನು "ರಂಜಕ ಮೋಹಿನಿ" ಎಂದು ಬಣ್ಣಿಸಿದ್ದಾರೆ. ಬೇಕಾಬಿಟ್ಟಿಯಾಗಿ ಎಲ್ಲರನ್ನೂ ಹಂಗಿಸುವುದು ಆಕೆಯ ರೂಢಿ. ಆಕೆ ಬರೆದುದನ್ನು ಓದಿ ಲೊಚಕೆ ಹೊಡೆಯುವವರು ಬೇಕಾದಷ್ಟು ಮಂದಿ ಇದ್ದಾರೆ ಎನ್ನಲಾಗಿದೆ. "ನೊಬೆಲ್ ಪ್ರಶಸ್ತಿ ಪಡೆದಿಲ್ಲದಿರುವುದರಿಂದ ಆಕೆಯನ್ನು ಲೇಖಕಿಯೆಂದು ಮಾನ್ಯಮಾಡಲಾಗದು" ಎಂದು ಯಾರೂ ಹೇಳಿಲ್ಲ. ಆದರೆ ದುರಹಂಕಾರ ಮತ್ತು ಬಾಲಿಶತನಗಳೆರಡನ್ನೂ ತುಂಬಿಕೊಂಡಿರುವ ಶೋಭಾ ನಮ್ಮ ಒಲಿಂಪಿಕ್ಸ್ ಕ್ರೀಡಾಪಟುಗಳ ಬಗ್ಗೆ ಬಹಳ ಹಗುರವಾಗಿ ಮಾತನಾಡಿದ್ದಾರೆ. ಪದಕಗಳನ್ನು ಪಡೆಯಲಿಲ್ಲವೆಂದು ಅವರಿಗೆ ಅಸಮಾಧಾನ, ಆದ್ದರಿಂದ ಆರೋಪ ಹೊರಿಸಿದ್ದಾರೆ: "ಇವರು ವಿಮಾನವೇರಿ (ಪ್ರವಾಸಿಗರಂತೆ) ಹೋದರು, ಅಲ್ಲೆಲ್ಲಾ ಅಡ್ಡಾಡಿದರು, ಒಂದಷ್ಟು ಸ್ವಂತೀ ಛಾಯಾಚಿತ್ರಗಳನ್ನು (ಸೆಲ್ಫಿ) ತೆಗೆದುಕೊಂಡರು; ಸರಿ, ಆಮೇಲೆ ಮನೆಗೆ ಬರುತ್ತಾರೆ." ದೇಶದ ಪ್ರಧಾನಿ ಹೋದೆಡೆಯೆಲ್ಲಾ ಸ್ವಂತೀ ತೆಗೆದುಕೊಳ್ಳುವಂತೆ ಶೋಭಾ ಸಹ ತೆಗೆದುಕೊಳ್ಳುತ್ತಾರೇನೊ, ಅದನ್ನು ಕಟ್ಟಿಕೊಂಡು ನಮಗೇನಾಗಬೇಕು! ತಮ್ಮ ಕ್ಷೇತ್ರದಲ್ಲಿ ಶೋಭಾ ಗಳಿಸಿರುವ ಶ್ರೇಯಸ್ಸಿಗಿಂತ ಕಳಪೆಯಲ್ಲದ ಶ್ರೇಯಸ್ಸನ್ನು ಕ್ರೀಡಾಪಟುಗಳು ಗಳಿಸಿದ್ದಾರೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಪರ್ಧಿಸಲು ಹತ್ತು ಕಾಸು ಬಿಸಾಡಿ ಇವರಾರೂ ಆಯ್ಕೆಗೊಂಡಿಲ್ಲ. ಬೇರೆಷ್ಟೋ ದೇಶಗಳ ಕ್ರೀಡಾಪಟುಗಳಿಗಿರುವ ಸೌಲಭ್ಯ, ಹಣ, ಪರಿಣತರಿಂದ ತರಬೇತಿ, ಉನ್ನತ ಮಟ್ಟದ ಸ್ಪರ್ಧಾವಕಾಶ, ಇತ್ಯಾದಿ ಇಲ್ಲದೆಯೂ ಇವರೆಲ್ಲಾ ಒಂದು ಹಂತವನ್ನು ಮುಟ್ಟಿದ್ದಾರೆ. ಪದಕ ಪಡೆಯಲಾಗದಿದ್ದರೆ ಏನು ಮಾಡಬೇಕು? ಅದನ್ನು ಪಡೆಯುವ ಸಾಮರ್ಥ್ಯ ಹೆಚ್ಚುವಂತೆ ಸೌಲಭ್ಯಗಳನ್ನು ಕಲ್ಪಿಸಬೇಕು, ಕ್ರೀಡಾಧಿಕಾರಿಗಳ ಪಿಡುಗನ್ನು ತಡೆಯಬೇಕು, ಸಮರ್ಥರನ್ನು ಚಿಕ್ಕ ವಯಸ್ಸಿನಲ್ಲೇ ಗುರುತಿಸಿ ವಿಶೇಷ ತರಬೇತಿ ನೀಡಬೇಕು. ರಿಯೋಗೆ ತೆರಳಿರುವವರೆಲ್ಲಾ ಅರ್ಹರೆಂದು ಇದರರ್ಥವಲ್ಲ; ನಮ್ಮಲ್ಲಿರುವ ಕ್ರೀಡಾಪಟುಗಳಲ್ಲಿ ಉತ್ತಮವೆನಿಸಿದವರು ಆಯ್ಕೆಯಾಗಿದ್ದಾರೆ. ಆಯ್ಕೆಯಲ್ಲಿ ಮೋಸವಿದ್ದರೆ ಶೋಭಾ ಅದನ್ನು ಮೊದಲೇ ಎತ್ತಿ ಹೇಳಬಹುದಿತ್ತು. ಅದನ್ನು ಬಿಟ್ಟು ಈಕೆ ಕ್ರೀಡಾಪಟುಗಳ ಮುಖದ ಮೇಲೆ ತಣ್ಣೀರೆರಚುವ ಕುತ್ಸಿತ ಕಾರ್ಯದಲ್ಲಿ ತೊಡಗಿದ್ದಾರೆ. ಸಚಿನ್ ತೆಂಡುಲ್ಕರ್, ಸಲ್ಮಾನ್ ಖಾನ್ ಅಂಥವರನ್ನು "ಒಲಿಂಪಿಕ್ಸ್ ರಾಯಭಾರಿ"ಗಳನ್ನಾಗಿ ಆಯ್ಕೆ ಮಾಡಿದಾಗ ಶೋಭಾ ಏನೂ ಹೇಳಲಿಲ್ಲ. ನಮಗೆ ಬೇಕಾದ್ದು ಖಾನ್‌ನಂತಹ ಅನೀತಿಯುತ ವ್ಯಕ್ತಿಯ ಬೆಂಬಲವಲ್ಲ. ಬದಲಾಗಿ, ವಸ್ತುನಿಷ್ಠವಾದ ವಿಶ್ಲೇಷಣೆ ನೀಡಿ ಉತ್ತಮ ಕ್ರೀಡಾಪಟುಗಳನ್ನು ಮಾತ್ರವೇ ಒಲಿಂಪಿಕ್ಸ್‌ಗೆ ಕಳಿಸುವ ಪದ್ಧತಿ. "ದಿ ಹಿಂದು" ಪತ್ರಿಕೆಯಲ್ಲಿ ನಿರ್ಮಲ್ ಶೇಖರ್ ಎಂಬಾತ ಪುಟಗಟ್ಟಲೆ ಕ್ರೀಡೆಗಳ ಬಗ್ಗೆ ಬರೆಯುತ್ತಾನೆ. ಅದರಲ್ಲಿರುವುದು ಬಹಳಷ್ಟು ಕಗ್ಗ. ಅಂಥವರ ಮಾಪನದಿಂದ, ಸಲಹೆಗಳಿಂದ, ಏನೂ ಪ್ರಯೋಜನವಿಲ್ಲ. ತೆಂಡುಲ್ಕರ್ ಎಂತಹ ಕ್ರೀಡಾಪಟುವೆಂದರೆ ವಿದೇಶದಿಂದ ಬಹಳ ದುಬಾರಿಯಾದ ಕಾರನ್ನು ಕೊಂಡುತಂದು ತೆರಿಗೆ ವಿನಾಯಿತಿಗಾಗಿ ಹಲ್ಲುಗಿಂಜಿ ಕೂತವನು. ಅಂಥವರ ಪ್ರೋತ್ಸಾಹವು ಎಂತಹ ಉತ್ಸಾಹ ನೀಡೀತು! ಶಾಲಾ–ಕಾಲೇಜುಗಳಲ್ಲಿ ಮಕ್ಕಳ ಕ್ರೀಡಾ ಗೀಳನ್ನು ಗುರುತಿಸಿ ತರಬೇತಿ ನೀಡುವುದು ಉತ್ತಮ ಪರ್ಯಾಯ. ಶೋಭಾಗೆ ಇಂತಹ ದೃಷ್ಟಿಯಿಲ್ಲ. ತಾನು ದೊಡ್ಡವಳಾದ್ದರಿಂದ ಏನು ಬೇಕಾದರೂ ಹೇಳಬಹುದೆಂಬ ಮೂರ್ಖತನ ಇರಿಸಿಕೊಳ್ಳಲಿ, ಅದನ್ನು ನಾವು ಕಿತ್ತುಕೊಳ್ಳಲಾರೆವು.

✳ ✳ ✳

ಪ್ರಧಾನಿ ಮತ್ತು ಸಚಿವ ವೆಂಕಯ್ಯ ನಾಯಿಡು ಪದೇಪದೇ ಹೇಳುತ್ತಿದ್ದಾರೆ, "ದಲಿತರ ಮೇಲಿನ ದೌರ್ಜನ್ಯವನ್ನು ರಾಜಕೀಯಗೊಳಿಸಬೇಡಿ," ಎಂದು. ಹಾಗೆಂದರೇನು? ಗುಜರಾತಿನ ಊನಾದಲ್ಲಿ ದಲಿತರನ್ನು ಥಳಿಸಿದಾಗ ರಾಜಕೀಯ ಪಕ್ಷಗಳು ಸರ್ಕಾರಕ್ಕೆ ಶಾಭಾಸ್‌ಗಿರಿ ನೀಡಬೇಕೇನು? ಜನರ ಮರ್ದನವನ್ನು ಸಾರ್ವಜನಿಕವಾಗಿ ಖಂಡಿಸಿ ವಿರೋಧಿಸುವುದು ರಾಜಕೀಯವೆಂದಾದರೆ ನಮಗಿಂದು ಇನ್ನೂ ಹೆಚ್ಚಾಗಿ ಬೇಕು. ಊನಾದಲ್ಲಿ ನಡೆದಿದ್ದನ್ನು "ಹೊಸತು" ಖಂಡಿಸುತ್ತದೆ. ಅದನ್ನು 'ರಾಜಕೀಯ'ವೆಂದು ಮೂದಲಿಸಬೇಕೋ ಅಥವಾ ಸಾರ್ವಜನಿಕರ ಒಂದು ವಿಭಾಗದ ಪ್ರತಿಕ್ರಿಯೆಯೆಂದು ಸ್ವೀಕರಿಸಬೇಕೊ?

✳ ✳ ✳

ಭಾರತೀಯ ಜನತಾ ಪಕ್ಷದ ಪ್ರತಿನಿಧಿ ವಾಲಾ ರಾಜ್ಯಪಾಲರಾಗಿ ತಮ್ಮ ಪಕ್ಷದ ನಾಯಕರ ಅಪೇಕ್ಷೆಗಳನ್ನು ಪೂರೈಸುತ್ತಾರೆ. ಶಾಮಭಟ್ ಎಂಬುವರನ್ನು ಲೋಕಸೇವಾ ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಿರುವುದು ಅದಕ್ಕೊಂದು ನಿದರ್ಶನ. ಲಂಚ ಪಡೆದು ಕೆಲವರನ್ನು ಆಯ್ಕೆ ಮಾಡುವುದು, ಕೇಂದ್ರಾಡಳಿತದಲ್ಲಿರುವ ಪಕ್ಷದ ಸಲಹೆಯಂತೆ ಮಿಕ್ಕವರನ್ನು ನೇಮಿಸುವುದು. – ಇದು ನಮ್ಮ ಪಬ್ಲಿಕ್ ಸರ್ವೀಸ್ ಕಮಿಷನ್ನಿನ ಸದ್ಯದ ಭವಿಷ್ಯದಲ್ಲಿ ಕಾಣಲಿರುವ ಕಾರ್ಯವೈಖರಿ. ಶಾಮಭಟ್ ಹೆಸರನ್ನು ಸೂಚಿಸಲು ಮುಖ್ಯಮಂತ್ರಿಗಳಿಗೆ ಅದೇನು ಒತ್ತಡವಿತ್ತು? ತಮ್ಮ (ಅ) ವ್ಯವಹಾರಗಳು ಶಾಮಭಟ್‌ಗೆ ತಿಳಿದಿದ್ದುದೇನಾದರೂ ಕಾರಣವೋ ಏನೋ! ಒಟ್ಟಿನಲ್ಲಿ, ಅನರ್ಹನಾದ ವ್ಯಕ್ತಿಗೆ ನಮ್ಮ ರಾಜ್ಯದ ಅಧಿಕಾರಿಗಳನ್ನು ನೇಮಿಸುವ ಜವಾಬ್ದಾರಿ ವಹಿಸಲಾಗಿದೆ. ಹಣದ ಹೊಳೆ ಯಾವಯಾವ ದಿಕ್ಕುಗಳಲ್ಲಿ ಹರಿಯುತ್ತದೋ ಕಾದುನೋಡೋಣ. 

ಶ್ರೀಮತಿ ಯು. ಎಸ್. ಪಾರ್ವತಿ ಅವರು ತಮ್ಮ ತಾಯಿ ದಿ॥ ಯು. ಸಾಕಮ್ಮನವರ ಜ್ಞಾಪಕಾರ್ಥ 'ಹೊಸತು'ವಿನಲ್ಲಿ ಪ್ರಕಟವಾಗುವ ಮಹಿಳೆಯರ ಕುರಿತ ಆಯ್ದ ಉತ್ತಮ ಕತೆ/ಲೇಖನಗಳಿಗೆ ತಲಾ ರೂ. ೨,೦೦೦/– ಬಹುಮಾನ ನೀಡುತ್ತಿದ್ದಾರೆ. ಅದರಂತೆ, ೨೦೧೪–೧೫ರ ಸಾಲಿನಲ್ಲಿ (೧) ಶ್ರೀಮತಿ ರೂಪ ಹಾಸನ ಅವರ ಲೇಖನ **ಅವಳ ಅವ್ಯಕ್ತ ಅಭಿವ್ಯಕ್ತಿ ಸ್ವಾತಂತ್ರ್ಯ** (ಪ್ರ.: ನವೆಂಬರ್ ೨೦೧೪), (೨) ಶ್ರೀ ಸದಾಶಿವ ಮರ್ಜಿ ಅವರ ಲೇಖನ **ಆಧುನಿಕ ಭಾರತದ ಪ್ರಥಮ ಶಿಕ್ಷಕಿ ಸಾವಿತ್ರಿ ಬಾಯಿ ಫುಲೆ** (ಪ್ರ. ಡಿಸೆಂಬರ್ ೨೦೧೪) – ಇವು ಈ ಬಹುಮಾನಕ್ಕೆ ಆಯ್ಕೆಯಾಗಿವೆ. ಇವರಿಗೆ ಅಭಿನಂದನೆಗಳು.

– ***ಸಂಪಾದಕ***




## ✉ ಮತದಾರನ ಕ್ರಾಂತಿಯ ಕಣ್ಣು

ವ್ಯವಸ್ಥೆಯಲ್ಲಿ ಯಾವುದೇ ಜವಾಬ್ದಾರಿ ಹುದ್ದೆಯಲ್ಲಿದ್ದ ಪ್ರಮುಖ ಅಧಿಕಾರಿಗಳು ಎಂಥದ್ದೇ ಸಂದಿಗ್ಧತೆ ಎದುರಾದರೂ ಆತ್ಮಹತ್ಯೆಯಂಥ ನಿರ್ಧಾರಕ್ಕೆ ಬರುವುದು, ಹಾಗೆ ಬಲಿಯಾಗುವುದು ಆಕ್ಷೇಪಾರ್ಹ. ಒಂದೋ ಅವರು ಅಸಮರ್ಥರು, ಇಲ್ಲ ಪ್ರಾಮಾಣಿಕತೆಯ ಸೋಗು ಹಾಕಿ ಅನಿವಾರ್ಯತೆಯ ಆಮಿಷಕ್ಕೆ ಬಲಿಯಾಗಿ ಅಪಮಾನ ಸಹಿಸಲಾಗದವರಾಗಿರುತ್ತಾರೆ. ನಿಜಕ್ಕೂ ತಮಗೆ ವ್ಯವಸ್ಥೆಯಿಂದ ಅನ್ಯಾಯವಾಗಿದ್ದಲ್ಲಿ ತಾಳ್ಮೆಯಿಂದ ಲಿಖಿತ ದೂರು/ಮನವಿ, ನ್ಯಾಯಯುತ ಹೋರಾಟ, ಗಾಂಧೀಜಿಯ ಅಸ್ತ್ರವಾದ ಧರಣಿ, ಉಪವಾಸ ಸತ್ಯಾಗ್ರಹ... ಹೀಗೆ ಯಾವುದೇ ರೀತಿಯಲ್ಲಾದರೂ ಎದುರಿಸಿ, 'ಈಸಬೇಕು, ಇದ್ದು ಜಯಿಸಬೇಕು' ಎಂಬ ವಿಧಾನ ಅನುಸರಿಸಬೇಕಿತ್ತು. ಇವೆಲ್ಲವನ್ನೂ ಬಿಟ್ಟು ಆತ್ಮಹತ್ಯೆಯ ದಾರಿ ಹಿಡಿದರೆ ಸಾಧಿಸಿದ್ದೇನು ? ತಮ್ಮನ್ನೇ ರಕ್ಷಿಸಿಕೊಳ್ಳದವರು ಇತರರನ್ನು ರಕ್ಷಿಸಿಯಾರೆ ? – ಇವೆಲ್ಲ ಸಾಮಾನ್ಯರ ಪ್ರಶ್ನೆಗಳು. ಅದೇನೇ ಇರಲಿ, ಸರಿಯೋ ತಪ್ಪೋ ಆತ್ಮಹತ್ಯೆಗೀಡಾದವರ ಕುಟುಂಬಕ್ಕೆ ಒಂದಿಷ್ಟು ಸಾಂತ್ವನ/ ನ್ಯಾಯ ದೊರಕಿಸಿಕೊಡಬೇಕೆಂಬುದರಲ್ಲಿ ಎರಡು ಮಾತಿಲ್ಲ.

ಪ್ರಕರಣದ ಇನ್ನೊಂದು ನೆಲೆಯಲ್ಲಿ ಅವಲೋಕಿಸಿದಾಗ, ಇಂಥವನ್ನೇ ಅಸ್ತ್ರವನ್ನಾಗಿಸಿಕೊಂಡು ಸ್ವ / ಪಕ್ಷ / ಜಾತಿ... ಹಿತಾಸಕ್ತಿಗಾಗಿ ಹೋರಾಡುವ, ಹಾರಾಡುವವರ ರೀತಿ–ನೀತಿಗೊಂದಿಷ್ಟು ಶಿಸ್ತು ಬೇಕಲ್ಲ ? ಅದರಲ್ಲೂ ವಿಧಾನ ಮಂಡಲದಲ್ಲಿ ಇಂಥ ವಿಷಯಗಳ ಚರ್ಚೆಯಲ್ಲಿ ಯಾವುದೇ ಪಕ್ಷವಿರಲಿ ಅವರುಗಳು ಬಳಸುವ ಭಾಷೆ, ಧರಣಿ ಕೂರುವ ವಿಧಾನ, ಆರೋಪ–ಪ್ರತ್ಯಾರೋಪ ಮಾಡುವ ಬಗೆ, ಮಜಾ ಮಾಡುವ ರೀತಿ, ನಾಡಿನ ಶ್ರೀಸಾಮಾನ್ಯನನ್ನು ನಾಚಿಸುವಂತಿದೆ. ಇದು ಸರಿಯೇ ? ನೇತಾರರಿಗಿದು ಸೂಕ್ತವೇ ? ನಿಜವಾಗಿ ನೊಂದ ಕುಟುಂಬಕ್ಕೆ ನ್ಯಾಯ ದೊರಕಿಸಿಕೊಡಬೇಕೆಂದಿದ್ದರೆ ನಾಡಿನ ನೇತಾರರಾದ ಇವರೂ ಗಾಂಧೀಜಿಯ ಉಪವಾಸ ಸತ್ಯಾಗ್ರಹ, ಧರಣಿಯಂಥ ಅಸ್ತ್ರವನ್ನೇಕೆ ಬಳಸಬಾರದು ? ಹೀಗೆಯೇ ಸಾಮಾನ್ಯ ರೈತರನ್ನೊಳಗೊಂಡ ಎಲ್ಲಾ ಆತ್ಮಹತ್ಯೆಗಳ ಪ್ರಕರಣದಲ್ಲಿ ಹೀಗೆಯೇ ವರ್ತಿಸುತ್ತಿದ್ದಾರೆಯೇ ? ರಾತ್ರಿಯೆಲ್ಲ ಬಿರಿಯಾನಿ ತಿಂದು ಹರಟೆ ಹೊಡೆದು, ಹಾಡು, ಭಜನೆ, ಮಿಮಿಕ್ರಿ ಮಾಡುತ್ತಾ ಬೆಳಿಗ್ಗೆ ವ್ಯಾಯಾಮ ಮಾಡಿ, ಉಪಹಾರ ಸೇವಿಸಿ ಮೋಜು ಮಾಡಿ ಅಧಿವೇಶನದ ಸಮಯ ಮತ್ತು ವೆಚ್ಚವನ್ನು ಸಾರ್ವಜನಿಕರು ತೆರಿಗೆ ಹಣದಲ್ಲಿ ಪೋಲುಮಾಡುತ್ತಿರುವುದನ್ನು ಸಾಮಾನ್ಯ ಮತದಾರ ತನ್ನ ಕ್ರಾಂತಿಯ ಕಣ್ಣಿಂದ ವೀಕ್ಷಿಸುತ್ತಿರುತ್ತಾನೆ ಎಂಬುದನ್ನು ಇವರುಗಳು ಅರಿಯುವುದು ಸೂಕ್ತ.

*ಕನಕಗಿರಿ* **_ವೆಂಕಟೇಶ ಕೆ. ಜನಾದ್ರಿ_**

## ✉ ಯಶಸ್ಸಿನ ಗುಟ್ಟು ಆತ್ಮಶಕ್ತಿಯಲ್ಲಿದೆ

ಜೂನ್ – ೨೦೧೬ರ 'ಹೊಸತು' ತಿಂಗಳ ಪತ್ರಿಕೆಯಲ್ಲಿ ಬಂದ 'ಯಶಸ್ಸಿನ ಗುಟ್ಟು ಆತ್ಮಶಕ್ತಿಯಲ್ಲಿದೆ' ಎಂಬ ತಿಳಿವು ಲೇಖನವನ್ನು ಓದಿ ನನಗೆ ಅನಿಸಿದ್ದು : ದುರ್ಬಲ ಮನಸ್ಸಿನ, ಮಾದಕ ವಸ್ತುವಿನ ಗುಲಾಮರಾಗಿ, ಕೊನೆಗೆ ಒಂದು ದಿನ ಹೇಳಹೆಸರಿಲ್ಲದಂತೆ ಕೊನೆಯುಸಿರು ಎಳೆಯುವ ಹಾಗೂ ದಿನಬೆಳಗಾದರೆ ಟಿವಿಯಲ್ಲಿ, ದಿನಪತ್ರಿಕೆಗಳಲ್ಲಿ, – ಅಲ್ಲಿ ಆತ್ಮಹತ್ಯೆ ಮಾಡಿಕೊಂಡರು,




ಇಲ್ಲಿ ಆತ್ಮಹತ್ಯೆ ಮಾಡಿಕೊಂಡರು ಎಂಬ ಸುದ್ದಿಗಳನ್ನು ಕೇಳುತ್ತಲೇ ಇದ್ದೇವೆ. ಓದುತ್ತಲೇ ಇದ್ದೇವೆ. ನಿಸರ್ಗವೇ ಕರುಣಿಸಿರುವ ಅಂತಃಶಕ್ತಿಯನ್ನು ಕಡೆಗಣಿಸುತ್ತಿದ್ದೇವೆ, ದುರ್ಬಲ ಮನಸ್ಸಿನವರು 'ನನ್ನ ಸಾವಿಗೆ ಇವರು ಕಾರಣ' ಎಂದು ಬರೆದಿಟ್ಟು, ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಇನ್ನೂ ಕೆಲವರು ಆತ್ಮಹತ್ಯೆ ಮಾಡಿಕೊಳ್ಳುವಾಗ ತನ್ನ ದುರ್ಬಲ ಮನಃಸ್ಥಿತಿಯನ್ನು ಹೆಂಡತಿಗೆ ಹೇಳಿ, ಹಾಗೂ ಏನೂ ತಿಳಿಯದ ಮಕ್ಕಳಿಗೂ ವಿಷ ಉಣಿಸಿ ಅಥವಾ ಬೇರೆ ಯಾವುದೇ ರೀತಿಯಿಂದಲಾದರೂ ಇಡೀ ಕುಟುಂಬದ ಸದಸ್ಯರೆಲ್ಲ ಆತ್ಮಹತ್ಯೆಗೆ ಒಳಗಾಗುತ್ತಿದ್ದಾರೆ. ಇಂತಹ ದುರ್ಬಲ ಮನಸ್ಸಿನವರು ಜ. ಹೊ. ನಾರಾಯಣಸ್ವಾಮಿಯವರು ಬರೆದಿರುವ 'ಯಶಸ್ಸಿನ ಗುಟ್ಟು, ಆತ್ಮಶಕ್ತಿಯಲ್ಲಿದೆ' ಎಂಬ ಲೇಖನವನ್ನು ಓದಿ ಮನನ ಮಾಡಿಕೊಂಡರೆ, ಪರಿವರ್ತನೆಯಾಗುವುದರಲ್ಲಿ ಸಂಶಯವೇ ಇಲ್ಲ. ಏಕೆಂದರೆ ಯಾರು ಪರಹಿತಕ್ಕಾಗಿ ಮನಸ್ಸಿಟ್ಟು ದುಡಿಯುವರೋ ಅವರು ನಿತ್ಯ ಸುಖಿಗಳು. ಅವರನ್ನು ಜಗತ್ತಿನ ಯಾವ ಶಕ್ತಿಯೂ ಎದುರುಗೊಳ್ಳಲು ಸಾಧ್ಯವಿಲ್ಲ ಎಂದು ಹೇಳಿದ್ದಾರೆ. 'ನಮ್ಮ ಆತ್ಮಹತ್ಯೆಗೆ ಮುಖ್ಯ ಕಾರಣ, ನಾವುಗಳು ಸ್ವಹಿತಕ್ಕಾಗಿ ದುಡಿಯುತ್ತಿದ್ದೇವೆ. ನಮಗೆ ನಿಸರ್ಗವೇ ಕರುಣಿಸಿರುವ ಅಂತಃಶಕ್ತಿಯನ್ನು ಹೇಗೆ ವಿವೇಕದಿಂದ ಜಾಗೃತಗೊಳಿಸಿಕೊಳ್ಳಬೇಕು' ಎಂದು ಉದಾಹರಣೆ ಸಮೇತ ವಿವರಿಸಿದ್ದಾರೆ. ಈ ಲೇಖನವು ಕೇವಲ ಆತ್ಮಹತ್ಯೆ ಮಾಡಿಕೊಳ್ಳುವ, ದುರ್ಬಲ ಮನಸ್ಸಿನವರು ಮಾತ್ರ ಬದಲಾಗುತ್ತಾರೆ, ಎಂದು ಹೇಳುತ್ತಿಲ್ಲ. ಬದಲಾಗಿ ಯಾವುದೇ ಗುರಿ, ಸಾಧನೆಯನ್ನಾದರೂ ಸಾಧಿಸಬಲ್ಲೆವು ಎಂಬ ನಿಲುವನ್ನು ತಾಳುತ್ತಾರೆ...

*ಮುದ್ದೇಬಿಹಾಳ* **_ಸುರೇಶಬಾಬು ಶಿ. ಬಾದರಬಂಡಿ_**

## ಮಹದಾಯಿ ಮಹದಾಯಿ ನಮ್ಮ ತಾಯಿ

ಮಹದಾಯಿ ಮಹದಾಯಿ ಈಕೆ ನಮ್ಮ ತಾಯಿ
ಬರಿ ನದಿಯಲ್ಲ ಕಷ್ಟದಿ ಸದಾ ಬದಿಗಿದ್ದವಳು,
ಒಂದು ಕಣ್ಣೀರಿಗೆ ನೂರಾಗಿ ಕುದ್ದವಳು,
ನೀರಡಿಸಿದ್ದೇವಮ್ಮ ನಾವೆಲ್ಲ ಜನಗಳು
ದೇಹಿ ದೇಹಿ ಪ್ರಾರ್ಥಿಸಿವೆ ತೀರದ ದಾಹಗಳು,
ಇವರು ಅನ್ನುತ್ತಾರೆ ನಾಹಿ ನಾಹಿ ಎಂದು,
ನೀರು ನೀರಡಿಕೆಯ ನಡುವೆ ಅಡ್ಡ ನಿಂತವರು
ಗೊಡ್ಡು ಕಾರಣ ಹೇಳಿ ಸಡ್ಡು ಹೊಡೆದವರೆಲ್ಲ
ಒಡಹುಟ್ಟಿದವರು, ಒಂದು ಬಟ್ಟಲಲ್ಲುಂಡು ಕೂಡಿ ಬೆಳೆದವರು,
ಒಂದು ರಾಜ್ಯವ ಕಟ್ಟಿ ಮೆರೆದುಬಿಟ್ಟವರು;
ತಾಯಿ ನಮ್ಮವಳಿದ್ದಾಗ ಅವಳ ಹರಿದು ಹಂಚುವುದೆ ?
ಗೆರೆ ಕೊರೆದು ಬೇಡುವುದೆ ದಾಯಾದಿ ಪಾಲು ??
ಹರಿವ ಅಂತಃಕರಣಕ್ಕೆ ಯಾರ ಹಂಗೂ ಇಲ್ಲ
ಕರುಳ ಸಂಬಂಧಕ್ಕೆ ಭಂಗ ತಂದರೆ ಜಯವಿಲ್ಲ,
ಗೆರೆ ಕೊರೆದ ಕೌರವರು ಏನಾದರು ?
ದೇಶದೆದೆ ಬಗೆದವರೀಗ ಕಣ್ಣೀರ ಕುಡಿಯುವರು !
ಪಾಠ ಅದೆಷ್ಟೋ ಏನೋ ಇತಿಹಾಸ ಕೊಟ್ಟರೂ,
ಕಳ್ಳುಬಳ್ಳಿಯೇ ಈಗ ಮಗ್ಗುಲಿಗೆ ಮುಳ್ಳಾಗಿರುವುದು,
ಕುಂತಿ, ಗಾಂಧಾರಿಯಂತೆ ಅಳುವಳು ಮಹದಾಯಿ,
ಎಂದು ತಣ್ಣಗಾದೀತು ತಾಯ ಒಡಲು ?
ಕಸುಕಾದ ಮನವು ಹಣ್ಣಾಗುವುದೆಂದು ???

*ಬೆಂಗಳೂರು* **_ಮಾಲತಿ ಪಟ್ಟಣಶೆಟ್ಟಿ_**

✉ ಆಗಸ್ಟ್ ೨೦೧೬ರ ಸಂಚಿಕೆಯಲ್ಲಿ ಪ್ರಕಟವಾದ ಡಾ॥ ಸರ್ಫ್ರಾಜ್ ಚಂದ್ರಗುತ್ತಿ ಅವರ 'ಬುದ್ಧ ಎಂಬ ಬೆಳಕು' ಲೇಖನ, ಬುದ್ಧನ ಚಿಂತನೆಗಳನ್ನು ಮತ್ತು ಬೋಧನೆಗಳನ್ನು ಸರಳವಾದ ಶೈಲಿಯಲ್ಲಿ ವ್ಯಕ್ತಪಡಿಸಿದೆ. ದೇವರ ಅಸ್ತಿತ್ವದ ಕುರಿತ ಬುದ್ಧನ ಪ್ರಾಮಾಣಿಕ ನಿಲುವು ಮೆಚ್ಚುವಂಥದ್ದು. ಲೇಖಕರು ತಿಳಿಸಿರುವಂತೆ ಬುದ್ಧ ಅವನ ಕಾಲದಲ್ಲಿ ಲಭ್ಯವಾದ ತತ್ವಶಾಸ್ತ್ರ ಸಿದ್ಧಾಂತಗಳನ್ನು, ದರ್ಶನ ಗ್ರಂಥಗಳನ್ನು ಅಧ್ಯಯನ ಮಾಡಿ, ವಿಮರ್ಶೆ ಮಾಡಿ, ತನ್ನದೇ ಆದ ನಿಲುವುಗಳನ್ನು ಪ್ರಕಟಗೊಳಿಸಿದ. ಮನುಷ್ಯನ ಮನಸ್ಸಿಗೆ ಪ್ರಾಮುಖ್ಯತೆ ನೀಡಿದ. ಮನಸ್ಸಿನ ಶುದ್ಧೀಕರಣ ನಡೆಸಿ ಸರಳ ಜೀವನ ನಡೆಸುವುದು ಮುಖ್ಯ ಎಂದು ಸಾರಿದ. ಅನೇಕ ಮತಧರ್ಮಗಳು ಹುಟ್ಟುಹಾಕಿದ ಧಾರ್ಮಿಕ ಆಚರಣೆಗಳ ಭ್ರಮಾಲೋಕದಿಂದ ಹೊರ ಬರುವಂತೆ ಕರೆ ನೀಡಿದ. ಬುದ್ಧನ ಘೋಷ ವಾಕ್ಯ

'ಸತ್ಯ, ಪೂರ್ಣ ಸತ್ಯ. ಸತ್ಯದ ಹೊರತು ಮತ್ತೇನೂ ಇಲ್ಲ' ಎಂಬುದು ಬಹಳ ಮಹತ್ವ ಪಡೆಯುತ್ತದೆ.

ಬುದ್ಧನ ಕಾಲದಲ್ಲಿ ಭದ್ರವಾಗಿ ನೆಲೆಯೂರಿದ್ದ ಹಿಂದೂ ಮತಧಾರ್ಮಿಕ ಪ್ರತಿಪಾದಕರಿಗೆ, ಬುದ್ಧನ ಚಿಂತನೆಗಳಲ್ಲಿ ಬಂಡಾಯದ ಛಾಯೆ ಗೋಚರಿಸಿತು. ಬುದ್ಧನ ಜನಪ್ರಿಯತೆ ಗಾಢವಾಗಿ ಕಾಡತೊಡಗಿತು. ಮತ್ತೊಂದು ಮುಖ್ಯವಾದ ಅಂಶವೆಂದರೆ ಬುದ್ಧನ ವೈರಾಗ್ಯ ಅಭಾವದಿಂದ ಮೂಡಿದ್ದಲ್ಲ. ಅದು ಸಕಲ ಸಂಪತ್ತು, ರಾಜವೈಭೋಗಗಳ ನಡುವೆಯೂ ಮೂಡಿದ ವೈರಾಗ್ಯ. ಆತನ ಕಾಲದಲ್ಲಿ ರಾಜ್ಯಗಳ ವಿಸ್ತರಣೆಗಾಗಿ ನಡೆಯುತ್ತಿದ್ದ ಯುದ್ಧಗಳು. ಹಿಂಸೆ, ಸಾವು, ನೋವು ಮತ್ತು ರಕ್ತಪಾತ, ಅವನ ಮನಸ್ಸನ್ನು ಘಾಸಿಗೊಳಿಸಿದ್ದವು. ಆ ಹಿನ್ನೆಲೆಯಲ್ಲಿ 'ದಯೆ–ಕರುಣೆ–ಮೈತ್ರಿ' ಎಂಬ ಜೀವನ ಮೌಲ್ಯಗಳ ಅಗತ್ಯವನ್ನು ಒತ್ತಿಹೇಳಿದ.

ಬುದ್ಧನ ನಂತರ, ಬೌದ್ಧಧರ್ಮದ ಅನುಯಾಯಿಗಳು ಹೀನಾಯಾನ ಮತ್ತು ಮಹಾಯಾನ ಎಂಬ ಪಂಥಗಳ ನಡುವೆ ಹಂಚಿಹೋಗಿದ್ದಾರೆ. ಮಹಾತ್ಮ ಗಾಂಧಿಯ ಚಿಂತನೆಗಳಂತೆ, ಬುದ್ಧನ ಮೂಲಭೂತ ಚಿಂತನೆಗಳು ಕೂಡ ಅಪಮೌಲ್ಯಗೊಂಡಿವೆ. ಕಾಲ ಉರುಳಿದಂತೆ ಬೌದ್ಧಧರ್ಮ ಕೂಡ ಒಂದು ವ್ಯವಸ್ಥಿತ ಮತಧರ್ಮವಾಗಿ ಪರಿವರ್ತನೆಗೊಳ್ಳುತ್ತಿದೆ. ಬೌದ್ಧ ವಿಹಾರಗಳಲ್ಲಿ ಬುದ್ಧನ ವಿಗ್ರಹ ಪೂಜೆ, ಆಚರಣೆಗಳು ಕಂಡುಬರುತ್ತಿವೆ. ಆದರೆ, ಬುದ್ಧನ ಅನೇಕ ವಿಚಾರಗಳು ಇಂದಿಗೂ ಪ್ರಸ್ತುತ ಎಂಬುದು ನಿರ್ವಿವಾದ.

*ಬೆಂಗಳೂರು* ***ಶಂಕರನಾರಾಯಣ***

## ✉ ವರದಕ್ಷಿಣೆಯೆಂಬ ಶಾಪ ಹೆಣ್ಣಿಗೊ ? ಸಮಾಜಕ್ಕೊ...?

ವರದಕ್ಷಿಣೆ ಎಂಬ ಪಿಡುಗು ಎಷ್ಟರ ಮಟ್ಟಿಗೆ ಕಾಡುತ್ತಿದೆ ಎಂದರೆ ಹೆಣ್ಣುಭ್ರೂಣಹತ್ಯೆ, ಹೆಣ್ಣುಮಕ್ಕಳ ಮಾರಾಟ, ಮುಂದೆ ವರದಕ್ಷಿಣೆಕೊಡಬೇಕೆಂಬ ಕಾರಣಕ್ಕೆ ಹುಟ್ಟಿದಾಗಲೇ ಹೆಣ್ಣುಮಕ್ಕಳನ್ನು ಕೊಲ್ಲುವುದು – ಹೀಗೆ ಹಲವಾರು ಸಮಸ್ಯೆಗಳಿಗೆ ಕಾರಣವಾಗುತ್ತಲೇ ಬಂದಿದೆ. ಇದಕ್ಕೆ ಯಾವ ರೀತಿಯ ಕಾನೂನು ವ್ಯವಸ್ಥೆಗಳೂ ಗಟ್ಟಿಯಾಗಿಲ್ಲ. ಶತಶತಮಾನಗಳಿಂದಲೂ ವರದಕ್ಷಿಣೆಯ ಪ್ರಭಾವವೂ ಲಾವಾರಸದಂತೆ ಹಬ್ಬುತ್ತಲೇ ಇದೆ.

ವರದಕ್ಷಿಣೆ ನಿಯಂತ್ರಣ ಕಾನೂನು ತರುವುದಕ್ಕೆ ಕೆಲವು ಮಹಿಳಾ ಸಂಘಟನೆಗಳು, ಸಾಮಾಜಿಕ ಕಾರ್ಯಕರ್ತೆಯರು ಸಾಕಷ್ಟು ಕೆಲಸ ಮಾಡುತ್ತಲೇ ಇದ್ದಾರೆ. ಕಾನೂನು ಕೂಡ ಮೊದಲಿಗಿಂತ ಹೆಚ್ಚು ಕಟ್ಟುನಿಟ್ಟಾಗಿದೆ. ಆದರೂ ವರದಕ್ಷಿಣೆ ಮುಕ್ತಗೊಳಿಸಲು ಸಾಧ್ಯವಾಗುತ್ತಿಲ್ಲ. ನಮ್ಮಲ್ಲಿ ಕೊಂಡುಕೊಳ್ಳುವ ಸಂಸ್ಕೃತಿ ಎಲ್ಲಿಯವರೆಗೂ ಇರುತ್ತದೆಯೋ ಅಲ್ಲಿಯವರೆಗೂ ಈ ವರದಕ್ಷಿಣೆ ಎಂಬ ಮಾರಕ ಕಾಯಿಲೆ ಮನುಷ್ಯರನ್ನು ಕೊಲ್ಲುತ್ತಲೇ ಇರುತ್ತದೆ. ಅತ್ಯಂತ ಕೆಳಸ್ತರದ ಜನರಲ್ಲಿ ವರದಕ್ಷಿಣೆಯ ಕಾರಣಕ್ಕಾಗಿಯೇ ಒಬ್ಬನಿಗೇ ಇಬ್ಬರನ್ನು ಮದುವೆ ಮಾಡಿಕೊಡುವ ಪರಿಪಾಠ ಕೂಡ ಇಂದಿಗೂ ಜೀವಂತವಾಗಿದೆ.

ವರದಕ್ಷಿಣೆ ದೂರು ಬಂದ ಕೂಡಲೇ ಬಂಧಿಸುವಂತಿಲ್ಲ ! ಎಂದು ಸುಪ್ರೀಂಕೋರ್ಟ್ ಮಹತ್ವದ ತೀರ್ಪು ನೀಡಿದೆ. ಮಹಿಳೆಯರ ಪರವಾಗಿ ವರದಕ್ಷಿಣೆ ಕಾನೂನು ಮಾಡಲಾಗಿದೆ. ಆದರೆ ಇದರ ಜೊತೆಗೆ ವರದಕ್ಷಿಣೆ ಕಾನೂನು ದುರುಪಯೋಗವಾಗುತ್ತಿರುವುದು ಕೂಡ ನಿಜ. ಈ ಹಿನ್ನೆಲೆಯಲ್ಲಿಯೇ ಪರಿತ್ಯಕ್ತ ಪತ್ನಿಯಿಂದ ದೂರು ಬಂದ ಕೂಡಲೇ ಪತಿಯನ್ನು ಬಂಧಿಸುವಂತಿಲ್ಲ ಎಂದು ಸುಪ್ರೀಂಕೋರ್ಟ್ ಮಹತ್ವದ ಆದೇಶ ನೀಡಿದೆ. ಈ ರೀತಿ ಸುಪ್ರೀಂಕೋರ್ಟ್ ತೀರ್ಪು ನೀಡಿರುವುದು ಮಹಿಳೆಯರು ನಿಜಕ್ಕೂ ಅನ್ಯಾಯಕ್ಕೆ ಒಳಗಾದಾಗ ನ್ಯಾಯ ಪಡೆಯುವುದಕ್ಕೆ ಅಡ್ಡಿಯಾಗಿದೆ. ವರದಕ್ಷಿಣೆ ಕಿರುಕುಳ ಆರೋಪ ಬಂದಕೂಡಲೇ ಪೊಲೀಸರು ಪತಿಯನ್ನು ಹಾಗೂ ಕುಟುಂಬದವರನ್ನು ಬಂಧಿಸುವಂತಿಲ್ಲ. ಹಾಗೊಂದು ವೇಳೆ ಬಂಧಿಸಬೇಕಾದರೆ ಕಾನೂನುಬದ್ಧ ಕಾರಣಗಳಿರಬೇಕು ಎಂದು ನ್ಯಾಯ ಮೂರ್ತಿ ಸಿ. ಕೆ. ಪ್ರಸಾದ್ ನೇತೃತ್ವದ ನ್ಯಾಯಪೀಠ ಮಹತ್ವದ ತೀರ್ಪು ನೀಡಿದೆ. ೨೦೧೨ರಲ್ಲಿ ವರದಕ್ಷಿಣೆ ವಿರೋಧಿ ಕಾನೂನಿನಡಿ ೧,೯೭,೭೬೨ ಪ್ರಕರಣಗಳು ದಾಖಲಾಗಿದ್ದವು. ಇದರಲ್ಲಿ ಕಾಲುಭಾಗದಷ್ಟು ಪ್ರಕರಣಗಳಲ್ಲಿ ಪತಿಯ ತಾಯಿ, ಸಹೋದರಿಯರ ಮೇಲೆ ಉದ್ದೇಶಪೂರ್ವಕವಾಗಿ ದೂರು ದಾಖಲಿಸಿರುವುದು ಕಂಡುಬಂದಿದೆ. ೪೯೮–ಎ ಪರಿಚ್ಛೇದದಡಿ ಪ್ರತಿವರ್ಷ ಸುಮಾರು ಶೇ. ೯೩.೬ರಷ್ಟು ಪ್ರಕರಣಗಳು ದಾಖಲಾಗುತ್ತವೆ. ಆದರೆ ಕೇವಲ ಶೇ. ೧೫ರಷ್ಟು ಪ್ರಕರಣಗಳಲ್ಲಿ ಮಾತ್ರ ಆರೋಪ ಸಾಬೀತಾಗುತ್ತದೆ. ದೇಶದ ವಿವಿಧ ನ್ಯಾಯಾಲಯಗಳಲ್ಲಿ ೩ ಲಕ್ಷಕ್ಕೂ ಅಧಿಕ ಪ್ರಕರಣಗಳು ಇನ್ನೂ ವಿಚಾರಣೆಯಾಗದೆ ಉಳಿದುಕೊಂಡಿದೆ.

ಅದಲ್ಲದೆ ಪೊಲೀಸರಿಗೆ ಏಕಾಏಕಿ ಬಂಧಿಸುವ ಕ್ರಮವನ್ನು ತಡೆಯುವಂತೆ ಎಲ್ಲ ರಾಜ್ಯ ಸರ್ಕಾರಗಳಿಗೂ ನಿರ್ದೇಶನ ನೀಡಲಾಗಿದೆ. ವರದಕ್ಷಿಣೆ ವಿರೋಧಿ ಕಾನೂನಿನಲ್ಲಿ ಪತಿ ಮತ್ತು ಆತನ ಮನೆಯವರಿಂದ ಕಿರುಕುಳಕ್ಕೊಳಗಾಗುವ ಮಹಿಳೆಯರ ರಕ್ಷಣೆ ಉದ್ದೇಶದಿಂದ ಭಾರತೀಯ ದಂಡಸಂಹಿತೆ ೪೯೮–ಎ ಪರಿಚ್ಛೇದವನ್ನು ರೂಪಿಸಲಾಗಿತ್ತು. ಅದರಲ್ಲಿ ವರದಕ್ಷಿಣೆ ಕಿರುಕುಳ ಪ್ರಕರಣದಲ್ಲಿ ಕೇಸ್ ದಾಖಲಾದಲ್ಲಿ ಜಾಮೀನುರಹಿತ ವಾರಂಟ್ ಜಾರಿಯಾಗುತ್ತಿತ್ತು. ಆ ಪ್ರಕರಣದಲ್ಲಿ ಸುಮಾರು ೭ ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ಶಿಕ್ಷೆಯಾಗುವ ಸಾಧ್ಯತೆಯಿತ್ತು. ಆದರೆ ನಿಜವಾಗಲೂ ಅನ್ಯಾಯ ಮಾಡಿದವರನ್ನ ಕಾನೂನೇ ತಪ್ಪಿಸಿಕೊಳ್ಳುವುದಕ್ಕೆ ಜಾಗ ಮಾಡಿಕೊಟ್ಟಿದೆ. ವರದಕ್ಷಿಣೆ ಕಿರುಕುಳ ಪ್ರಕರಣದಲ್ಲಿ ಕೇಸ್ ದಾಖಲಾದಲ್ಲಿ ಅನ್ಯಾಯ ಮಾಡಿದವರೂ ತಪ್ಪಿಸಿಕೊಳ್ಳುವ ಸಾಧ್ಯತೆ ಇದೆ. ಏಕೆಂದರೆ, "ಒಬ್ಬ ಅಪರಾಧಿ ಶಿಕ್ಷೆಯಿಂದ ತಪ್ಪಿಸಿಕೊಂಡರೂ ಪರವಾಗಿಲ್ಲ, ಒಬ್ಬ ನಿರಪರಾಧಿಗೆ ಶಿಕ್ಷೆಯಾಗಬಾರದು" ಎನ್ನುವ ಮಾತು ನಮ್ಮಲ್ಲೇ ಇದೆ. ವರದಕ್ಷಿಣೆ ಕಿರುಕುಳ ಪ್ರಕರಣದಲ್ಲಿ ಕೇಸ್ ದಾಖಲಾದಲ್ಲಿ ನಿಜವಾಗಲೂ ನ್ಯಾಯ – ಅನ್ಯಾಯ ಪರಾಮರ್ಶಿಸಿ ನ್ಯಾಯ ಒದಗಿಸುವುದು ನ್ಯಾಯಾಲಯದ ಕರ್ತವ್ಯ. ಆದರೆ ನ್ಯಾಯಾಲಯ ಹಾಗೂ ಕಾನೂನಿನ ದೌರ್ಬಲ್ಯಗಳು ಕೂಡ ವರದಕ್ಷಿಣೆಯ ಪ್ರಕರಣ ಹೆಚ್ಚಳಕ್ಕೆ ಕಾರಣವಿರಬಹುದು. ಒಬ್ಬ ನಿಜವಾದ ಆರೋಪಿಗೆ ಸರಿಯಾದ ಶಿಕ್ಷೆಯಾದರೆ ಉಳಿದವರೂ ಅದನ್ನು ನೋಡಿ ಎಚ್ಚೆತ್ತುಕೊಳ್ಳುವಂಥ ವ್ಯವಸ್ಥೆ ಜಾರಿಗೆ ಬರದ ಹೊರತು ತವರಿನ ಹೊಸ್ತಿಲು ದಾಟಿ ಬರುವ ಹೆಣ್ಣಿಗೆ ನೆಮ್ಮದಿಯೆಂಬುದು ಮರೀಚಿಕೆಯಾಗಿಯೇ ಉಳಿಯುತ್ತದೆ.

*ಬೆಂಗಳೂರು* ***ಸೌಮ್ಯಾ ಕೆ. ಆರ್.***

## "ದಿನನಿತ್ಯದಲ್ಲಿ ಕನ್ನಡ"

ನಮ್ಮ ಎದುರು ಮನೆಯ ಹುಡುಗಿ ಲತಾ ತರಕಾರಿ ತರಲು ಅವಳ ಅಮ್ಮ ಕಳುಹಿಸಿದಾಗ ಬರೀ ಕೈಯಲ್ಲಿ ವಾಪಸಾದಳು. ಕಾರಣ ಈಕೆ ಬಳಸಿದ ಇಂಗ್ಲಿಷ್ ಪದಗಳು. ಬ್ರಿಂಜಾಲ್, ಕುಕುಂಬರ್, ಗ್ರೀನ್ ಚಿಲ್ಲಿ ಎಂಬ ಇತ್ಯಾದಿ ಪದಗಳನ್ನು ಹೇಳಿದ ಆಕೆಯ ಮಾತುಗಳು ಅಂಗಡಿಯವನಿಗೆ ತಿಳಿಯದೆ ಆ ತರಕಾರಿ ಇಲ್ಲಮ್ಮ ಎಂದ. ಅದನ್ನು ಕೇಳಿ ವಾಪಸಾದ ಮಗಳನ್ನ ಮತ್ತೆ ಕರೆದು ಅಂಗಡಿಗೆ ಅವಳ ಅಮ್ಮ ಹೋಗಿ ತರಕಾರಿಯ ಹೆಸರನ್ನು ಕನ್ನಡದಲ್ಲಿ ಹೇಳಿ ಅದರ ಬಣ್ಣ, ಆಕಾರಗಳ ಪರಿಚಯ ಮಾಡಿಕೊಡಬೇಕಾಯಿತು. ಬೆಳಿಗ್ಗೆ ಎದ್ದೊಡನೇ ನಾವು "ಗುಡ್ ಮಾರ್ನಿಂಗ್" ಎಂದು ಹೇಳುತ್ತೇವೆ. ಅದನ್ನೇ ನಾವು 'ಶುಭೋದಯ' ಎಂದು ಅಚ್ಚ ಕನ್ನಡದಲ್ಲಿ ಹೇಳಿದರೆ ಅದೇ ಕನ್ನಡದ ಉಸಿರಾಗುತ್ತದೆ. ಯಾರಾದರೂ, ಸರಿ ನಮಗೆ ಮಾಡಿದ ಉಪಕಾರಕ್ಕೆ ನಾವು ಮಾಮೂಲಿಯಾಗಿ ಇಂಗ್ಲಿಷ್‌ನಲ್ಲಿ ಥ್ಯಾಂಕ್ಸ್ ಎನ್ನುತ್ತೇವೆ. ಅದನ್ನೇ ನಾವು 'ಧನ್ಯವಾದಗಳು' ಎಂದರೆ ಕನ್ನಡ ಉಳಿದು ಕನ್ನಡ ಮಾತೆಗೆ ಹರುಷ ತರುತ್ತದೆ. ಅದಷ್ಟೂ ನಾವು ದಿನ ನಿತ್ಯಕಾರ್ಯದಲ್ಲಿ ಕನ್ನಡ ಪದಗಳನ್ನು ಬಳಸಿದರೆ ನಮ್ಮ ಮಕ್ಕಳು ಅದನ್ನು ಬಳಸತೊಡಗುತ್ತಾರೆ. ಆದರೆ ಇತ್ತೀಚೆಗೆ ಇಂಗ್ಲಿಷ್ ಬಳಕೆ ಹೆಚ್ಚಾಗಿ ಕನ್ನಡ ಪದಗಳು ಮರೆಯಾಗಲು ನಾವೇ ಕಾರಣ ಅಲ್ಲವೇ ? ದೊಡ್ಡವರು ಬಳಸಿದರೆ ಮಕ್ಕಳು ಅದನ್ನೇ ಆಡುತ್ತಾರೆ.

ಇವನ್ನ ನಾವೆ ನಮ್ಮ ಮಕ್ಕಳಿಗೆ ಹೇಳದೆ ಶಾಲೆಯಲ್ಲಿ ಹೇಳಿದಾಗ ನಡೆದು ಬರುವ ಅವರನ್ನ ಬೈದು, ಹೊಡೆಯುವುದಕ್ಕಿಂತ ಅವರಿಗೆ ನಮ್ಮ ನಾಡಿನ ಭಾಷೆಯ ಪರಿಚಯ ಮಾಡಬೇಕು, ದಿನನಿತ್ಯದ ವ್ಯವಹಾರದ ಪರಿಚಯವನ್ನು ಮಾತೃಭಾಷೆಯ ಮುಖಾಂತರ ಮಾಡಿದರೆ ಅವರಿಗೆ ಆಗ ವ್ಯವಹಾರದ ಜ್ಞಾನ ಬೆಳೆದುಬರುತ್ತದೆ. ನಾವು ವಾಸಿಸುವ ಯಾವುದೇ ಪ್ರದೇಶ ಇದ್ದರೂ ಆ ಪ್ರದೇಶದ ಭಾಷೆಯ ಪರಿಚಯ ಮಕ್ಕಳಿಗೆ ಆದರೆ ಅವರು ತಮ್ಮ ಜೀವಿತಕಾಲದ ಉದ್ದಕ್ಕೂ ಜೋಪಾನ ಮಾಡುತ್ತಾರೆ.

ಮೊದಲು ನಾವು ನಮ್ಮ ಭಾಷೆಯ ಬಗ್ಗೆ ಅಭಿಮಾನವಿರಿಸಿಕೊಂಡರೆ ಅದು ಮಕ್ಕಳಿಗೆ ತಾನಾಗೇ ಬರುತ್ತದೆ. ಅಂಚೆ ಕಚೇರಿ, ಬ್ಯಾಂಕ್, ಮಾರುಕಟ್ಟೆ, ಬಸ್ಸು, ದಿನಸಿ ಅಂಗಡಿ, ಸಾಮಾನು ತರಲು ಮಕ್ಕಳನ್ನು ಕರೆದುಕೊಂಡು ಹೋಗಿ, ಅಲ್ಲಿ ನಮ್ಮ ಕನ್ನಡವನ್ನು ಬಳಸಿದಾಗ ನಮ್ಮ ಮಕ್ಕಳು ಅದನ್ನು ಕಲಿತು ಕನ್ನಡವನ್ನ ಆಡತೊಡಗುತ್ತಾರೆ. ಹಿಂದೆ ತಾಯಂದಿರು ಓದಿ ಮಕ್ಕಳಿಗೆ ಕತೆ ಹೇಳಿ ಸಾಹಿತ್ಯದ ಪರಿಚಯ ಮಾಡಿಕೊಡುತ್ತಿದ್ದರು. ಈಗ ಟಿವಿ ರಿಮೋಟ್ ಬಂದು, ಅದರ ಪರಿಚಯದಿಂದ ಮಕ್ಕಳಿಗೆ, ಸಾಹಿತ್ಯ ಕಬ್ಬಿಣದ ಕಡಲೆಯಾಗಿದೆ. ನಾವು ಬಳಸಿದರೆ ಕನ್ನಡ, ನಾವು ಉಳಿಸಿದರೆ ಕನ್ನಡ. ಇದನ್ನು ಇಂದೇ ಪಾಲಿಸುವಾ ಬನ್ನಿ.

*ಬೆಂಗಳೂರು* ***ಬಾಲಾಜಿ ಟಿ. ಆರ್.***



# ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ

○ ಎಸ್. ಆರ್. ಭಟ್

## ಬಹುಮುಖ ವಿಸ್ತರಣೆ : ೧೯೫೬ರ ನಂತರ

ದಿವಂಗತ ಎಸ್. ರಾಮಚಂದ್ರ ಭಟ್ಟರು ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕರಲ್ಲೊಬ್ಬರು ಹಾಗೂ ಸ್ಥಾಪಕ ಕಾರ್ಯದರ್ಶಿ. ಸಂಸ್ಥೆಯಲ್ಲಿ ಹಲವಾರು ವರ್ಷಗಳು ಕಾರ್ಯ ನಿರ್ವಹಿಸಿ ಭದ್ರವಾದ ನೆಲೆ ಸೃಷ್ಟಿಸಿದವರು. ಕೆಲಕಾಲ 'ಕೆಂಬಾವುಟ' ಪತ್ರಿಕೆಯ ಸಂಪಾದಕರಾಗಿದ್ದ ಭಟ್ಟರು ಬೆಂಗಳೂರಿನಿಂದ ಪ್ರಕಟವಾದ ಸೈದ್ಧಾಂತಿಕ ಮಾಸಪತ್ರಿಕೆ 'ಅರುಣ'ದ ಸಂಪಾದಕರೂ ಆಗಿದ್ದರು. ಕನ್ನಡ, ಸಂಸ್ಕೃತ, ಇಂಗ್ಲಿಷಿನಲ್ಲಿ ಪ್ರಬುದ್ಧರಾಗಿದ್ದ ಅವರು ವಿದ್ವಾಂಸರು. ವೇದಾಧ್ಯಯನ ಮಾಡಿದ್ದರು. ಭಾರತದ ಪ್ರಾಚೀನ ಇತಿಹಾಸವನ್ನು ಚೆನ್ನಾಗಿ ಬಲ್ಲವರಾಗಿದ್ದರು. 'ಕುಮಾರವ್ಯಾಸ ಭಾರತ' ಕಂಠಪಾಠ ಮಾಡಿಕೊಂಡಿದ್ದರು, ಅಧ್ಯಯನ ಶೀಲರಾಗಿದ್ದ ಭಟ್ಟರು ಆಳವಾದ ವಿಶ್ಲೇಷಣೆಗೆ ಹೆಸರಾಗಿದ್ದರು. ೧೯೭೭ರ ಅಕ್ಟೋಬರ್ ತಿಂಗಳಲ್ಲಿ ಅವರು ಬರೆದ 'ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ' ಪ್ರಕಟಿಸುತ್ತಿದ್ದೇವೆ.

*– ಸಂ.*

ನವೆಂಬರ್ ೧, ೧೯೫೬ರಂದು ಕರ್ನಾಟಕದ ಮೂರು ಕೋಟಿ ಜನತೆಯ ಬಹುಕಾಲದ ಕನಸು ನನಸಾಯಿತು. ಶತಮಾನಗಳಿಂದ ಹರಿದು ಹಂಚಿಹೋಗಿದ್ದ ಕನ್ನಡ ನಾಡು ಒಂದುಗೂಡಿತು. ಈ ಏಕೀಕೃತ ಆಡಳಿತದ ಒಂದು ಪರಿಣಾಮವಾಗಿ ಕರ್ನಾಟಕದ ಕೈಗಾರಿಕಾ ಬೆಳವಣಿಗೆ ದ್ರುತಗತಿಯಿಂದ ಮುಂದುವರಿಯಿತು. ೧೯೫೬ರಂದು ರಾಜ್ಯದಲ್ಲಿ ೧.೭೨ ಲಕ್ಷ ಕಾರ್ಮಿಕರನ್ನೊಳಗೊಂಡ ೧೬೫೫ ಕಾರ್ಖಾನೆಗಳಿದ್ದವಷ್ಟೆ. ಆದರೆ, ೧೯೭೨ರಲ್ಲಿ ಕಾರ್ಖಾನೆಗಳ ಸಂಖ್ಯೆ ೧೯೫೬ಕ್ಕೆ ಏರಿತು. ಅವುಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರ ಸಂಖ್ಯೆ ೨.೮೪ ಲಕ್ಷಗಳಷ್ಟಾಗಿತ್ತು (ಕರ್ನಾಟಕ : ಪ್ರಗತಿಪಥ). ಆದುದರಿಂದ ಸ್ವಾಭಾವಿಕವಾಗಿಯೇ ಈ ಕಾಲಘಟ್ಟದಲ್ಲಿ ಟ್ರೇಡ್ ಯೂನಿಯನ್ ಚಳವಳಿ ಬಹುಮುಖವಾಗಿ ಬೆಳೆದು ರಾಜ್ಯಾದ್ಯಂತ ವ್ಯಾಪಿಸಿತು.

**ದಾವಣಗೆರೆ**

ಟ್ರೇಡ್ ಯೂನಿಯನ್ ಚಳವಳಿ ರಾಜ್ಯದಲ್ಲಿ ಹೀಗೆ ಹೊಸದಾಗಿ ವ್ಯಾಪಿಸಿದ ಪ್ರದೇಶಗಳಲ್ಲಿ ದಾವಣಗೆರೆ ಅತ್ಯಂತ ಮುಖ್ಯವಾದುದು.

ದಾವಣಗೆರೆಯು ೮ ಬಟ್ಟೆ ಗಿರಣಿಗಳಿರುವ ಒಂದು ಪ್ರಧಾನ ಕೈಗಾರಿಕಾ ಕೇಂದ್ರ. ೧೯೪೪ರಿಂದಲೇ ಇಲ್ಲಿನ ಕಾರ್ಮಿಕರು ಸಂಘಟಿತರಾಗಲು ಪ್ರಯತ್ನಿಸುತ್ತಿದ್ದರು. ಆದರೆ ಪ್ರತಿಯೊಂದು ಬಾರಿಯೂ ಹಿಂಸೆ, ಬಲಾತ್ಕಾರ ಮತ್ತು ಗೂಂಡಾಗಿರಿಗಳ ಮೂಲಕ, ಈ ಸಂಘಟನೆಗಳು ಕುಡಿಯೊಡೆಯುವುದಕ್ಕೆ ಮುಂಚೆಯೇ ಮಾಲಕರು ಅವುಗಳನ್ನು ಮಟ್ಟ ಹಾಕಿದ್ದರು. ಹೀಗೆ ೧೯೪೪ರಲ್ಲಿ ಮುರುಗಯ್ಯ ಎಂಬುವರು ಸಂಘಟನೆ ಕಟ್ಟಲು ಮಾಡಿದ ಪ್ರಯತ್ನ ವಿಫಲವಾಯಿತು. ೧೯೪೯ರಲ್ಲಿ ಮಂಗಳೂರಿನಿಂದ ಎ. ಶಿವಶಂಕರರಾಯರನ್ನು ಕಮ್ಯೂನಿಸ್ಟ್ ಪಾರ್ಟಿಯು ಇದಕ್ಕೋಸ್ಕರ ದಾವಣಗೆರೆಗೆ ಕಳುಹಿಸಿತು. ಆದರೆ ಮಾಲೀಕರ ಗೂಂಡಾಗಳು ಅವರನ್ನಲ್ಲಿಂದ ಹೊಡೆದೋಡಿಸಿದರು. ಈ ಹಲ್ಲೆಯಲ್ಲಿ ಶಿವಶಂಕರರಾಯರ ಹಲ್ಲುಗಳು ಮುರಿದು ಅವರಿಗೆ ತೀವ್ರ ಗಾಯಗಳಾಗಿದ್ದವು.

ಇಂತಹ ಭಯೋತ್ಪಾದಕ ವಾತಾವರಣದಲ್ಲಿ ಕಾರ್ಮಿಕ ಸಂಘಟನೆಗಳ ಬೆಳವಣಿಗೆಗೆ ಅಲ್ಲಿ ಭದ್ರ ಬುನಾದಿ ಹಾಕಿದವರು ದಿ॥ ಶೇಖರಪ್ಪ ಮತ್ತು ಸುರೇಶ್ ಹಾಗೂ ದಾವಣಗೆರೆಯ





ಈಗಿನ ನಗರ ಸಭಾಧ್ಯಕ್ಷ ಪಂಪಾಪತಿಯವರು.

**ಹುತಾತ್ಮರು**

ಅವರ ಪರಿಶ್ರಮದಿಂದಾಗಿ ೧೯೬೭ರಿಂದ ಅಲ್ಲಿ ಕಾರ್ಮಿಕ ಚಳವಳಿ ಬೆಳೆಯಲಾರಂಭಿಸಿತು. ಅಂದು ದಾವಣಗೆರೆ ಕಾಟನ್ ಮಿಲ್ಲಿನಲ್ಲಿ ಆಡಳಿತದ ಒಂದು ಕೈಗೊಂಬೆ ಯೂನಿಯನಿತ್ತು. ಆಗ ಮಿಲ್ಲಿನಲ್ಲಿ ಸ್ವತಃ ಕಾರ್ಮಿಕರಾಗಿದ್ದ ಶೇಖರಪ್ಪನವರು, ತಮ್ಮ ನಿಸ್ವಾರ್ಥ ಸೇವೆಯಿಂದ ಇತರ ಕಾರ್ಮಿಕರ ವಿಶ್ವಾಸವನ್ನು ಶೀಘ್ರವಾಗಿ ಗಳಿಸಿ, ಈ ಯೂನಿಯನನ್ನು ಆಡಳಿತದ ಹಿಡಿತದಿಂದ ತಪ್ಪಿಸಿ, ಎಐಟಿಯುಸಿಗೆ ಸೇರಿಸಿದರು. ನಂತರ ಮೆಲ್ಲ ಮೆಲ್ಲಗೆ ಇತರ ಕಾರ್ಖಾನೆಗಳಲ್ಲಿಯೂ ಸಂಘಟನೆಗಳು ತಲೆದೋರಿದವು. ಈ ಕ್ರಿಯಾಸರಣಿ ಮಾತ್ರ ಶಾಂತಿಯುತವಾಗಿರಲಿಲ್ಲ. ಮಾಲೀಕರು ಎಂದಿನಂತೆ ತಮ್ಮ ಗೂಂಡಾಗಳನ್ನು ಅವರ ಮೇಲೆ ಛೂಬಿಟ್ಟರು. ಶೇಖರಪ್ಪ, ಸುರೇಶ್ ಮತ್ತು ಪಂಪಾಪತಿಯವರ ಮೇಲೆ ಕೊಲೆಯ ಸುಳ್ಳು ಆಪಾದನೆಗಳನ್ನು ಹೊರಿಸಿ ಅವರನ್ನು ಜೈಲಿಗೆ ಕಳುಹಿಸಿದರು. ಆದರೆ ಈ ಸಲ ಮಾತ್ರ ಕಾರ್ಮಿಕರು




ಗೂಂಡಾಗಿರಿಗೆ ಮಣಿಯಲಿಲ್ಲ. ಬೆದರಿಕೆಗೆ ಬಗ್ಗಲಿಲ್ಲ. ನಾಯಕರ ಬಂಧನಗಳಿಂದ ಧೃತಿಗೆಡಲಿಲ್ಲ. ೧೯೭೦ರ ಸಮಯಕ್ಕೆ ಸಂಘಟನೆಗಳು ಬೆಳೆದವು. ಹಲವು ಹೋರಾಟಗಳು ನಡೆದವು. ಕಾರ್ಮಿಕರ ಹಲವು ಕೇಳಿಕೆಗಳು ದೊರೆತವು. ಎಐಟಿಯುಸಿ ಯೂನಿಯನ್ನುಗಳ ಈ ಜನಪ್ರಿಯತೆಯನ್ನು ಸಹಿಸಲಾರದೆ, ಮಾಲೀಕರ ಪ್ರೋತ್ಸಾಹದಿಂದ ಸ್ಥಾಪಿಸಲ್ಪಟ್ಟಿದ್ದ ಕೆಲವು ಪ್ರತಿಸ್ಪರ್ಧಿ ಯೂನಿಯನ್ನುಗಳ ಗೂಂಡಾಗಳು ಏಪ್ರಿಲ್ ೧, ೧೯೭೦ರಂದು ಸುರೇಶ್, ಶೇಖರಪ್ಪ ಮತ್ತು ಪಂಪಾಪತಿಯವರ ಮೇಲೆ ಮಾರಣಾಂತಿಕ ದಾಳಿ ಮಾಡಿದರು. ಶೇಖರಪ್ಪ ಮತ್ತು ಸುರೇಶ್‌ರವರು ಈ ದಾಳಿಗೆ ಬಲಿಯಾಗಿ ಹುತಾತ್ಮರಾದರು. ಪಂಪಾಪತಿಯವರಿಗೆ ತೀವ್ರ ಗಾಯಗಳಾದವು.

ಆದರೆ, ಇದರಿಂದ ರೊಚ್ಚಿಗೆದ್ದ ಕಾರ್ಮಿಕರು ತಮ್ಮ ಯೂನಿಯನ್ನುಗಳನ್ನು ಮತ್ತಷ್ಟು ಬಲಪಡಿಸಿದರು, ಸಂಘಟನೆಗಳನ್ನು ವಿಸ್ತರಿಸಿದರು. ಇಂದು ದಾವಣಗೆರೆಯ ಎಲ್ಲ ಕಾರ್ಖಾನೆಗಳ ಕಾರ್ಮಿಕರೂ ಕೆಂಬಾವುಟದ ಯೂನಿಯನ್ನುಗಳಲ್ಲಿ ಸಂಘಟಿತರಾಗಿದ್ದಾರೆ. ಕಾರ್ಮಿಕ ಚಳವಳಿ ಅಲ್ಲಿಂದ ಚಿತ್ರದುರ್ಗಕ್ಕೂ ಹರಡಿದೆ. ಇಂಗಳ ದಾಳದ ತಾಮ್ರದ ಗಣಿ ಕೆಲಸಗಾರರೂ ಕೆಂಬಾವುಟದಡಿಯಲ್ಲಿ ತಮ್ಮ ಸಂಘಟನೆಯನ್ನು ಕಟ್ಟಿದ್ದಾರೆ. ರಾಜ್ಯದ ಹತ್ತಿ ಗಿರಣಿ ಕೆಲಸಗಾರರ ಎರಡು ಸಮ್ಮೇಳನಗಳೂ (೧೯೭೪ ಮತ್ತು ೭೬ರಲ್ಲಿ) ದಾವಣಗೆರೆಯಲ್ಲೇ ನಡೆದವು.

**ಇತರ ಕಡೆಗಳಲ್ಲಿ**

ಹುಬ್ಬಳ್ಳಿ, ಗುಲ್ಬರ್ಗ, ಮೈಸೂರು, ಬೆಳಗಾವಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕೂಡ, ಈ ಕಾಲಘಟ್ಟದಲ್ಲಿ ಟ್ರೇಡ್ ಯೂನಿಯನ್ ಚಳವಳಿ ಇತೋಪ್ಯತಿಶಯವಾಗಿ ಬೆಳೆದಿದೆ. ಹುಬ್ಬಳ್ಳಿಯಲ್ಲಿ ಎಕೇ ಇಂಡಸ್ಟ್ರೀಸ್ ಯೂನಿಯನ್, ತೈವಾಕ್ ಯೂನಿಯನ್, ಬೀಡಿ ಕೆಲಸಗಾರರ ಸಂಘ, ಆಟೋರಿಕ್ಷಾ ಚಾಲಕರ ಸಂಘ ಮುಂತಾದ ಅನೇಕ ಹೊಸ ಸಂಘಟನೆಗಳು ತಲೆದೋರಿ, ಹಲವು ಹೋರಾಟ ಗಳನ್ನು ನಡೆಸಿವೆ. ಮಹದೇವ ಟೆಕ್ಸ್‌ಟೈಲ್ ಯೂನಿಯನ್ ಮತ್ತು ನರಗುಂದದ ನಂದಿ ಹಸಬಿ ಯೂನಿಯನ್ನುಗಳು ಎಐಟಿಯುಸಿಗೆ ಸೇರಿವೆ. ಗುಲ್ಬರ್ಗದಲ್ಲಿ ಕುರುಕುಂಟಾ, ವಾಡಿ ಮತ್ತು ಶಹಾಬಾದ್ ಸಿಮೆಂಟ್ ಕಾರ್ಮಿಕರ ಸಂಘ, ಪಿ.ಡಬ್ಲ್ಯು.ಡಿ. ಯೂನಿಯನ್, ಬೀಡಿ ಕೆಲಸಗಾರರ ಸಂಘ ಮೊದಲಾದವುಗಳು ಅಸ್ತಿತ್ವಕ್ಕೆ ಬಂದಿವೆ. ಮೈಸೂರಿನಲ್ಲಿ ಐಡಿಯಲ್ ಜಾವ, ಮೈಸೂರ್ ಚಿಪ್ ಬೋರ್ಡ್ಸ್ ಮೊದಲಾದ ಕೈಗಾರಿಕೆಗಳ ಕಾರ್ಮಿಕರು ಹೊಸದಾಗಿ ಸಂಘಟಿತರಾಗಿದ್ದಾರೆ. ಕೆ. ಆರ್. ಮಿಲ್ಸ್ ಕಾರ್ಮಿಕರು ಎಐಟಿಯುಸಿ ಯೂನಿಯನನ್ನು ರಚಿಸಿದ್ದಾರೆ. ತುಮಕೂರಿನ ಅಮ್ಮಸಂದ್ರದಲ್ಲಿ ಪ್ರಬಲವಾದ ಸಿಮೆಂಟ್ ಕಾರ್ಮಿಕರ ಸಂಘ ಬೆಳೆದುಬಂದಿದೆ. ದಕ್ಷಿಣ ಕನ್ನಡದಲ್ಲಿ ಬೀಡಿ ಕೆಲಸಗಾರರ ಸಂಘ ಜಿಲ್ಲೆಯಾದ್ಯಂತ ವ್ಯಾಪಿಸಿ, ೧೦,೦೦೦ಕ್ಕಿಂತ ಹೆಚ್ಚು ಸದಸ್ಯರನ್ನೊಳಗೊಂಡಿದೆ.

ಇದಲ್ಲದೆ ಕೊಡಗು, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳನ್ನೊಳಗೊಂಡ ಪ್ಲಾಂಟೇಶನ್ ಕಾರ್ಮಿಕರ ಸಂಘಟನೆಯೊಂದು ೧೯೫೬–೫೭ರಲ್ಲಿ ಅಸ್ತಿತ್ವಕ್ಕೆ ಬಂತು. ಬಿಜಾಪುರ ಜಿಲ್ಲೆಯಲ್ಲಿ ಬಾಗಲಕೋಟೆಯ ಸಿಮೆಂಟ್ ಕಾರ್ಮಿಕರನ್ನು, ಬಿಜಾಪುರದ ಮುನಿಸಿಪಲ್ ಕಾರ್ಮಿಕರನ್ನು ಮತ್ತು ಇತರ ಕೆಲವು ವಿಭಾಗಗಳನ್ನು ಸಂಘಟಿಸಲಾಯಿತು. ಉತ್ತರ ಕನ್ನಡದ ದಾಂಡೇಲಿಯಲ್ಲಿ ಪೇಪರ್ ಕಾರ್ಮಿಕರು ಸಂಘಟಿತರಾದರು. ಬೆಳಗಾವಿಯಲ್ಲಿ ಕೆ. ಪಿ. ಮೆಣಸೆಯವರ ನೇತೃತ್ವದಲ್ಲಿ ಇಂಡಾಲ್ ಅಲ್ಯೂಮಿನಿಯಂ ಕೆಲಸಗಾರರ ಸಂಘ ಜನ್ಮ ತಳೆಯಿತು. ಹಟ್ಟಿಯ ಚಿನ್ನದ ಗಣಿ ಕಾರ್ಮಿಕರೂ ಒಂದು ಸ್ವತಂತ್ರ ಸಂಘಟನೆಯನ್ನು ರಚಿಸಿದರು.

**ಬೆಂಗಳೂರಿನಲ್ಲಿ**

ರಾಜ್ಯದ ಇತರ ಕಡೆಗಳಲ್ಲಿ ಕಾರ್ಮಿಕ ಸಂಘಟನೆ ಹೀಗೆ ಬೆಳೆಯುತ್ತಿದ್ದ ಸಮಯದಲ್ಲಿ ಕಾರ್ಮಿಕ ಚಳವಳಿಯ ತವರ್ಮನೆಯಾದ ಬೆಂಗಳೂರು ತಾನೇ ಹೇಗೆ ಹಿಂದುಳಿದಿರಲು ಸಾಧ್ಯ? ಕಳೆದ ೨೦ ವರ್ಷಗಳಲ್ಲಿ ಇಲ್ಲಿಯೂ ಟ್ರೇಡ್ ಯೂನಿಯನ್ ಚಳವಳಿ ವ್ಯಾಪಕವಾಗಿ ಹರಡಿದೆ.

೧೯೫೬ರಲ್ಲಿ ಬಿ.ಇ.ಎಲ್. ನೌಕರರ ಯೂನಿಯನ್ ಹುಟ್ಟಿ, ೧೯೭೦ರಲ್ಲಿ ಮಾನ್ಯತೆ ಪಡೆಯಿತು. ೧೯೫೭ರಲ್ಲಿ ಎಚ್.ಎಂ.ಟಿ. ನೌಕರರ ಸಂಘ ಹುಟ್ಟಿ, ೧೯೫೯–೬೦ರಲ್ಲಿ ಡಿ. ಎನ್. ರಾಜಗೋಪಾಲರ ಗೂಂಡಾಗಿರಿಯಿಂದ ಒಮ್ಮೆ ನಾಶವಾಗಿ ೧೯೭೨ರಲ್ಲಿ ಪುನರ್ಸಂಘಟಿಸಲ್ಪಟ್ಟು, ೧೯೭೫ರಲ್ಲಿ ಮಾನ್ಯತೆ ಗಳಿಸಿತು. ಈ ಅವಧಿಯಲ್ಲಿ ರೆಮ್ಕೊ, ಎನ್.ಜಿ.ಇ.ಎಫ್., ಕಿರ್ಲೋಸ್ಕರ್, ಎಂ.ಇ.ಐ., ಮುಂತಾದ ಅನೇಕ ಹೊಸ ಯೂನಿಯನ್ನುಗಳು ಜನ್ಮ ತಳೆದವು. ಸಿ. ಮುನಿರತ್ನಂರವರ ದಕ್ಷ ನೇತೃತ್ವದಲ್ಲಿ ಬೆಂಗಳೂರಿನ ಹತ್ತಿ ಗಿರಣಿ ಕಾರ್ಮಿಕರು ಹಿಂದೆಂದಿಗಿಂತಲೂ ಹೆಚ್ಚು ಸಂಘಟಿತರಾಗಿದ್ದಾರೆ. ಬಿನ್ನಿ ಮಿಲ್‌ನಲ್ಲಿ ಕಾರ್ಮಿಕರಾಗಿದ್ದ ಮುನಿರತ್ನಂರವರು, ೧೯೫೧ರಲ್ಲಿ ಕಮ್ಯೂನಿಸ್ಟ್ ಪಕ್ಷವನ್ನು ಸೇರಿ, ಅನೇಕ ವರ್ಷಗಳ ಕಾಲ ಬಿನ್ನಿ ಮಿಲ್‌ನಲ್ಲಿದ್ದ ಐ.ಎನ್.ಟಿ.ಯು.ಸಿ. ಯೂನಿಯನಿನಲ್ಲೇ ದುಡಿಯುತ್ತಿದ್ದು, ಕೊನೆಗೆ ಐ.ಎನ್.ಟಿ.ಯು.ಸಿ.ಯ ಮಾಲೀಕ ಪರ ಧೋರಣೆಗಳಿಂದ ಬೇಸತ್ತು, ಅಲ್ಲಿ ಎಐಟಿಯುಸಿ ಯೂನಿಯನನ್ನು ಸ್ಥಾಪಿಸಿದರು. ೧೯೬೬ರಲ್ಲಿ ಜಿ. ಎಂ. ವೆಂಕಟೇಶ್ ಮತ್ತು ಇತರ ಕೆಲವು ಕಾರ್ಮಿಕರ ಪ್ರಯತ್ನದಿಂದ ಬೆಂಗಳೂರು ವೃತ್ತ ಪತ್ರಿಕಾ ನೌಕರರ ಸಂಘ ಸ್ಥಾಪಿಸಲ್ಪಟ್ಟಿತು. ೧೯೭೩–೭೪ರಲ್ಲಿ ಸಿಲ್ಕ್ ಕಾರ್ಮಿಕರ ಸಂಘಟನೆ ರಾಮನಗರ ಮತ್ತು ದೊಡ್ಡಬಳ್ಳಾಪುರಗಳಿಗೆ ವ್ಯಾಪಿಸಿತು. ೧೯೭೪ರಲ್ಲಿ ಕೆ.ಎಸ್.ಆರ್.ಟಿ.ಸಿ. ನೌಕರರ ಮತ್ತು ಚಾಲಕರ ಸಂಘ ರಚಿಸಲ್ಪಟ್ಟಿತು. ಈ ಅವಧಿಯಲ್ಲಿ ಎಲ್.ಐ.ಸಿ. ಮತ್ತು ಬ್ಯಾಂಕ್ ನೌಕರರ ಸಂಘಟನೆಗಳೂ ಶಕ್ತಿಯುತವಾಗಿ ಬೆಳೆದಿವೆ.

**ರಾಜ್ಯದಲ್ಲಿ ಎಐಟಿಯುಸಿಯ ಪ್ರಾಬಲ್ಯ**

ಆದರೆ, ೧೯೭೦ರಲ್ಲಿ ಅಖಿಲ ಭಾರತ ಮಟ್ಟದಲ್ಲಿ ಎಐಟಿಯುಸಿ ಒಡೆದಾಗ, ರಾಜ್ಯದ ಟ್ರೇಡ್ ಯೂನಿಯನ್ ಚಳವಳಿಯ ಮೇಲೂ ಅದು ಸ್ವಲ್ಪ ಮಟ್ಟಿಗೆ ದುಷ್ಪರಿಣಾಮ ಬೀರದಿರಲಿಲ್ಲ. ಮಾರ್ಕ್ಸಿಸ್ಟ್ ಪಕ್ಷದ ನೇತೃತ್ವದಲ್ಲಿದ್ದ ಕೆಲವು ಯೂನಿಯನ್ನುಗಳೂ ಕೆ.ಪಿ.ಟಿ.ಯು.ಸಿ.ಯಿಂದ ತೊಲಗಿ ಸಿ.ಐ.ಟಿ.ಯು.ವಿನ ರಾಜ್ಯ ಘಟಕ ರಚಿಸಲ್ಪಟ್ಟಿತು. ಆದರೆ, ಅವುಗಳ ಪೈಕಿ ಬಾಗಲಕೋಟೆ ಸಿಮೆಂಟ್ ಕಾರ್ಮಿಕರ ಸಂಘ, ನಂದಿಹಸಬಿ ಯೂನಿಯನ್ ಮೊದಲಾದ ಕೆಲವು ಸಂಘಟನೆಗಳು ಇತ್ತೀಚೆಗೆ ಪುನಃ ಎಐಟಿಯುಸಿಯ ಮಡಿಲನ್ನು ಸೇರಿವೆ. ಹಾಗೆಯೇ ಹುಬ್ಬಳ್ಳಿಯ ಮಹದೇವ ಟೆಕ್ಸ್‌ಟೈಲ್ ಯೂನಿಯನ್ ಮೊದಲಾದ ಹಲವು ಸಂಘಟನೆಗಳು ಐ.ಎನ್.ಟಿ.ಯು.ಸಿ.ಯನ್ನು ಬಿಟ್ಟು ಎಐಟಿಯುಸಿ ನಾಯಕತ್ವವನ್ನು ಒಪ್ಪಿವೆ. ಇಂದು ಎ.ಐ.ಟಿ.ಯು.ಸಿ.ಯೇ ರಾಜ್ಯದ ಅತ್ಯಂತ ಪ್ರಾತಿನಿಧಿಕ ಕೇಂದ್ರೀಯ ಕಾರ್ಮಿಕ ಸಂಘಟನೆಯಾಗಿ ಪರಿಣಮಿಸಿದೆಯೆಂಬುದರಲ್ಲಿ ಸಂಶಯವಿಲ್ಲ. ಆಗಸ್ಟ್ ೧೯೭೧ರಂದು ಬೆಂಗಳೂರಿನಲ್ಲೂ ಮತ್ತು ಡಿಸೆಂಬರ್

೧೯೭೬ರಂದು ಮೈಸೂರಿನಲ್ಲಿಯೂ ನಡೆದ ಎಐಟಿಯುಸಿಯ ರಾಜ್ಯ ಘಟಕದ ಎರಡನೇ ಮತ್ತು ಮೂರನೇ ಸಮ್ಮೇಳನಗಳು, ಬೆಳೆಯುತ್ತಿರುವ ಅದರ ಪ್ರಾಬಲ್ಯಕ್ಕೆ ಸಾಕ್ಷಿಯಾಗಿದ್ದವು. ಆದರೆ, ೧೯೭೬ರಲ್ಲಿ ಅದರ ಉತ್ಸಾಹೀ ಕಾರ್ಯದರ್ಶಿಗಳಾಗಿದ್ದ ಗೋಪಿಯವರ ಅಕಾಲ ನಿಧನದಿಂದಾಗಿ ಎಐಟಿಯುಸಿಗೆ ಭಾರಿ ನಷ್ಟವಾಯಿತು.

**ಹೋರಾಟಗಳ ಕುಲಿಮೆಯಲ್ಲಿ**

ಕಾರ್ಮಿಕರ ಜೀವನ ಪರಿಸ್ಥಿತಿಯ ಸುಧಾರಣೆಗಾಗಿ ಹೋರಾಡುವುದೇ ಕಾರ್ಮಿಕ ಸಂಘಟನೆಗಳ ಮೊದಲ ಗುರಿ. ಆದುದರಿಂದ ಈ ಕಾಲಘಟ್ಟದಲ್ಲಿ ನೂರಾರು ಚಿಕ್ಕಪುಟ್ಟ ಸಮರಗಳು ಮತ್ತು ಹಲವು ದೊಡ್ಡ ಹೋರಾಟಗಳು ನಡೆದುದರಲ್ಲಿ ಆಶ್ಚರ್ಯವಿಲ್ಲ. ಕೇಂದ್ರ ಸರಕಾರದ ಸಮೀಕ್ಷೆಯೊಂದರಂತೆ ೧೯೫೮–೫೯ರಲ್ಲಿ ಬೆಂಗಳೂರಿನಲ್ಲಿ ಹತ್ತಿ ಗಿರಣಿ ಕಾರ್ಮಿಕರಿಗೆ ದೊರೆಯುತ್ತಿದ್ದ ಸರಾಸರಿ ಮಾಸಿಕ ವೇತನ ರೂ. ೯೮.೩೯. ಸಿಲ್ಕ್ ಕಾರ್ಮಿಕರು ಗಳಿಸುತ್ತಿದ್ದ ಸರಾಸರಿ ಸಂಬಳ ರೂ. ೫೮.೪೫. ಸಾರಿಗೆ ಕೆಲಸಗಾರರ ಗಳಿಕೆ ರೂ. ೧೧೭.೮೬. ಇಂಜಿನಿಯರಿಂಗ್ ಕಾರ್ಮಿಕರ ಸರಾಸರಿ ವೇತನ ರೂ. ೧೧೯.೯೪ (ಭಾರತ ಸರಕಾರದ ಲೇಬರ್ ವಾರ್ತೆ ೧೯೫೮–೫೯ರಲ್ಲಿ ಬೆಂಗಳೂರಿನ ಕೈಗಾರಿಕಾ ಕಾರ್ಮಿಕ ಕುಟುಂಬಗಳ ಜೀವನ ಪರಿಸ್ಥಿತಿ.).

**ಎಚ್.ಎ.ಎಲ್. ಸಮರ**

ಈ ದುಸ್ಥಿತಿಯನ್ನು ಸರಿಪಡಿಸಲು ಕಾರ್ಮಿಕ ವರ್ಗಕ್ಕೆ ಹೋರಾಟದ ಹೊರತು ಬೇರೆ ಮಾರ್ಗವಿರಲಿಲ್ಲ. ಆದಕಾರಣ ವೇತನ ಪುನರ್ವಿಮರ್ಶೆಗಾಗಿ ೧೮ ಅಂಶದ ಕೇಳಿಕೆಗಳನ್ನಿಟ್ಟು, ೧೯೫೭ರ ಸೆಪ್ಟೆಂಬರ್‌ನಲ್ಲಿ ಪಿ. ರಾಮನ್ ಮತ್ತು ಜ್ವಾಲನಯ್ಯನವರ ಉಪವಾಸ ಮುಷ್ಕರದೊಂದಿಗೆ ಎಚ್.ಎ.ಎಲ್. ಕಾರ್ಮಿಕರ ಚರಿತ್ರಾರ್ಹ ಹೋರಾಟ ಆರಂಭವಾಯಿತು. ಈ ಸಂಬಂಧವಾಗಿ ೧೯೫೮ನೇ ಫೆಬ್ರವರಿ ೨೫ರಂದು ರಾಜ್ಯವ್ಯಾಪೀ ಪ್ರತಿಭಟನಾ ಪ್ರದರ್ಶನ ನಡೆಯಿತು. ಬೆಂಗಳೂರಿನಲ್ಲಿ ಸೆಕ್ಷನ್೧೪೪ ಜಾರಿಯಾಯಿತು. ಪ್ರದರ್ಶನಕಾರರ ಮೇಲೆ ಗುಂಡು ಹಾರಿಸಲ್ಪಟ್ಟು, ಪಾಂಡ್ಯನ್ ಆಚಾರಿಯವರು ಮರಣಹೊಂದಿದರು. ಅನೇಕರಿಗೆ ಗಾಯಗಳಾದವು. ಹಲವರು ಬಂಧಿಸಲ್ಪಟ್ಟರು. ೭೨ ಮಂದಿ ಕಾರ್ಮಿಕರನ್ನು ಕೆಲಸದಿಂದ ವಜಾ ಮಾಡಲಾಯಿತು. ಆದರೂ ಕಾರ್ಮಿಕರು ಶರಣಾಗಲಿಲ್ಲ. ಹೋರಾಟ ನಿಲ್ಲಲಿಲ್ಲ. ಕೊನೆಗೆ ಆಡಳಿತವೇ ಮಣಿದು ಕಾರ್ಮಿಕರ ಮುಖ್ಯ ಕೇಳಿಕೆಗಳನ್ನು ನೀಡಿತು. ವೇತನದಲ್ಲಿ ಸರಾಸರಿ ರೂ. ೨೦ರಷ್ಟು ಹೆಚ್ಚಳವಾಯಿತು. ವಜಾ ಮಾಡಿದ ಕಾರ್ಮಿಕರನ್ನೆಲ್ಲ ಪುನರ್ನೇಮಿಸಲು ಕೂಡ ಆಡಳಿತ ಒಪ್ಪಿತು. ಈ ಪೈಕಿ ರಾಮನ್, ಮಣಿಯಾಲ್ ಮೊದಲಾದ ಇಬ್ಬರು ಮೂವರು ತಾವಾಗಿಯೇ ಪುನಃ ಕೆಲಸಕ್ಕೆ ಹೋಗಲು ನಿರಾಕರಿಸಿ ಕಮ್ಯುನಿಸ್ಟ್ ಪಕ್ಷದ ಪೂರ್ಣಕಾಲ ಕಾರ್ಯಕರ್ತರಾದರು. ಅವರಲ್ಲಿ ರಾಮನ್‌ರವರೀಗ ಪಕ್ಷದ ರಾಜ್ಯಮಂಡಲಿಯ ಸಹ ಕಾರ್ಯದರ್ಶಿಗಳಾಗಿದ್ದಾರೆ.

**ಇತರ ಹೋರಾಟಗಳು**

ತರುವಾಯ ೧೯೫೯ರಲ್ಲಿ ಸುಮಾರು ೪೦೦೦ ಪ್ಲಾಂಟೇಶನ್ ಕಾರ್ಮಿಕರು ಮುಷ್ಕರ ನಡೆಸಿ, ತಮ್ಮ ಕೆಲವು ಕೇಳಿಕೆಗಳನ್ನು ಪಡೆದರು. ಈ ಸಂಬಂಧವಾಗಿ, ಅಂದು ಪ್ಲಾಂಟೇಶನ್ ಯೂನಿಯನ್ನಿನ ಕಾರ್ಯಕರ್ತರಲ್ಲೊಬ್ಬರಾಗಿದ್ದ ಜಾನ್ ಟೇಲರ್ ಎಂಬುವರ ಮೇಲೆ ಯಾವುದೋ ಒಂದು ಕೊಲೆಯ ಸುಳ್ಳು ಮೊಕದ್ದಮೆ ಹೊರಿಸಲ್ಪಟ್ಟಿತ್ತು. ಈ ಮೊಕದ್ದಮೆಯಲ್ಲಿ ಸಹ ಆರೋಪಿಯನ್ನು ನಿರ್ದೋಷಿಯೆಂದು ರುಜುಪಡಿಸಿದವರು ಸಿ. ಬಿ. ಮೋಟಯ್ಯ.

ನಂತರ ೧೯೫೯–೬೦ರಲ್ಲಿ ಸಿಲ್ಕ್ ಕೆಲಸಗಾರರು ಮತ್ತೊಂದು ದೊಡ್ಡ ಹೋರಾಟ ಹೂಡಿದರು. ೧೯೬೫ರಲ್ಲಿ ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳಲ್ಲಿ ಒಂದು ದಿನದ ಏಕೀಕೃತ ಸಾರ್ವತ್ರಿಕ ಮುಷ್ಕರ ಯಶಸ್ವಿಯಾಗಿ ನಡೆಯಿತು. ೧೯೭೧ರಲ್ಲಿ ರಾಮ್‌ಕುಮಾರ್ ಮಿಲ್ಸ್‌ನಲ್ಲಿ ೪ ತಿಂಗಳುಗಳ ಸುದೀರ್ಘ ಮುಷ್ಕರ ಜರುಗಿತು. ಆದರೆ, ಈ ಮುಷ್ಕರಕ್ಕೆ ನೇತೃತ್ವ ನೀಡಿದ್ದ ಸಿಐಟಿಯು ನಾಯಕತ್ವದ ತಪ್ಪುಗಳಿಂದಾಗಿ, ಈ ಮುಷ್ಕರ ಮಾತ್ರ ಸೋಲಿನಲ್ಲಿ ಕೊನೆಗೊಂಡಿತು. ನಂತರ ಕಾರ್ಮಿಕ ಸಂಘಟನೆಗಳ ಆಶ್ರಯದಲ್ಲಿ ಬೆಲೆ ಏರಿಕೆಯ ವಿರುದ್ಧ ೨೩.೬.೧೯೭೩ರಂದು ೮೦,೦೦೦ ಜನರ ಬೃಹತ್ ವಿಧಾನಸೌಧ ಚಲೋ ಮತ್ತು ೩೦.೬.೧೯೭೩ರಂದು ಚರಿತ್ರಾರ್ಹವಾದ "ಬೆಂಗಳೂರು ಬಂದ್" ನಡೆಯಿತು. ೧೯೭೪–೭೫ರಲ್ಲಿ ವೇತನ ಏರಿಕೆಗೆ ರಾಜ್ಯಾದ್ಯಂತ ನಡೆದ ಬೀಡಿ ಕಾರ್ಮಿಕರ ಹೋರಾಟದ ಫಲವಾಗಿ ಬೀಡಿ ಕೈಗಾರಿಕೆಯಲ್ಲಿ ೧೦೦೦ ಬೀಡಿಗೆ ಕೂಲಿ ದರ ರೂ. ೫.೩೦ಕ್ಕೆ ಏರಿತು. ೧೯೭೫ರಲ್ಲಿ ತ್ರಿಪಕ್ಷೀಯ ಸಮಿತಿ ಶಿಫಾರಸುಗಳ ಜಾರಿಗಾಗಿ ಹತ್ತಿಗಿರಣಿ ಕಾರ್ಮಿಕರು ಮತ್ತೊಂದು ರಾಜ್ಯವ್ಯಾಪೀ ಚಳವಳಿ ಹೂಡಿದರು. ೧೩.೨.೧೯೭೫ರಂದು ೧೫,೦೦೦ ಜನರ ವಿಧಾನಸೌಧ ಚಲೋ ಪ್ರದರ್ಶನದಲ್ಲಿ ಈ ಚಳವಳಿ ಮುಕ್ತಾಯವಾಯಿತು. ಇದಕ್ಕೋಸ್ಕರ ತುರ್ತು ಪರಿಸ್ಥಿತಿ ಜಾರಿಯಾದ ನಂತರವೂ, ೧೬.೭.೧೯೭೫ರಿಂದ ೨೨.೯.೭೫ರ ತನಕ ಟಿ. ಆರ್. ಮತ್ತು ಚಂದ್ರಾ ಮಿಲ್ಲುಗಳಲ್ಲಿ ೬೬ ದಿನಗಳ ಮುಷ್ಕರ ನಡೆದು ಕಾರ್ಮಿಕರ ವಿಜಯದಲ್ಲಿ ಅಂತ್ಯವಾಯಿತು. ಈ ಮಧ್ಯೆ ಸಾರ್ವಜನಿಕ ಕ್ಷೇತ್ರದ ಕಾರ್ಮಿಕರ ಹೋರಾಟಗಳನ್ನು ಕೇಂದ್ರೀಕರಿಸಲು ಎಚ್. ಮಹದೇವನ್‌ರವರ ನಾಯಕತ್ವದಲ್ಲಿ ಒಂದು ಸಮನ್ವಯ ಸಮಿತಿಯನ್ನು ರಚಿಸಲಾಯಿತು. ೬.೧.೧೯೭೬ರಂದು ಬೋನಸ್ ಕಡಿತದ ಆಜ್ಞೆಯ ವಿರುದ್ಧ ಎಐಟಿಯುಸಿ ಪ್ರತಿನಿಧಿಗಳ ತಂಡಗಳಿಂದ ರಾಜ್ಯದ ಎಲ್ಲ ಕೈಗಾರಿಕಾ ಕೇಂದ್ರಗಳಲ್ಲೂ ಒಂದು ದಿನದ ಸಾಂಕೇತಿಕ ಉಪವಾಸ ಸತ್ಯಾಗ್ರಹ ನಡೆಯಿತು. ಈ ಸಂಬಂಧವಾಗಿ ಐ.ಟಿ.ಐ.ನಲ್ಲೂ ಒಂದು ಪ್ರಕ್ಷೋಭೆ ನಡೆದು ಹಲವಾರು ಕಾರ್ಮಿಕರು ಲಾಠಿಚಾರ್ಜ್‌ಗೆ ಗುರಿಯಾದರು. ಹಟ್ಟಿ ಚಿನ್ನದ ಗಣಿಯಲ್ಲಿ ಸಹ ಇದಕ್ಕೋಸ್ಕರ ಒಂದು ಹೋರಾಟ ಹೂಡಲ್ಪಟ್ಟು, ಇಬ್ಬರು ಕಾರ್ಮಿಕರು ಪೊಲೀಸರ ಗುಂಡಿನೇಟಿಗೆ ಬಲಿಯಾಗಿ ಮಡಿದರು. ಅದರ ನಂತರದ ಇತ್ತೀಚಿನ ಹೋರಾಟಗಳಂತೂ ಎಲ್ಲರಿಗೂ ತಿಳಿದಿರುವ ವಿಷಯ.

**ಹೊಸ ಹಂತ**

ಇದು ಕಳೆದ ೪೨ ವರ್ಷಗಳಿಂದ ರಾಜ್ಯದ ಕಾರ್ಮಿಕ ವರ್ಗ ನಡೆದುಬಂದ ದಾರಿಯ ಒಂದು ಸ್ಥೂಲ ಸಮೀಕ್ಷೆ. ಈ ಸಂಘಟನೆ ಮತ್ತು ಹೋರಾಟಗಳ ಪರಿಣಾಮವಾಗಿ ಕಾರ್ಮಿಕ ವರ್ಗದ ಜೀವನ ಪರಿಸ್ಥಿತಿಯಲ್ಲಿ ಸ್ವಲ್ಪ ಸುಧಾರಣೆಯಾಗಿದೆ. ೧೯೫೮–೫೯ಕ್ಕೆ ಹೋಲಿಸಿದರೆ, ಕಾರ್ಮಿಕರ ವೇತನ ಮಟ್ಟ ಇಂದು ಸರಾಸರಿ ಅದರ ಇಮ್ಮಡಿಯಾಗಿದೆ. ಕಾರ್ಮಿಕ ವರ್ಗದ ಸಂಖ್ಯಾಬಲ ಮತ್ತು ಸಂಘಟನಾ ಶಕ್ತಿಗಳು ಗಣನೀಯವಾಗಿ ಬೆಳೆದಿವೆ.

ಆದರೆ, ಇಷ್ಟೇ ಸಾಲದು. ಏಕೆಂದರೆ, ಇದೊಂದು ವಿಷವೃತ್ತ. ಬಂಡವಾಳಶಾಹಿ ಪದ್ಧತಿಯ ವೈರುಧ್ಯಗಳು ತೀವ್ರವಾದಂತೆ ದೇಶದ ಆರ್ಥಿಕ ಬಿಕ್ಕಟ್ಟು ಆಳವಾಗುತ್ತದೆ. ಜೀವನ ವೆಚ್ಚ ಮತ್ತಷ್ಟು ಏರುತ್ತದೆ. ನಿರುದ್ಯೋಗ, ಲೇಆಫ್, ರಿಟ್ರೆಂಚ್‌ಮೆಂಟ್, ಮೊದಲಾದ ಅನಿಷ್ಟಗಳು ಬೆಳೆಯುತ್ತವೆ. ಆಗ ಪುನಃ ಹೋರಾಟ ಅನಿವಾರ್ಯವಾಗುತ್ತದೆ. ಬಂಡವಾಳಶಾಹಿ ಪದ್ಧತಿ ನಾಶವಾಗದೆ ಈ ವಿಷವೃತ್ತವೂ ಅಂತ್ಯವಾಗದು. ಆದುದರಿಂದ ಮಾರ್ಕ್ಸ್‌ರವರು ಹೇಳಿರುವಂತೆ "ನ್ಯಾಯವಾದ ದುಡಿತಕ್ಕೆ ನ್ಯಾಯವಾದ ಕೂಲಿ ಎಂಬುದೊಂದೇ ಕಾರ್ಮಿಕ ವರ್ಗದ ಗುರಿಯಲ್ಲ. ಮಾನವನನ್ನು ಕೂಲಿಯ ಗುಲಾಮನನ್ನಾಗಿ ಮಾಡುವ ಈ ಪದ್ಧತಿಯನ್ನೇ ರದ್ದುಗೊಳಿಸುವುದು ಅದರ ಧ್ಯೇಯ." ಈ ಧ್ಯೇಯ ಸಾಧನೆಯ ದಿಸೆಯಲ್ಲಿ ಹೋರಾಡಲು ಕಾರ್ಮಿಕ ವರ್ಗ ಅಣಿಯಾಗಬೇಕಾದ ಕಾಲ ಈಗ ಸನ್ನಿಹಿತವಾಗಿದೆ.

**– ಎಸ್. ಆರ್. ಭಟ್**

# ಕ್ಷ - ಕಿರಣ

- ಸಾನ್ವಿ ಪಿ.




## ರಿಯೋ ಒಲಿಂಪಿಕ್ಸ್: ಭಾರತಕ್ಕೆ ಪದಕಗಳ ಬರ




## ಬೆಂಗಳೂರಿನಲ್ಲಿ ಅಕ್ರಮ ಮನೆ ನೆಲಸಮ




## ಮೇಕೆ ಹಾಲೂ ಶ್ರೇಷ್ಠ ಸುದ್ದಿ !!





# ಭಗವದ್ಗೀತೆ : ಒಂದು ಅವಲೋಕನ
## ಚಾರಿತ್ರಿಕ ಹಿನ್ನೆಲೆ

ಭಗವದ್ಗೀತೆಯನ್ನು ಕುರಿತ ಚರ್ಚೆ ವಿಪುಲವಾಗಿ ನಡೆದಿದೆ. ಚಾರಿತ್ರಿಕ – ಸಾಮಾಜಿಕ ಹಿನ್ನೆಲೆಯನ್ನು ಬದಿಗಿರಿಸಿ ಸಾಂಸ್ಕೃತಿಕ ವಿಮರ್ಶೆ ಮಾಡುವುದು ಅಸಂಗತ. ಈ ದೃಷ್ಟಿಯಿಂದ ಗೀತೆಯ ಬಗೆಗೆ ಚಿಂತನೆ ನಡೆಸುವ ಪ್ರಕ್ರಿಯೆಯಲ್ಲಿ ಇದು ಮೊದಲ ಲೇಖನ.

**ಜಿ. ರಾಮಕೃಷ್ಣ**

**ನ**ಮ್ಮ ದೇಶದಲ್ಲಿ ಪ್ರವಚನಗಳಿಗೆ ಕೊರತೆಯಿಲ್ಲ, ಪ್ರವಚನಾ ವಿಷಯಗಳಿಗೂ ಕೊರತೆಯಿಲ್ಲ. ಆ ಪೈಕಿ ಭಗವದ್ಗೀತೆ ಅತ್ಯಂತ ಪ್ರಮುಖ ಸಾಮಗ್ರಿಯಾಗಿದೆ. ಉಪನಿಷತ್ತುಗಳು ಮತ್ತು ಬ್ರಹ್ಮಸೂತ್ರ ಸಹ ವಿಷಯವಾಗುತ್ತವೆ, ಆದರೆ ಗೀತೆಗೆ ಪ್ರಥಮ ಸ್ಥಾನ. ಉತ್ತರ ಭಾರತದಲ್ಲಾದರೆ ಗೀತೆ ಮತ್ತು ತುಲಸಿ ರಾಮಾಯಣ ಸಮ ಪ್ರಮಾಣದಲ್ಲಿ ಸ್ಥಾನ ಪಡೆಯುತ್ತವೆ. ಗೀತೆಯ ಒಂದೊಂದು ಅಧ್ಯಾಯದ ಮೇಲೆ ಎರಡೆರಡು ವಾರ ನಿರಂತರವಾಗಿ ಪ್ರವಚನ ನೀಡುವ ನಿತ್ಯಾನಂದ, ಅನುಭವಾನಂದ, ಸುಖಾತ್ಮಾನಂದ ಮುಂತಾದ 'ಆನಂದ'ರಲ್ಲದೆ ಅಭಯ ಚೈತನ್ಯ, ಪಾರ್ಥಸಾರಥಿ ಮುಂತಾದವರೆಲ್ಲ ಇದ್ದಾರೆ. ಕೆಲವು ಮಹಿಳೆಯರೂ ಪ್ರವಚನಗಳನ್ನು ನೀಡುತ್ತಿದ್ದಾರೆಂಬುದು ಸಮಾಧಾನದ ಗಮನಾರ್ಹ ಸಂಗತಿ. ಹೀಗಿರುವಾಗ ಅಕ್ಟೋಬರ್ ೨೦೧೧ರ ನನ್ನ ತೊಂಬತ್ತು ನಿಮಿಷದ ಭಾಷಣ ಸಮಗ್ರವಾಗಿದ್ದಿರಲು ಸಾಧ್ಯವಿಲ್ಲ. ಹಿಂದೊಮ್ಮೆ ಗೀತೆಯ ಬಗ್ಗೆ ನಾನು ಇಂಗ್ಲಿಷಿನಲ್ಲಿ ಬರೆದಿದ್ದೆ. ನನ್ನ ಗುರುಗಳಾದ ಪ್ರೊ॥ ಎಸ್. ರಾಮಚಂದ್ರ ರಾಯರು (ಎಸ್. ಕೆ. ಅಲ್ಲ) ಆಕ್ಷೇಪ ಎತ್ತಿ "ಏನೋ, ನಿಮಗೆ ತೋಚಿದ್ದು ನೀವು ಬರೆದಿದ್ದೀರಿ; ಅದು ನನಗೆ ಮಾನ್ಯವಲ್ಲ" ಎಂದಿದ್ದರು. ಇನ್ನೊಬ್ಬ ಅಧ್ಯಾಪಕ ಡಾ॥ ಎಚ್. ಎಸ್. ಅನಂತ ನಾರಾಯಣ ಅವರು 'ಹೊಸತು'ವಿನಲ್ಲಿ ಗೀತೆ ಬಗ್ಗೆ ನಾನು ಬರೆದಿದ್ದ ಸಂಪಾದಕೀಯವನ್ನು ಕುರಿತು "ನಾನೂ ಬದಲಾಗಿದ್ದೇನೆ, ಆದರೆ ನಿನ್ನಷ್ಟಲ್ಲ; ನಿನ್ನ ಮಾತನ್ನು ನಾನು ಒಪ್ಪಲಾರೆ" ಎಂದಿದ್ದರು. ನನ್ನ ಲೇಖನವನ್ನು ಓದಿದ್ದ ಪ್ರೊ॥ ಎ. ಎನ್. ಮೂರ್ತಿರಾಯರು ಹೇಳಿದ್ದು ಬೇರೆ : "ನಾನೊಬ್ಬನೇ ನಿಮ್ಮ ಸಮರ್ಥಕನಾಗಬಹುದೆಂದು ತೋರುತ್ತದೆ."

ಈಚಿನ ದಶಕಗಳಲ್ಲಿ ವಿದ್ವಾಂಸರು ಮಾತನಾಡುವುದು ಮತ್ತು ಬರೆಯುವುದು ನಾನು ಕಲಿಯುತ್ತಿದ್ದ ಕಾಲದಲ್ಲಿದ್ದಂತೆ ಅಲ್ಲ. ಆಗ್ಗೆ 'ಆಧುನಿಕ ಛಾಯೆ' ಎಂಬುದೇನೂ ಇಲ್ಲದೆ, ಹೇಳಬೇಕಾದ್ದನ್ನು ನೇರವಾಗಿ, ಸರಳವಾಗಿ ಹೇಳಿಬಿಡುತ್ತಿದ್ದರು. ಈಗಲಾದರೋ ಪರಿಕಲ್ಪನಾಪೂರಿತ, ಆಧುನಿಕೋತ್ತರ, ವಸಾಹತೋತ್ತರ ಇತ್ಯಾದಿ ಪರಿಭಾಷೆಗಳಿವೆ. ಅವು ನನಗೆ ಸ್ವಲ್ಪಮಟ್ಟಿಗೆ ಪರಿಚಿತ; ಆದರೆ ಆ ಶೈಲಿ ಮತ್ತು ವಿಶ್ಲೇಷಣಾ ವಿಧಾನ ಅದೇಕೋ ನನಗೆ ಕೂಡಿಬಂದಿಲ್ಲ. ನನಗೆ ತಿಳಿದಿರುವುದು ವೈಚಾರಿಕ, ಚಾರಿತ್ರಿಕ ಪದ್ಧತಿಯ ಅರ್ಥೈಸುವಿಕೆ, ಅಷ್ಟೆ. ನಮ್ಮೆದುರು ಪ್ರಶಸ್ತವಾದೊಂದು ಗ್ರಂಥವಿದೆ, ಅದರ ನಿರ್ದಿಷ್ಟ ಸಂದರ್ಭವಿದೆ. ಆ ಹಿನ್ನೆಲೆಯಲ್ಲಿ ಗ್ರಂಥದ ಪೂರ್ವಾಪರಗಳನ್ನು ಗ್ರಹಿಸುವುದು ಉದ್ದೇಶ. ಅದಕ್ಕೆ ಶಂಕರ ಮಾರ್ಗ, ಮಾರ್ಕ್ಸ್ ವಿಧಾನ, ಫೂಕೊ ಸಿದ್ಧಾಂತದ ನೆಲೆಯ ವಿಶ್ಲೇಷಣೆ, ಇವೆಲ್ಲಾ ಇರಬಹುದು; ಆದರೆ ಅವನ್ನನುಸರಿಸಿಯೇ ಅಧ್ಯಯನ ಮಾಡುವುದು ನನಗೆ ಅಪಥ್ಯ. ಹಾಗೆ ಮಾಡಲು ನನಗೆ ಸಾಮರ್ಥ್ಯವೂ ಇಲ್ಲ. ಮಾರ್ಕ್ಸ್‌ನನ್ನು ಯಾರೋ ಒಮ್ಮೆ ಕೇಳಿದ್ದರು : "ಏನಯ್ಯಾ, ಅದೇನೋ ನಿನ್ನ ಅಧ್ಯಯನ ಮಾರ್ಗ ಪೊಂದಿದೆಯಂತಲ್ಲಾ, ಏನದು ?" ಅದಕ್ಕವನು ನೀಡಿದ್ದ ಉತ್ತರ ಇದು : "ನನ್ನದು ಅನ್ನುವಂಥದೇನೂ ಇಲ್ಲ. ಇರುವುದೊಂದೇ ಮಾರ್ಗ, ಅದು ಜೀವಶಾಸ್ತ್ರದಲ್ಲಿನ ಅಧ್ಯಯನ ಮಾರ್ಗ." ಅಲ್ಲಿ ದತ್ತಾಂಶವಿದೆ, ಅದರ ಸಂಗ್ರಹ ಮಾಡುವುದಿದೆ, ಅದನ್ನು ಅವಲೋಕಿಸುವುದಿದೆ, ವಿಶ್ಲೇಷಿಸುವುದಿದೆ ಮತ್ತು ತಿಳಿದಷ್ಟು ನಿಯಮಗಳನ್ನು ಉಲ್ಲೇಖಿಸುವುದಿದೆ. ಇನ್ನೂ ಹೆಚ್ಚಿನ ದತ್ತಾಂಶ ಲಭ್ಯವಾದಾಗ ಪುನರವಲೋಕನ ಮತ್ತು ನಿಯಮಗಳ ಮರು ಉಲ್ಲೇಖ ಸಾಧ್ಯ. ನಮ್ಮ ಸಮಾಜದ ಪ್ರಾಚೀನ ಇತಿಹಾಸವು ಹೆಚ್ಚು ಸೂಕ್ಷ್ಮವಾಗಿ, ಆಳವಾಗಿ, ವಿಶಾಲವಾಗಿ ತೆರೆದುಕೊಂಡಾಗ ನಮ್ಮ ಸಂಸ್ಕೃತಿಯ ಅಗಾಧ ಬಹುಮುಖತೆಯ ಅರಿವು ಇನ್ನೂ ಹೆಚ್ಚುವುದರಲ್ಲಿ ಸಂಶಯವಿಲ್ಲ.

ಗೀತೆಯ ಮೊದಲ ಆಂಗ್ಲ ಭಾಷಾಂತರ ೧೭೮೫ರಲ್ಲಿ ಬಂತು. ಅದು ವಿಲ್‌ಕಿನ್ಸ್‌ನದು. ೧೮೨೩ರಲ್ಲಿ ಶ್ಲೀಗೆಲ್ ಗೀತೆಯ ಲ್ಯಾಟಿನ್ ಅನುವಾದ ಹೊರತಂದನಂತೆ. ಆಮೇಲೆ ಹತ್ತಾರು ಭಾಷೆಗಳಲ್ಲಿ ನೂರಾರು ಭಾಷಾಂತರಗಳು ಬಂದಿವೆ. ಆಲ್ಡಸ್ ಹಕ್ಲಿ ವಿಶ್ವದ "ಚಿರಂತನ ತತ್ವಜ್ಞಾನ" ಕ್ಷೇತ್ರದಲ್ಲಿ ಗೀತೆಗೆ ಮಹತ್ವ ಇದೆಯೆಂದು ಪ್ರತಿಪಾದಿಸಿದ್ದಾನೆ. "ಗೀತೆಯು ಏನನ್ನು ಹೇಳುತ್ತದೆ ?" ಎಂಬ ಶೀರ್ಷಿಕೆಯ ಅನೇಕ ಪುಸ್ತಕಗಳಿವೆ; ಬಹುಶಃ ಈಗ "ಗೀತೆಯು ಏನನ್ನು ಹೇಳಿಲ್ಲ ?" ಎಂಬ ಪ್ರಶ್ನೆಯು ಕೇಳಿಬರುತ್ತಿದೆ. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ನಲ್ಲಿ ಯಾರೋ ಪರಿಣತರು ಗೀತೆಯನ್ನು "ಮ್ಯಾನೇಜ್‌ಮೆಂಟ್ ಟೆಕ್ನಿಕ್ಸ್" ದೃಷ್ಟಿಯಿಂದ ವ್ಯಾಖ್ಯಾನಿಸಿದ್ದಾರಂತೆ. ಹಿರಿಯ ವಿದ್ವಾಂಸರಾದ ಎಂ. ಹಿರಿಯಣ್ಣ ಮತ್ತು ಎಸ್. ರಾಧಾಕೃಷ್ಣನ್ ಅದನ್ನು ಒಂದು ನೀತಿಗ್ರಂಥವೆಂದು ಕರೆದಿದ್ದರು. ಒಳಿತು ಮತ್ತು ಕೆಡಕುಗಳ ನಡುವಿನ ಘರ್ಷಣೆಯನ್ನು ಗಾಂಧೀಜಿ ಗೀತೆಯಲ್ಲಿ ಕಂಡರು. ಮನುಷ್ಯನ ಮನಸ್ಸಿನಲ್ಲಿ ಅವೆರಡೂ ಇವೆ. ಅವನ ದೇಹವೇ ರಣರಂಗವೆಂದು ಕೆಲವರು ಭಾವಿಸಿದ್ದಾರೆ. ಅವರ ಪ್ರಕಾರ ಪಾಶವೀ ತುಡಿತವೆಂದರೆ ಕೆಡುಕು ಮತ್ತು ದೈವೀ ತುಡಿತವೆಂದರೆ ಒಳಿತು. ನನಗೆ ತೋರುವಂತೆ ಗೀತೆಯು ಅತ್ಯಂತ ವ್ಯವಸ್ಥಿತವಾದ ಮತಧಾರ್ಮಿಕ ಕೃತಿ. ಅದರಲ್ಲಿ ನಾಲ್ಕು ಮೂಲಸೂತ್ರಗಳನ್ನು ಕಾಣಬಹುದು : (ಅ) ಮನುಷ್ಯ ತನ್ನ ಅಂತಶ್ಚಕ್ಷುವಿನಿಂದ ದೇವರ ಇರವನ್ನು ಕಂಡುಕೊಳ್ಳಬಲ್ಲ; (ಆ) ಮನುಷ್ಯನ ಅಸ್ತಿತ್ವವು ಇಂದ್ರಿಯಾತ್ಮಕ 'ಅಹಂ' ಮತ್ತು ನಿತ್ಯವಾದ 'ಆತ್ಮನ್' ಇವುಗಳಿಂದ ಉಂಟಾಗಿದೆ; (ಇ) ಈ ಪ್ರಪಂಚವು ದೈವಲೀಲೆಯ ಕ್ಷೇತ್ರ; ಮತ್ತು (ಈ) ಮನುಷ್ಯ ತನ್ನನ್ನು ತಾನು ಶಾಶ್ವತ ಆತ್ಮದೊಂದಿಗೆ ಗುರುತಿಸಿಕೊಳ್ಳುವುದೇ ಜೀವನದ ಆತ್ಯಂತಿಕ ಗುರಿ.

ಇವನ್ನು ವಿಸ್ತರಿಸುತ್ತಾ ಹೋದರೆ ಗೀತೆಯು ತನ್ನ ಹದಿನೆಂಟು ಅಧ್ಯಾಯಗಳನ್ನು ಮೀರುವ ಬೃಹದ್ಗ್ರಂಥವಾಗುತ್ತದೆ, ಕೆಲವೊಮ್ಮೆ ಪರಸ್ಪರ

ವಿರೋಧಿ ತತ್ವಗಳ ಆಗರವಾಗುತ್ತದೆ. ಆದರೆ ಸಂಪ್ರದಾಯಕ್ಕೆ ಹೊರತಾದ ವಿಚಾರ ಅದು. ಗೀತೆಯಲ್ಲಿನ ನ್ಯೂನತೆಗಳನ್ನು ಗುರುತಿಸುವುದು ಅಪಚಾರವಲ್ಲವೆಂದು ಬಗೆದಿದ್ದ ಪ್ರಸಿದ್ಧ ಇತಿಹಾಸಕಾರ ಮತ್ತು ಸಂಸ್ಕೃತ ಪಂಡಿತ ವಿ. ಕೆ. ರಾಜವಾಡೆ ಒಮ್ಮೆ ತಮಾಷೆಯಾಗಿ ಹೇಳಿದ್ದರು: "ಗೀತೆಯ ಕರ್ತೃವಿಗೆ ಸಂಸ್ಕೃತ ವ್ಯಾಕರಣ ಇನ್ನೊಂದು ಸ್ವಲ್ಪ ಚೆನ್ನಾಗಿ ಗೊತ್ತಿದ್ದಿದ್ದರೆ ಉತ್ತಮವಾಗಿರುತ್ತಿತ್ತು, ಈಗ ಅದರಲ್ಲಿ ವ್ಯಾಕರಣ ದೋಷಗಳು ಸಾಕಷ್ಟಿವೆ" ಎಂದು. ಭಾಷಾಶಾಸ್ತ್ರದ ನಿಟ್ಟಿನಿಂದ ಇದಕ್ಕೆ ಸಮಜಾಯಿಷಿ ನೀಡಬಹುದು. ಆದರೆ ಆಧುನಿಕ ಶಂಕರಾಚಾರ್ಯನೊಬ್ಬ ಪುಣೆಯಲ್ಲಿ ೨೦೧೦ರಷ್ಟು ಈಚೆಗೆ ಗಂಭೀರವಾಗಿ ಹೇಳಿದ: "ಮಹಿಳೆಯರು ಮತ್ತು ಶೂದ್ರರು ಪಾಪಯೋನಿಗಳು; ಅವರನ್ನು ಕಡೆಗಣ್ಣಿನಿಂದ ನೋಡುವುದು ಸರಿ. ಅದಕ್ಕೆ ಗೀತೆಯ ಆಧಾರವಿದೆ" ಎಂದು. ಅಂತಹ ಮಾತಿಗೆ ಯಾವ ಸಮಜಾಯಿಷಿ ಸಾಧ್ಯ! ಸ್ವಾತಂತ್ರ್ಯಪೂರ್ವ ಯುಗದಲ್ಲಿ ಖುದೀರಾಂ ಬೋಸ್‌ನಂಥವರು ಗೀತೆಯನ್ನು ಕೈಯಲ್ಲಿ ಹಿಡಿದು, ಬ್ರಿಟಿಷರನ್ನು ಧಿಕ್ಕರಿಸಿ, ನೇಣುಗಂಬವೇರಿದರು; ಸ್ವಾತಂತ್ರ್ಯೋತ್ತರ ಯುಗದಲ್ಲಿ ಬಿರ್ಲಾ ಮತ್ತು ಠಾಕರ್ಸಿಗಳು ಗೀತೆಯ ಪ್ರತಿಗಳನ್ನು ಪುಕ್ಕಟೆಯಾಗಿ ಹಂಚಿ ಪುಣ್ಯ ಕಟ್ಟಿಕೊಂಡಿದ್ದಾರೆ, ಸಾಮಾಜಿಕ ಗೌರವ ಸಂಪಾದಿಸಿದ್ದಾರೆ. 'ಆನಂದ'ಗಳ ವ್ಯಾಖ್ಯಾನಗಳಿಗೆ ಸಿಲುಕಿ ಗೀತೆಯು ಜಡ್ಡುಗಟ್ಟಿದ ಭಾವನೆಗಳಿಗೆ ಆಕರವಾಗಿ ಬಿಟ್ಟಿದೆಯೇನೋ ಎಂಬ ಭೀತಿಯೂ ಉಂಟು.

ಗೀತೆಯು ಮತಧಾರ್ಮಿಕ ಗ್ರಂಥವೇನೋ ಹೌದು, ಆದರೆ ಅದು ತತ್ತ್ವಶಾಸ್ತ್ರ ಗ್ರಂಥದ ಲಕ್ಷಣವನ್ನೂ ಹೊಂದಿದೆ. ಸಮಾಜಶಾಸ್ತ್ರೀಯ ದೃಷ್ಟಿ, ಸಮರ್ಥನೆ ಮತ್ತು

# ಬರೆಯಬೇಕು ಹೊಸ ಇತಿಹಾಸ

ಕಾವ್ಯಲೋಕ





ಒಳಗಿರಬೇಕಿತ್ತಲ್ಲ ಈತ–ಈತನ ಕುಟುಂಬ ಎಲ್ಲ,
ಹೊರಗಿದ್ದುದು ಹೇಗೆ, – ಯಾರಿಂದ–ಯಾಕೆ
ಎಂಬೆಲ್ಲ ಗೊಂದಲದಲ್ಲಿ ನನಗೆ ನಾನೇ ಕಟುಕ
ನಂತಾಗಿ ಕಂಡದ್ದುಂಟು ನೀರೆ, ಆಗದಿದ್ದರೂ ತಪ್ಪು
ನನ್ನಿಂದ ಚೂರೇ ಚೂರು!
ಹಾಗೆ ನೋಡಿದರೆ ಈತ ನನ್ನ ಕುಲಬಂಧು!
ಹಾಗೇ ಹಲವರಿಗೆ, ನಾನಂಬಲಿಲ್ಲ. ನಂಬಿಬಿಟ್ಟರು ಆಚೆಗಿದ್ದವರು!
ಈಗ ನೋಡಿ ನೂರಕ್ಕೆನೂರು ಪ್ರಗತಿಪರ
ನಿತ್ಯ ಪುರವಣಿಯಲ್ಲಿ. ದಾಖಲಾಗಿದ್ದಾನೆ ಒಳ
ಗಿನ ಸುದೀರ್ಘ ಪಟ್ಟಿಯಲ್ಲಿದ್ದುದೆಲ್ಲವಕ್ಕೂ, ಅಂಕ
ಗಳನ್ನು ಗುಣಿಸಿ ಹಂಚುತ್ತ ಸಾಗಿದ್ದಾನೆ ಒಬ್ಬಂಟಿಯಾಗಿ
ಕಾಲಮಿತಿಯನ್ನೂ ಕೊಟ್ಟು ನಿರ್ಲಜ್ಜ ಕಸಬುಗಳಿಗೆ.

ಮನೆಮನೆಯ ಹೆಗಲಪಂಚೆ ಸುತ್ತಿದ
ಮುಂಡ, ಬೆವರೊರಸುವ ಕರ್ಚೀಫುಗ
ಳನ್ನು – ಛೆ! ಹೋಗಲಿ ಬಿಡಿ, ಚಿಲ್ಲರೆ ಬಾಬತ್ತುಗಳವು.
ಮನೆಮನೆಯ ಹೊದಿಕೆ, ಬಾಗಿಲ ಬಣ್ಣ, ಮಂಗಲವಾದ್ಯ
ಗಳನ್ನೆಲ್ಲ ನೋಡಿದ್ದೀರಾ ?... ಎಂಥ ಹೊಳಪು! ಏನು
ಚಂದ! ಕುಂಚಕ್ಕೂ ಸಿಕ್ಕಿದೆ ಶಿಫಾರಸು ಪತ್ರ!
ಇವೆಲ್ಲವೂ, ಗೊತ್ತೇ ಈತನದೇ ಪ್ರಸಾದ ಈ ಮನೆಗೆ!

ಮೊನ್ನೆ–ನಿನ್ನೆ ಕೇಳಿದ ಹೊಸ ನಮೂನೆ, ಪಾಪ
ಆ ಹಣ್ಣು ಮುದುಕಿ ಹಳ್ಳಿಯವಳು. ಆದರೂ ಬಂದಿದ್ದಾಳೆ
ಊರುತ್ತ ಲಡ್ಡುಕೋಲು. ಅನ್ನುತ್ತಾಳೆ ತಡೆದು ನನ್ನ
ಬೇಕಿತ್ತಲ್ಲ ಮಗನೆ, ನನಗೆ ಒಂದಷ್ಟು ದುಡ್ಡು
ಕಸಗೊಂಡದ್ದು ಕದ್ದಿಟ್ಟವರ ಕತೆಮುಗಿಸಿ, ಹೇಳಿದ್ದ
ನನ್ನ ದೊಡ್ಡ ಮಗ ಬಡತನಕ್ಕೆ ಇನ್ನಿಲ್ಲ ಜಾಗ ತಿಳಿ
ಹಂಚುತ್ತೇನೆ ತಲಾ ಇಂತಿಷ್ಟು ಎಂದು; ಯಾವ
ಕಚೇರಿಯದು ತೋರಿಸು, ಎಲ್ಲಿದೆ ? ಬೇಕಿತ್ತು ನನಗೆ
ಬಂಡಿ ಹಬ್ಬದ ಖರ್ಚಿಗೆ! ಮತ್ತೆ ಮೊಮ್ಮಗಳ ಮದುವೆಗೆ.

"ದಯಾಮಯನು ಇಂದಿಲ್ಲದಿರೆ ನಾಳೆ ಕೊಟ್ಟಾನು" ಎಂಬ
ವರ ಮಾತುಗಳು ಬರಿದೇ ಸುಳ್ಳಲ್ಲ ಕಣಜ್ಜಿ, ಆಪತ್ತಿಗೆ
ಬೇಕಿದ್ದಾಗ – ಓಡೋಡಿ ಬಂದು ಇಟ್ಟು ಹೋಗುತ್ತಾರೆ
ಕೈಯಲ್ಲಿ ಅಷ್ಟಿಷ್ಟು – ಕೆಡದಿರಲಿ ಎಂದು ದೂರದ ಯೋ
ಜನೆ, ಇದು ಇಂದಿಗೇ ಮುಗಿದು ಹೋಗುವ ಮಾತಲ್ಲ;
ಗೊತ್ತವರಿಗೆ ಅದಕೆಂದೇ ಕಚ್ಚುವ ಮಟ್ಟಕ್ಕೇರದೆ ಕುಂಯು
ಕುಂಯು ಎಂದು ಮೂಸುತ್ತವೆ, ನೆಕ್ಕುತ್ತ ಕಾಲುಮುಖ
ಗಳನ್ನೂ ಒಮ್ಮೊಮ್ಮೆ.

ಕೇಳಲೇಬೇಡಿ ಯಾಕೆ ಹೀಗಾಯ್ತೆಂದು ತಲೆ
ಮರೆಸಿಕೊಂಡಿದೆ ತಪ್ಪು, ತಿಳುವಳಿಕೆ. ಹುಡುಕಿ
ತೆಗೆವರಿಲ್ಲ, ನಾಳೆ ಗೊತ್ತಿಲ್ಲ!

ಆದರೂ ಇನ್ನೊಂದು ನಾಳೆಯಿದೆ ನನ್ನ ಪಕ್ಕಾರಕತ್ತಕ್ಕೆ
ಹುಟ್ಟಿದ ಮಕ್ಕಳಿಗೆ, ಕಾಯಲೇಬೇಕವರು ಅಲ್ಲಿ
ಯವರೆಗೆ ಬರೀ ಕಾಯುವುದಲ್ಲ, ಬರೆಯಬೇಕು
ಹೊಸ ಇತಿಹಾಸ!

ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ, ಅಂಕೋಲ – ೫೮೧ ೩೧೪ ಉತ್ತರ ಕನ್ನಡ ಜಿಲ್ಲೆ

ಪರಿಹಾರದ ಸೂಚನೆಗಳು ಸಹ ಗೀತೆಯಲ್ಲಿವೆ. ಕುರುಕ್ಷೇತ್ರದಲ್ಲಿ ಸೈನ್ಯ ಜಮಾಯಿಸಿದ ನಂತರ ಯುದ್ಧ ಮಾಡುವುದನ್ನು ಬಿಟ್ಟು ಅರ್ಜುನ ಮತ್ತು ಭಗವಾನ್ ಶ್ರೀ ಕೃಷ್ಣ ದೀರ್ಘವಾಗಿ ತತ್ತ್ವಶಾಸ್ತ್ರದ ಪ್ರಮೇಯಗಳನ್ನು ಚರ್ಚಿಸುತ್ತಾರೆಂಬುದು ಕೌತುಕದ ಸಂಗತಿ, ಆದರೆ ಅದು ಗೌಣ. ರಾಮಾಯಣದ ಯುದ್ಧಕಾಂಡದಲ್ಲಿ ಆದಿತ್ಯ ಹೃದಯವೆಂದು ಪ್ರಸಿದ್ಧವಾದ ೧೦೭ನೆಯ ಸರ್ಗದ ಜಾಗದಲ್ಲಿ, ಬೇಕಾದರೆ ಅಲ್ಪ ಬದಲಾವಣೆಗಳನ್ನು ಮಾಡಿ, ಗೀತೆಯ ಸಾರವನ್ನು ಸೇರಿಸಿಬಿಡಬಹುದು. ಆದಿತ್ಯ ಹೃದಯ ಸರ್ಗದಂತೆ ಇದೂ ಪ್ರಕ್ಷಿಪ್ತ ಭಾಗವಾಗಿ ಉಳಿಯಲು ಅಡ್ಡಿಯಿಲ್ಲ. ಅಂದರೆ, ಕುರುಕ್ಷೇತ್ರದ ಯುದ್ಧವು ತತ್ತ್ವಶಾಸ್ತ್ರದ ಜಿಜ್ಞಾಸೆಗೆ ಒಂದು ಹಿನ್ನೆಲೆ ಒದಗಿಸಿದೆ, ಅಷ್ಟೆ. ಗೀತೆಯ ಕರ್ತೃವು ಹೇಳಬೇಕಾದ್ದನ್ನು ಹೇಳಲು ಅದನ್ನೊಂದು ಮೆಟ್ಟಿಲಾಗಿಸಿ ಕೊಂಡಿದ್ದಾನೆ. ತತ್ತ್ವಶಾಸ್ತ್ರ ಪ್ರಮೇಯಗಳನ್ನು ಹತ್ತು ಹಲವು ವಿಧಗಳಲ್ಲಿ ಪ್ರತಿಪಾದಿಸುವುದು ಭಾರತೀಯ ಸಂಸ್ಕೃತಿಯಲ್ಲಿ ನಡೆದುಬಂದ ದಾರಿ. ಒಬ್ಬೊಬ್ಬ ತತ್ತ್ವಶಾಸ್ತ್ರಜ್ಞನು ಒಂದೊಂದು ರೂಪವನ್ನು ಆಯ್ದುಕೊಂಡು ತನ್ನ ವಿಷಯವನ್ನು ಮಂಡಿಸುತ್ತಾನೆ. ಅದು ಇಂಥದೇ ರೂಪದಲ್ಲಿರಬೇಕೆಂದೇನೂ ಇಲ್ಲ. ಉಪನಿಷತ್ತುಗಳದು ಒಂದು ವಿಧಾನ; ಬ್ರಹ್ಮಸೂತ್ರದ್ದು ಬೇರೊಂದು ವಿಧಾನ; ಬುದ್ಧನದು ಅವೆರಡಕ್ಕಿಂತಲೂ ಭಿನ್ನವಾದ್ದು. ಹನ್ನೊಂದನೆಯ ಶತಮಾನದಲ್ಲಿ ಚಾರ್ವಾಕ ಸಿದ್ಧಾಂತವನ್ನು ಖಂಡಿಸಲು ಕೃಷ್ಣಮಿಶ್ರನು "ಪ್ರಬೋಧ ಚಂದ್ರೋದಯ" ಎಂಬ ನಾಟಕವನ್ನು ಬರೆದಿದ್ದ. ಬೇರೆಯಂತೆ ಸೂತ್ರಗಳು, ಕಾರಿಕೆಗಳು, ಭಾಷ್ಯಗಳು ಹೀಗೆ ಎಲ್ಲ ಪ್ರಕಾರಗಳನ್ನೂ ಬಳಸಲಾಗಿದೆ. ಸಾಕ್ರಟೀಸನ ಚಿಂತನೆಯನ್ನು ದಾಖಲಿಸಲು ಪ್ಲೇಟೋ ಸಂಭಾಷಣೆಯ ಮಾದರಿಯನ್ನು ಅನುಸರಿಸಿದ. ಬಾರ್ಕ್ಲೆ, ಏಂಗೆಲ್ಸ್ ಮುಂತಾದವರು ಗದ್ಯಶೈಲಿಯನ್ನು ಅಳವಡಿಸಿಕೊಂಡಿದ್ದಾರೆ. ನೀಟ್ಶೆ ತನ್ನ ಗೊಂದಲದ ಚಿಂತನೆಯನ್ನು "ಝುರತುಷ್ಟ್ರನು ಹೇಳಿದ್ದು" ಎಂಬ ಶೈಲಿಯಲ್ಲಿ ಪ್ರತಿಪಾದಿಸಿದ್ದಾನೆ. ಭಗವದ್ಗೀತೆಯು ಕೃಷ್ಣಾರ್ಜುನ ಸಂವಾದದ ರೂಪವನ್ನು ಆರಿಸಿಕೊಂಡಿದೆ. "ಭಗವಂತನೇ ಹೇಳಿದ್ದು" ಎಂಬ ಮಾತು ಹಲವು ಮತಗ್ರಂಥಗಳ ಸಂದರ್ಭದಲ್ಲಿ ಕೇಳಿಬಂದಿದೆ. ಯಹೂದಿಗಳ ಟೋರಾ, ಕ್ರಿಶ್ಚಿಯನ್ನರ ಬೈಬಲ್, ಇಸ್ಲಾಂನ ಕುರ್-ಆನ್ ಮುಂತಾದುವೆಲ್ಲಾ ದೇವರ ವಾಣಿಗಳೇ. ದೇವರು ಒಬ್ಬನೇ ಎಂದು ಎಲ್ಲರೂ ಅನ್ನುತ್ತಾರೆ. ಆದರೆ ದೇವರುಗಳ ವಾಣಿ ಮಾತ್ರ ಒಂದೇ ಆಗಿಲ್ಲ. ಅಂತಹ ವಾಣಿಗಳ ಪೈಕಿ ಗೀತಾ ವಾಣಿಯೂ ಸೇರಿದೆ.

ಮಹಾಭಾರತದಲ್ಲಿ ವಾಹೀಕ ಮತ್ತು ಆರಟ್ಟ ಎಂಬ ಎರಡು ಬುಡಕಟ್ಟಿನವರ ಬಗ್ಗೆ ಕರ್ಣನು ಶಲ್ಯನಿಗೆ ದೀರ್ಘವಾದ ವಿವರಣೆ ನೀಡಿದ್ದಾನೆ. ಅದರ ಸಾರಾಂಶ ಅವರೆಲ್ಲಾ ಅನೀತಿವಂತರು ಎಂದು. ಆ ಬುಡಕಟ್ಟುಗಳನ್ನು 'ಗಣ' ಎಂದು ಕರೆಯುತ್ತಿದ್ದರು. ಅಂತಹ ಗಣಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ರಮಗಳನ್ನು ದೂಷಿಸಲು ಕರ್ಣನು, ತಾನು ಕುರುರಾಜನ ಆಸ್ಥಾನದಲ್ಲಿ ಯಾರೋ ಬ್ರಾಹ್ಮಣರು ಹೇಳಿದ್ದುದನ್ನು ಕೇಳಿದ್ದುದೆಂದು ಬುಡಕಟ್ಟುಗಳ ಕೆಲವು ಆಚರಣೆಗಳನ್ನು ಹೆಸರಿಸಿದ್ದಾನೆ. ಆ ಬುಡಕಟ್ಟುಗಳು ಕ್ಷಯಿಸುತ್ತಿದ್ದು ರಾಜ್ಯ ಪ್ರಭುತ್ವವು ತಲೆಯೆತ್ತುತ್ತಿದ್ದಂತಹ ಒಂದು ಚಾರಿತ್ರಿಕ ಘಟ್ಟ ನಮ್ಮಲ್ಲಿದ್ದಿತು. ಅಂಥದೇ ಪ್ರಕ್ರಿಯೆ ಬೇರೆ ಅನೇಕ ದೇಶಗಳ ಇತಿಹಾಸದಲ್ಲೂ ನಡೆದಿದೆ. ಬುದ್ಧನ ಕಾಲದಲ್ಲಿ ಅಜಾತ ಶತ್ರುವು ವಜ್ಜಿಗಳೆಂಬ ಬುಡಕಟ್ಟಿನವರನ್ನು ಧ್ವಂಸ ಮಾಡಬೇಕೆಂದು ಹವಣಿಸಿದ. ಆ ಬಗ್ಗೆ ಮಾತನಾಡಿ ಬುದ್ಧನ ಅಭಿಪ್ರಾಯವನ್ನು ತಿಳಿಯಲೆಂದು ಅವನ ಸಚಿವನನ್ನು ಬುದ್ಧನಲ್ಲಿಗೆ ಕಳುಹಿಸಿದ. ಎರಡು ಮೂರು ಸಾರಿ ಪ್ರಶ್ನಿಸಿದರೂ ಬುದ್ಧ ಏನನ್ನೂ ಹೇಳದೆ ಮೌನಿಯಾಗಿದ್ದ. ಕಡೆಗೆ ಅವನು ಸಚಿವನನ್ನು ಲೆಕ್ಕಿಸದೆ ತನ್ನ ಶಿಷ್ಯ ಆನಂದನಿಗೆ ಹೇಳಿದ : "ಆನಂದ, ಎಲ್ಲಿಯವರೆಗೆ ವಜ್ಜಿಗಳು ತಮ್ಮ ಬುಡಕಟ್ಟು ಸಂಪ್ರದಾಯವನ್ನು ಬಿಟ್ಟುಕೊಡುವುದಿಲ್ಲವೋ ಅಲ್ಲಿಯವರೆಗೆ ಅವರು ಗಟ್ಟಿಯಾಗಿ ಉಳಿಯುತ್ತಾರೆ" ಎಂದು. ಈ ಪ್ರಸಂಗವು ಮಗಧ ರಾಜ್ಯವು ಪ್ರಗತಿಪಥದಲ್ಲಿ ಸಾಗುತ್ತಿದ್ದಾಗಿನದು. ಬುಡಕಟ್ಟುಗಳ ಅವಶೇಷಗಳ ಮೇಲೆ ರಾಜ್ಯಗಳು ಉಗಮಗೊಳ್ಳುತ್ತಿದ್ದ ಸಂಕ್ರಮಣದ ಕಾಲ ಅದು. ಅನೇಕ ಹೊಸ ಸಾಮಾಜಿಕ ಸಂಗತಿಗಳು ಘಟಿಸಲು ಅನುವಾಗುವಂತಹ ಸನ್ನಿವೇಶ ರೂಪುಗೊಳ್ಳುತ್ತಿತ್ತು. ಕಬ್ಬಿಣದ ಉಪಯೋಗವು ಉತ್ಪಾದನಾ ವಿಧಾನದಲ್ಲಿ ಅಪಾರ ಆವಿಷ್ಕಾರಗಳಿಗೆ ಇಂಬು ಮಾಡಿಕೊಟ್ಟಿದ್ದಿತು. ಹೊಸ ರಾಜ್ಯಗಳು, ಕ್ಷತ್ರಿಯರಲ್ಲದ ಪ್ರಭುಗಳು, ಏಳಿಗೆಗೆ ಬರುತ್ತಿದ್ದ ಕಾಲ. "ನಂದಾಂತಂ ಕ್ಷತ್ರಿಯಕುಲಂ" ಎಂಬ ಹೇಳಿಕೆ ಅದರ ಸೂಚಕ. ಆ ಸಮಾಜದ ಸ್ಥಿತಿಗತಿಗಳು ಅಭ್ಯಾಸಯೋಗ್ಯ ವಾಗಿವೆ : ಸಮಾಜದಲ್ಲಿ ಹೊಸ ಹುರುಪು, ಆಕಾಂಕ್ಷೆ, ಬೌದ್ಧಿಕ ಕ್ರಿಯಾಶೀಲತೆ ಮೈದಾಳುತ್ತಿವೆ; ಮೌಲ್ಯಗಳ ಮರುಪರೀಕ್ಷೆ ನಡೆಯುತ್ತಿದೆ, ಪ್ರಶ್ನೆಗಳನ್ನೆತ್ತುವವರು ಹೆಚ್ಚುತ್ತಿದ್ದಾರೆ. ಒಂದು ರೀತಿಯ ತುಮುಲ ಉಂಟಾಗುತ್ತಿರುವುದು 'ಪುನರುಜ್ಜೀವನ'ದ ಚಿಹ್ನೆ. ಯೂರೋಪಿನಲ್ಲಿ ಅದನ್ನು 'ರೆನೆಸ್ಸಾನ್ಸ್' ಎಂದರು. ಅದಕ್ಕೆ ಸುಮಾರು ಒಂದು ಸಾವಿರ ವರ್ಷದ ಹಿಂದಿನ ಸಮಾಚಾರ ಇದು. ಬುದ್ಧನನ್ನು ತನ್ನೊಬ್ಬ ಶಿಷ್ಯ ಕೇಳಿದ : "ಭಗವಾ, ನೀವು ಹೇಳುತ್ತಿರುವುದು ಶಾಸ್ತ್ರಗಳಿಗೆ ವಿರೋಧ ವಾಗಿದೆಯಲ್ಲ, ಏನು ಮಾಡುವುದು ?" ಬುದ್ಧ ಹೇಳಿದ, "ಹೌದೇ ? ಏನು ಮಾಡೋಣ, ಶಾಸ್ತ್ರಗಳನ್ನು ತಿದ್ದಿ ಬರೆಯಬಹುದಲ್ಲ !" ಎಂದು. ಅಂದಿನ ಶಾಸ್ತ್ರ ಸಂಪ್ರದಾಯದಲ್ಲಿ ಬುದ್ಧ ವಿರೋಧಿಸಿದ್ದೇನು ? ಏನೇನೋ ವಿರೋಧಿಸಿದ, ಅವುಗಳಲ್ಲಿ ಯಜ್ಞ ಮತ್ತು ಹಿಂಸೆ ಸೇರಿವೆ. ಯಜ್ಞವು ಪಶು ಸಂಗೋಪನಾ ಹಂತದ ಆಚರಣೆಯ ಮುಂದುವರಿದ ರೂಪ. ಅಂದಿನ ಕೃಷಿಪ್ರಧಾನ ಆರ್ಥಿಕತೆಯ ಹಿನ್ನೆಲೆಯಲ್ಲಿ ಬುದ್ಧನಿಗೆ ಅದು ಅಸಮಂಜಸವೆನಿಸಿತು. ಸಂಹಿತೆಗಳ ನಂತರದ ಗ್ರಂಥಗಳಿಗೆ ಬ್ರಾಹ್ಮಣಗಳೆಂಬ ಹೆಸರಿದೆ (ಅದು ಇಲ್ಲಿ ವರ್ಣಸೂಚಕ ಪದವಲ್ಲ), ಅವುಗಳಲ್ಲಿ ಯಜ್ಞದಲ್ಲಿ ಆಚರಣೆಗೆ ಬರುವ ಹಿಂಸೆಯನ್ನು ಸಮರ್ಥಿಸಲಾಗಿದೆ; ಕೊಲ್ಲಲ್ಪಟ್ಟ ಪ್ರಾಣಿಯು ಸ್ವರ್ಗಕ್ಕೆ ಹೋಗುತ್ತದಾದ್ದರಿಂದ ಅದು ಹಿಂಸೆ ಎನಿಸಿಕೊಳ್ಳುವುದಿಲ್ಲ, ಎಂಬುದು ಅಂತಹ ಒಂದು ಸಮರ್ಥನೆ. ಬುದ್ಧನು ಅದನ್ನು ತೀವ್ರವಾಗಿ ವಿರೋಧಿಸಿದ. ಆದರೆ ಚಾರ್ವಾಕರಂತೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಲಿಲ್ಲ. ಅವರಾದರೋ ಲೇವಡಿಗೆ ಹೆಸರಾದವರು. – ಅವರೆಂದರು, "ಕೊಲ್ಲಲ್ಪಟ್ಟ ಪ್ರಾಣಿಯು ಸ್ವರ್ಗಕ್ಕೆ ಹೋಗುತ್ತದಾದರೆ ಯಜ್ಞದಲ್ಲಿ ನಿನ್ನಪ್ಪನನ್ನೇ ಏಕೆ ಕೊಲ್ಲುವುದಿಲ್ಲ ?" ಎಂದು. ನಶಿಸಿಹೋಗುತ್ತಿದ್ದ ಬುಡಕಟ್ಟು ಮೌಲ್ಯಗಳನ್ನು ಯಥಾವತ್ತಾಗಿ ಕಾಪಾಡಲು ಬುದ್ಧನು ಪ್ರಭುತ್ವದ ಹೊರಗೆ ಸ್ವತಂತ್ರವಾದ ಸಂಘವನ್ನು ಸ್ಥಾಪಿಸಿಕೊಂಡ. ಅದೇಕೆ ಶಾಶ್ವತವಾಗಿ ಉಳಿಯಲಿಲ್ಲವೆಂಬುದು ಬೇರೆ ಪ್ರಶ್ನೆ. 'ಸ್ವತಂತ್ರ' ಬೌದ್ಧ ಸಂಘಗಳು ಭಿಕ್ಷೆಯಿಂದ ಜೀವಿಸಬೇಕಾಗಿತ್ತು, ಅವು ಉತ್ಪಾದನೆಯ ಚಟುವಟಿಕೆಯಲ್ಲಿ ತೊಡಗಿರಲಿಲ್ಲ. ಅದರಿಂದಾಗಿ ಅವು "ಸ್ವತಂತ್ರ ಪರತಂತ್ರ ಜೀವಿ"ಗಳಾಗಿ ಹೋದವು. ಕ್ರಮೇಣ ರಾಜಾಶ್ರಯವೂ ಕೂಡಿಬಂತು. ಆಗ ಬುಡಕಟ್ಟು ಮೌಲ್ಯ ಇನ್ನೆಲ್ಲಿಯದು ? ಭಿಕ್ಖುಗಳು 'ಸಂಘಂ ಶರಣಂ ಗಚ್ಛಾಮಿ' ಮತ್ತು 'ಬುದ್ಧಂ ಶರಣಂ ಗಚ್ಛಾಮಿ' ಎಂದರು. 'ಧಮ್ಮಂ ಶರಣಂ ಗಚ್ಛಾಮಿ' ಎಂದಾಗ ಅವರ ದೃಷ್ಟಿಯಲ್ಲಿದ್ದುದು ಸಮುದಾಯದ ಧರ್ಮ, ಕಟ್ಟುಪಾಡು, ನಡವಳಿಕೆ. ಬುದ್ಧನ ಜಾಗದಲ್ಲಿ ಗೀತೆಯ ಕೃಷ್ಣ "ಮಾಮೇಕಂ ಶರಣಂ ವ್ರಜ" (ನನ್ನೊಬ್ಬನಿಗೆ ಶರಣಾಗು) ಎಂದ. ಹಾಗೆನ್ನುವ ಮುನ್ನ ಗೀತೆ ಇನ್ನೊಂದು ಮಾತು ಸೇರಿಸಿದೆ : "ಎಲ್ಲ ಧರ್ಮಗಳನ್ನೂ ಬಿಟ್ಟು ನನ್ನೊಬ್ಬನಿಗೆ ಶರಣಾಗು" ಎಂದು (ಸರ್ವಧರ್ಮಾನ್ ಪರಿತ್ಯಜ್ಯ). ಬಿಡಬೇಕಾದ ಧರ್ಮಗಳು ಯಾವುವು ? ಉತ್ತರ ಸಂಕ್ಷಿಪ್ತವಾಗಿದೆ : ಬೇರೆಯವರ ಧರ್ಮಗಳಿಗೆ ಅಂಟಿಕೊಳ್ಳಹೋಗಬೇಡ, ಏಕೆಂದರೆ ಸ್ವ-ಧರ್ಮದಲ್ಲಿ ತೀಯುವುದು ಶ್ರೇಯಸ್ಕರ (ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ). ಬುದ್ಧನು 'ಪರ' ಧರ್ಮವೆಂಬುದೇನೂ ಇಲ್ಲ, ಇರುವುದೆಲ್ಲಾ ಸಮುದಾಯದ ಧರ್ಮ, ಎಂದ; ಗೀತೆಯು ವರ್ಣಧರ್ಮಕ್ಕೆ ಮಹತ್ತರವಾದ ಸ್ಥಾನವನ್ನು ಕಲ್ಪಿಸಿಕೊಟ್ಟಿತು. ಸಮಾಜದ ಸಂಕ್ರಮಣಾವಸ್ಥೆಯ ಘರ್ಷಣೆ, ತಿಕ್ಕಾಟ, ಇದು. ಎಲ್ಲವೂ ಸುಗಮವಾಗಿ ನಡೆಯುತ್ತಿವೆ, ಸಮಾಜವು ಭದ್ರವಾಗಿ ನಿಂತಿದೆ; ಪ್ರಭುತ್ವವು ಅಪೇಕ್ಷಿಸುವ ನೀತಿ-ನಿಯಮಗಳು ಜಾರಿಯಲ್ಲಿವೆ, ಎಂಬ ಸಂತಸ ಅನುಭವಿಸಬೇಕಾದ ಸಂದರ್ಭದಲ್ಲಿ ಯಾವನೋ ಒಬ್ಬ ಅರ್ಜುನನೆಂದು ಮುಂದೆ ಬರುತ್ತಾನೆ, ವಿಷಾದ ವ್ಯಕ್ತಪಡಿಸುತ್ತಾನೆ, ಪ್ರಶ್ನೆಗಳ ಸುರಿಮಳೆ ಸುರಿಸುತ್ತಾನೆ, ಪ್ರಭುತ್ವದ ನೀತಿ-ನಿಯಮಗಳು ಸಲ್ಲವು, ಅವು ಸಮುದಾಯದ ಹಿತಕ್ಕೆ ಮಾರಕವಾದವು, ಏನೆಲ್ಲಾ ನಡೆದುಹೋಗುತ್ತಿದೆ ಎಂದು ಚಡಪಡಿಸುತ್ತಾನೆ.

**ಚಿತೆ**

ಬೆಂಕಿಯ ಒಡಲಿಗೆ
ಒಂದೇ ಅದಕೆ
ಕರಿಯ – ಬಿಳಿಯ
ಭೇದವಿಲ್ಲ.
ದಹಿಸುವುದು
ಕಿಚ್ಚನ್ನ
ಕೆಂಪ ಕೆಂಪಗೆ ಎಲ್ಲ.

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೭೩

ಅವನನ್ನು ಸಮಾಧಾನಗೊಳಿಸಿ "ಎಲ್ಲಾ ಸೊಗಸಾಗಿದೆ, ಪಲ್ಲಟಗೊಳಿಸುವ ಪ್ರಯತ್ನ ಬೇಡ" ಎಂದು ಅಯಸ್ಕಾಂತದೋಪಾದಿಯಲ್ಲಿ ಅವನನ್ನು ಸೆಳೆಯಲು ಪ್ರಭುತ್ವ ಯತ್ನಿಸಬೇಕು. ಶ್ರೀ ಭಗವಾನ್ ಅದರ ಸೂಕ್ತ ಪ್ರತಿನಿಧಿ. ಅವನ ಸಾಂತ್ವನ, ಸಹನೆ, ಅಸ್ತಿತ್ವದಲ್ಲಿರುವ ವ್ಯವಸ್ಥೆಯ ರಂಜಕ ವರ್ಣನೆ, ಸಮರ್ಥನೆ, ಎಲ್ಲವೂ ಅರ್ಜುನನೆಂಬ ನಾಗರಿಕ ಚಿಂತಕ ಮತ್ತು ಪೃಚ್ಛಕನನ್ನು ಮುಟ್ಟಬೇಕು, ತಟ್ಟಬೇಕು; ಅಸ್ತಿತ್ವದಲ್ಲಿರುವ ಚಿಂತನಾ ನೆಲೆಗಳಲ್ಲಿ ವೈರುಧ್ಯವಿದ್ದರೆ ಅವನ್ನು ಸಮನ್ವಯ ಸೂತ್ರದಿಂದ ಅವಿರುದ್ಧವಾದವು, ಸ್ವೀಕಾರಾರ್ಹವಾದವು ಎಂದು ಸ್ಥಾಪಿಸಬೇಕು. ಭಗವದ್ಗೀತೆ ಅದಕ್ಕೆ ಪ್ರಖರ ಸಾಧನವಾಗಬಲ್ಲದು. ಸಮಕಾಲೀನ ಸಂದರ್ಭವೂ ಸೇರಿದಂತೆ ಭಾರತದ ಎರಡು ಸಾವಿರ ವರ್ಷಗಳ ಇತಿಹಾಸದಲ್ಲಿ ಅದು ತನ್ನ ಕಾರ್ಯವನ್ನು ನಿರ್ವಹಿಸಿದೆ.

ಚರಿತ್ರೆಯ ದೃಷ್ಟಿಯಿಂದ ನೋಡಿದರೆ ಅರ್ಜುನನ "ವಿಷಾದ"ವು ನಿಜವಾಗಿ ಘಟಿಸಿದೆ : ಬುಡಕಟ್ಟುಗಳ ನಾಶವಾಗಿದೆ (ಅಂದರೆ, ಕುಲಕ್ಷಯ ಸಾಗುತ್ತಿದೆ); ಜೀವಹತ್ಯೆಯು ಪ್ರಭುತ್ವದ ಆಕ್ರಮಣದಿಂದ ಜರುಗುತ್ತಿದೆ, ವಜ್ಜಿಗಳಂತಹ ಬುಡಕಟ್ಟುಗಳು ಧ್ವಂಸಕಾರಿ ದಾಳಿಗಳಿಗೆ ತುತ್ತಾಗುತ್ತಿವೆ; ಮತ್ತು ಆಗಬಾರದ ವರ್ಣಸಂಕರವು ಸಮಾಜದ ಹೊಸ್ತಿಲಿಗೆ ಬಂದು ನಿಂತಿದೆ. ಮಹಾಭಾರತವು ವರ್ಣಿಸುವ ಜೀವಹತ್ಯೆಯ ಅಗಾಧತೆ ಸಾಲದೆ, ಅದೆಷ್ಟು ಭಯಂಕರವಾಗಿದೆ. ಧರ್ಮದ, ಅಂದರೆ ಬುಡಕಟ್ಟು ಧರ್ಮದಿಂದ ಭಿನ್ನವಾದ ಪ್ರಭುತ್ವದ ಹೊಸ ಧರ್ಮದ, ಸಂಸ್ಥಾಪನೆಗಾಗಿ ಎರಡೂ ಕಡೆಯ ಅದೆಷ್ಟು ಅಕ್ಷೌಹಿಣಿ ಸೈನ್ಯಗಳು ನಾಶಗೊಳ್ಳಬೇಕು ! ಅಷ್ಟೆಲ್ಲಾ ಆದ ನಂತರ 'ಧರ್ಮ' ಸಂಸ್ಥಾಪನೆ ಆದದ್ದೆಷ್ಟು, ಅದು ಜೀವಂತವಾಗಿ ಉಳಿದದ್ದೆಷ್ಟು ಕಾಲ ? ಗೀತೆ, ಮನುಸ್ಮೃತಿ, ಬೌದ್ಧ ತ್ರಿಪಿಟಕಗಳು, ಲೋಕಾಯತ ದರ್ಶನ ಹೀಗೆ ಯಾವುದನ್ನು ಗಮನಿಸಿದರೂ ಅವೆಲ್ಲಾ ನಮ್ಮ ಸಮಾಜದ ಗರ್ಭದಿಂದ ಹೊಮ್ಮಿದಂಥವು, ಪ್ರತಿಕ್ರಿಯೆಗಳ ರೂಪದಲ್ಲಿ ಮೂಡಿಬಂದಂಥವು. ಅದನ್ನು ನಿರಾಕರಿಸಿ ಕೆಲವು ಮಹದ್ಗ್ರಂಥಗಳು ಎಲ್ಲೋ ಆಕಾಶದಿಂದ ಉದುರಿವೆಯೆಂಬಂತೆ ಪರಾಮರ್ಶೆ ಮಾಡುವುದು ವ್ಯರ್ಥ. ಇಂದು ಸಹ ಬುದ್ಧ, ಗೀತೆ, ಲೋಕಾಯತ, ಎಲ್ಲಾ ಪ್ರಾದುರ್ಭವವಾಗುತ್ತಲೇ ಇವೆ; ಅವುಗಳ ಸ್ವರೂಪ ಬೇರೆ, ಅಷ್ಟೇ. "ಪುರಿ ಶಂಕರಾಚಾರ್ಯ" ಎಂಬ ಘನ ನಾಮಧೇಯ ಹೊತ್ತ ವ್ಯಕ್ತಿ ಇಪ್ಪತ್ತನೆಯ ಶತಮಾನದ ಅಂತ್ಯದಲ್ಲಿ ಅಸ್ಪೃಶ್ಯತೆಯನ್ನು ಸಮರ್ಥಿಸಿದರೆ ಅದೂ ಒಂದು ತತ್ತ್ವಶಾಸ್ತ್ರ ಪ್ರಣಾಳಿಕೆಯಲ್ಲವೇನು ? ತತ್ವಶಾಸ್ತ್ರವಾಗಲೀ, ಮತಧರ್ಮವಾಗಲೀ, ಸಮಾಜದ ಹೊರಗಿನ ಘಟಕಗಳಲ್ಲ. ಮಹಾಭಾರತದಲ್ಲಿ ಉಲ್ಲೇಖವಾಗಿರುವಂತೆ ಕುರುಕ್ಷೇತ್ರ ಯುದ್ಧವನ್ನು ವಿರೋಧಿಸಿ ಪ್ರತಿಭಟಿಸಿದ ಒಂದು ಸಮಾಜ ವಿಭಾಗವಿತ್ತು ಮತ್ತು ಅದೇ ಯುದ್ಧವನ್ನು ವ್ಯಾಖ್ಯಾನಿಸಿದ ಗೀತೆಯೂ ಇತ್ತು. ಯುದ್ಧವೆಲ್ಲಾ ಮುಗಿದು ಪಾಂಡವರು ಹಸ್ತಿನಾಪುರದತ್ತ ರಥಗಳಲ್ಲಿ ಸಾಗುತ್ತಿದ್ದರಂತೆ. ದಾರಿಯುದ್ದಕ್ಕೂ ಸಂಭ್ರಮದಿಂದ ಯುಧಿಷ್ಠಿರನನ್ನು ಸ್ವಾಗತಿಸುವ ಜನ. ಅವರಲ್ಲಿ ಬ್ರಾಹ್ಮಣರೂ ಇದ್ದಾರೆ. ಅವರ ಮಧ್ಯದಿಂದ ಒಬ್ಬ ಮುಂದೆ ಬಂದು ಯುಧಿಷ್ಠಿರನನ್ನು ತೆಗಳಿದನಂತೆ : "ನಿನ್ನ ಬಾಂಧವರನ್ನು ಕೊಂದು ನಿನ್ನ ಹಸ್ತಗಳು ರಕ್ತಸಿಕ್ತವಾಗಿವೆ, ನೀನು ಹೇಗೆ ತಾನೆ ರಾಜನಾಗಲು ಅರ್ಹನಾದೀಯೆ !" ಎಂದು. ಧರ್ಮರಾಯ ಏನುತ್ತರ ಕೊಡುತ್ತಿದ್ದನೋ ತಿಳಿಯದು, ಏಕೆಂದರೆ ಮಹಾಭಾರತದಲ್ಲಿ ಅವನ ಉತ್ತರವನ್ನು ಪ್ರಸ್ತುತಪಡಿಸಿಲ್ಲ. ಬೇರೊಂದು ಅಂಶವನ್ನು ಆ ಮಹಾಕಾವ್ಯವು ದಾಖಲಿಸಿದೆ; ಹಾಗೆಂದು ಪ್ರಶ್ನೆ ಕೇಳಿದವನನ್ನು ಬೇರೆಯವರು ಬಡಿದುಹಾಕಿದರಂತೆ. ಬ್ರಾಹ್ಮಣ ವೇಷದಲ್ಲಿರುವ ಚಾರ್ವಾಕ ಅವನು ಎಂದು ಮೂದಲಿಸಿದರಂತೆ. ನಿಜ ಜೀವನದಲ್ಲಿ ವ್ಯತಿರಿಕ್ತ ಅಭಿಪ್ರಾಯ ಹೊಂದಿದ್ದವರನ್ನು ಹೀಗೆ ಬಡಿದುಹಾಕುತ್ತಿದ್ದರೆ, ಎಂಬುದು ಪ್ರಶ್ನೆಯಲ್ಲ. ಯುದ್ಧದ ಬಗ್ಗೆ ಭರ್ತ್ಸನೆಯ ಪ್ರತಿಕ್ರಿಯೆಯೂ ಇರುತ್ತಿತ್ತೆಂಬುದು ವಾಸ್ತವ. ಅದೇ ಮುಖ್ಯ. ಅರ್ಜುನನ ವಿಷಾದವು ಪ್ರತಿನಿಧಿಸುವ ಮೂಲಭೂತ ಅಂಶ ಇದು: ಬುಡಕಟ್ಟು ವ್ಯವಸ್ಥೆಯ ಸಾಮುದಾಯಿಕ ಮೌಲ್ಯವು ವೇದಧರ್ಮ; ಅದಕ್ಕೆ ಪ್ರತಿಯಾಗಿ ಹೊಸ ಪ್ರಭುತ್ವಗಳಡಿ ವರ್ಣಧರ್ಮವು ಮಾನ್ಯತೆ ಪಡೆಯುತ್ತಿದೆ. ಸಂಘರ್ಷವಿರುವುದು ಇವೆರಡರ ನಡುವೆ. "ಬುಡಕಟ್ಟು ಮೌಲ್ಯವು ಇಂದಿಗೆ ಅಪ್ರಾಸಂಗಿಕ, ವರ್ಣಧರ್ಮವೇ ಇಂದು ಪ್ರಶಸ್ತವಾದದ್ದು" ಎಂದ ಕೃಷ್ಣ. "ಈ ವರ್ಣಧರ್ಮವನ್ನು ಕಿಂಚಿತ್ತಾದರೂ ಸರಿಯೇ, ಪಾಲಿಸುತ್ತ ಮುನ್ನಡೆದರೆ ಮಹದ್ಭಯದಿಂದ ನಾವು ಪಾರಾಗುತ್ತೇವೆ" (ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್–ಗೀತೆ ೨.೪೦) ಎನ್ನುತ್ತಾನೆ ಶ್ರೀ ಭಗವಾನ್.

ಐತಿಹ್ಯಗಳನ್ನು ಬದಿಗೆ ಸರಿಸಿ ನೋಡಿದರೆ ಗೀತೆಯ ರಚನೆಯಾದದ್ದು ಯಾವುದೋ ಯುಗದಲ್ಲಲ್ಲ, ಬುದ್ಧೋತ್ತರ ಕಾಲದಲ್ಲಿ ಎಂಬುದನ್ನು ಒಪ್ಪಬೇಕಾಗುತ್ತದೆ. ಅದು ಪ್ರಾಚೀನವಾದಷ್ಟೂ ಹೆಚ್ಚು ಮೌಲಿಕವಾಗುತ್ತದೆ ಎಂಬ ಭ್ರಮೆಗೆ ಸಿಲುಕಿದವರನ್ನು ತೃಪ್ತಿಗೊಳಿಸಲು ನಾವು ಗೀತೆಯನ್ನು ಕ್ರಿ.ಪೂ. ೧೦೦೦ ಅಥವಾ ೮೦೦ರ ಕಾಲದ್ದೆಂದು ಹೇಳಬಾರದು. ಇತಿಹಾಸತಜ್ಞ ಡಿ. ಡಿ. ಕೊಸಾಂಬಿ ಅದನ್ನು ಕ್ರಿ. ಶ. ೧೫೦ರಿಂದ ೩೫೦ರ ನಡುವೆ ರಚಿತವಾದ ಕೃತಿಯೆಂದು ವಾದಿಸಿದ್ದಾರೆ. ಬ್ರಹ್ಮಸೂತ್ರವನ್ನು ಗೀತೆ ಹೆಸರಿಸಿದೆ (೧೩.೪ : ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿಃ ವಿನಿಶ್ಚಿತೈಃ); ಆದ್ದರಿಂದ ಕನಿಷ್ಠ ಅದು ಬ್ರಹ್ಮಸೂತ್ರ ಗ್ರಂಥದ ನಂತರದ್ದು. ಮತ್ತು ಬ್ರಹ್ಮಸೂತ್ರಕ್ಕೆ ಬೌದ್ಧ ದರ್ಶನದ ಪರಿಚಯವಿದೆ. ಯಾವ ಕಾಲದಲ್ಲಿ ಗೀತೆಯನ್ನು ಮಹಾಭಾರತದೊಳಗೆ ಅಂತರ್ಗತಗೊಳಿಸಲಾಯಿತೆಂದು ನಿಶ್ಚಿತವಾಗಿ ಹೇಳಬರುವುದಿಲ್ಲ, ಆದರೆ ಅದಕ್ಕೆ ಸೇರಿಸಲ್ಪಟ್ಟ ಭಾಗವಂತೂ ಹೌದು. ಬೌದ್ಧಧರ್ಮಕ್ಕಿಂತಲೂ ಮುಂಚಿನದಾಗಿದ್ದಿದ್ದರೆ ಗೀತೆಯಲ್ಲಿ (೨ನೇ ಅಧ್ಯಾಯ) ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳುತ್ತಿರಲಿಲ್ಲವೆಂದು ತರ್ಕಿಸುವವರೂ ಇದ್ದಾರೆ. ಜೊತೆಗೆ, ಗೀತೆಯಲ್ಲಿ ನ್ಯಾಯ ಮತ್ತು ವೈಶೇಷಿಕ ದರ್ಶನಗಳನ್ನು ಬಿಟ್ಟು ಬೇರೆಲ್ಲ 'ಆಸ್ತಿಕ' ದರ್ಶನಗಳ (ಸಾಂಖ್ಯ, ಯೋಗ, ಪೂರ್ವ ಮೀಮಾಂಸೆ ಮತ್ತು ಉತ್ತರ ಮೀಮಾಂಸೆ ಅಥವಾ ವೇದಾಂತ) ಪ್ರಸ್ತಾಪವೂ ಇದೆ. ಅವೆಲ್ಲಾ ಉಪನಿಷತ್ತುಗಳಲ್ಲೂ ಇದ್ದಂಥವೇ. ಉಪನಿಷತ್ತುಗಳೆಂಬ ಗೋವುಗಳ ಮೂಲಕ ಬಂದದ್ದು ಗೀತಾಮೃತವೆಂಬ ಮಾತು ರೂಢಿಯಲ್ಲಿದೆ. ಆದರೆ ಉಪನಿಷತ್ತುಗಳಾಚೆಯ ಸಾಂಖ್ಯ ಸಹ ಗೀತೆಯ ಪರಿಧಿಯಲ್ಲಿದೆಯೆಂಬುದು ಗಮನಾರ್ಹ. ಅಶ್ವಘೋಷ (ಕ್ರಿ. ಶ. ೧ನೆಯ ಶತಮಾನ) – ಕಾಲಿದಾಸ (ಬಹುಶಃ ಕ್ರಿ. ಶ. ೩–೪ನೆಯ ಶತಮಾನ), ಇವರಿಗೆಲ್ಲಾ "ಭಗವದ್ಗೀತೆ" ಗೊತ್ತಿದ್ದಿತೇ ? ನನಗೆ ಗೊತ್ತಿಲ್ಲ. ಆದರೆ ಗೀತೆಯನ್ನು ಸೂಚಿಸುವ ಉಲ್ಲೇಖಗಳು ಕ್ರಿ. ಶ. ಏಳನೆಯ ಶತಮಾನದ ನಂತರವೆಂದು ಕೊಸಾಂಬಿ ಗುರುತಿಸಿದ್ದಾರೆ. ಹ್ಯೂಯನ್ ತ್ಸಾಂಗ್ ದಾಖಲಿಸಿದ್ದಾನಂತೆ, ರಾಜಾಜ್ಞೆಯಂತೆ ಬ್ರಾಹ್ಮಣನೊಬ್ಬ ಭಗವದ್ಗೀತೆಯನ್ನು ನಕಲು ಮಾಡಿಕೊಟ್ಟ ಎಂದು.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

## ಮಾಹಿತಿ

ಆಗಸ್ಟ್ ತಿಂಗಳಲ್ಲಿ ಪ್ರಕಟವಾದ ಡಾ॥ ಬಿ. ಎಸ್. ಶೈಲಜಾ ಅವರ 'ಭಗ್ನಾವಶೇಷಗಳ ಜಾಡು ಹಿಡಿದು' ಲೇಖನದಲ್ಲಿ ಪುಟ ೫೮ರಲ್ಲಿರುವ ಚಿತ್ರ ಡುಗ್ಯೆಡ್ ಎಂಬ ಬ್ರಿಟಿಷ್ ಅಧಿಕಾರಿ ೧೮೭೭ರಲ್ಲಿ ಪ್ರಕಟಿಸಿದ 'ಲೆಟರ್ಸ್ ಫ್ರಮ್ ಕಾಶ್ಮೀರ' ಎಂಬ ಕೃತಿಯಲ್ಲಿರುವ ಕಾಲ್ಪನಿಕ ಚಿತ್ರ. ವಿಕಿಪೀಡಿಯ ಕೃಪೆ.
ಕ್ಯಾಂಟೀನ್ ಮಾರ್ಗಸೂಚಿಯ ಪ್ರಸ್ತಾಪವಿದೆ. ಚಿತ್ರ ಬಿಟ್ಟುಹೋಗಿತ್ತು. ಈಗ ಪ್ರಕಟಿಸುತ್ತಿದ್ದೇವೆ.






*ಕ್ಯಾಂಟೀನ್ ಎಂಬ ಮಾರ್ಗಸೂಚಿ*

# ಹೋರಾಟವೇ ಉಸಿರಾದ ಲೇಖಕಿ
# ಮಹಾಶ್ವೇತಾ ದೇವಿ

**ಡಾ॥ ಎನ್. ಗಾಯತ್ರಿ**

ಶ್ರೀ ಬರಗೂರು ರಾಮಚಂದ್ರಪ್ಪರವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ೧೯೯೨ರ ಜೂನ್ ತಿಂಗಳಲ್ಲಿ ಆಯೋಜಿಸಿದ್ದ 'ಕನ್ನಡ ಸಾಹಿತ್ಯದ ಪುನರ್ಮೌಲ್ಯೀಕರಣ' ಯೋಜನೆಯ ಉದ್ಘಾಟನೆಗಾಗಿ ಬಂಗಾಲದ ಪ್ರಖ್ಯಾತ ಲೇಖಕಿ ಮಹಾಶ್ವೇತಾ ದೇವಿಯವರನ್ನು ಆಹ್ವಾನಿಸಿದ್ದರು. ಬೆಂಗಳೂರಿಗೆ ಮೊದಲ ಬಾರಿ ಭೇಟಿ ನೀಡುತ್ತಿದ್ದ ಇವರು ತಾವು ಹೋಟೆಲಿನಲ್ಲಿ ತಂಗುವುದಕ್ಕೆ ಇಷ್ಟಪಡದೆ, ಯಾವುದಾದರೂ ಸಾಹಿತಿಯ ಮನೆಯಲ್ಲಿ ಉಳಿದುಕೊಳ್ಳಲು ಬಯಸಿ ತಮ್ಮ ಇಂಗಿತ ವ್ಯಕ್ತಪಡಿಸಿದರು. ಹಾಗಾಗಿ ಅವರು ವಿಜಯನಗರದಲ್ಲಿದ್ದ ಕವಿ ಶಿವಪ್ರಕಾಶರ ಮನೆಯಲ್ಲಿ ತಂಗಿದ್ದರು. ಅಚಲ ಪತ್ರಿಕೆಯ ಪರವಾಗಿ ಅವರನ್ನು ಸಂದರ್ಶಿಸಲು ನಾನು, ಸುಮಿತ್ರಾಬಾಯಿ ಮತ್ತು ನೇಮಿಚಂದ್ರ ಶಿವಪ್ರಕಾಶರ ಮನೆಗೆ ಹೋಗಿದ್ದೆವು. ಮೊದಲಿಗೆ ಶಿವಪ್ರಕಾಶ ದಂಪತಿಗಳು ಅವರಿಗೆ ನಮ್ಮನ್ನು "ಇವರು ಸ್ತ್ರೀವಾದಿಗಳು" ಎಂದು ಪರಿಚಯಿಸಿದರು. ತತ್‌ಕ್ಷಣವೇ ಮಹಾಶ್ವೇತಾ ದೇವಿಯವರು ಉದ್ವಿಗ್ನರಾಗಿ ಜಗತ್ತಿನ ಸ್ತ್ರೀವಾದಿಗಳನ್ನೆಲ್ಲಾ ತರಾಟೆಗೆ ತೆಗೆದುಕೊಂಡರು. ಕೊಂಚ ಗಾಬರಿಗೊಂಡ ನಾವು, ಸ್ವಲ್ಪ ಹೊತ್ತು ಪೆಚ್ಚಾಗಿ ಕುಳಿತಿದ್ದು ನಂತರ ಅಚಲ ಪತ್ರಿಕೆ, ಬೆಂಗಳೂರಿನ ಮಹಿಳಾ ಚಳುವಳಿಯ ವಿವರಗಳನ್ನೆಲ್ಲಾ ಕೊಡುತ್ತಿದ್ದಂತೆ ಶಾಂತರಾಗಿ ನಮ್ಮ ಮಾತುಗಳನ್ನು ಆಲಿಸಿದರು. ನನ್ನ ಕಲ್ಕತ್ತಾ ಭೇಟಿಗಳ ವಿವರ, ನನಗೆ ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಪರಿಚಯದ ಬಗ್ಗೆ ಹೇಳುತ್ತಿದ್ದಂತೆ ಅವರ ಚರ್ಯೆಯೇ ಬದಲಾಯಿತು. ಅವರು ಖ್ಯಾತ ತತ್ವಶಾಸ್ತ್ರಜ್ಞ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರಿಗೆ ತುಂಬ ಆಪ್ತರಾಗಿದ್ದರು. ದೇವಿಪ್ರಸಾದರ ಪತ್ನಿ ಅಲಕಾ ಚಟ್ಟೋಪಾಧ್ಯಾಯ ಅವರಿಗೆ ಕಾಲೇಜಿನಲ್ಲಿ ಸಂಗಾತಿ. ನನಗೂ ಅವರು ಆಪ್ತರೆಂದು ತಿಳಿದೊಡನೆ ಅವರು ನಮ್ಮೊಡನೆ ಬಹುಕಾಲದ ಸ್ನೇಹಿತರಂತೆ ಹರಟೆ ಹೊಡೆಯಲು ಆರಂಭಿಸಿದರು. ಸುಮಾರು ಎರಡೂವರೆ ಗಂಟೆಗಳ ಕಾಲ ನಮ್ಮೊಡನೆ ಹರಟೆ ಹೊಡೆದ ಅವರು ಅಂದು ನಮ್ಮೊಡನೆ ಹಂಚಿಕೊಂಡ ಕೆಲವು ವಿಚಾರಗಳನ್ನು ಇಲ್ಲಿ ಮತ್ತೊಮ್ಮೆ 'ಹೊಸತು' ಓದುಗರೊಂದಿಗೆ ಹಂಚಿಕೊಳ್ಳಬಯಸುತ್ತೇನೆ :

ಮಹಾಶ್ವೇತಾ ದೇವಿ ಹುಟ್ಟಿದ್ದು ಢಾಕಾದಲ್ಲಿ ೧೯೨೬ರಲ್ಲಿ. ಆದರೆ ಅವರು ಬಂಗಾಳ ವಿಭಜನೆಯ ಪ್ರಕ್ರಿಯೆಯಲ್ಲಿ ಅಸಂಖ್ಯಾತ ಬಂಗಾಳಿಗಳು ಎದುರಿಸಿದ ಯಾತನೆಗಳಿಗೆ ಒಳಗಾದವರಲ್ಲ. ಅವರ ತಂದೆ, ತಾತ, ಮುತ್ತಾತಂದಿರೆಲ್ಲಾ ಬ್ರಿಟಿಷ್ ಸರ್ಕಾರದಲ್ಲಿ ಉನ್ನತ ಅಧಿಕಾರಿಗಳಾಗಿದ್ದವರು. ತಂದೆಗೆ ವರ್ಗವಾದಾಗ ಬೇರೆ ಬೇರೆ ಸ್ಥಳಗಳಿಗೆ ಹೋಗುವುದು ಕುಟುಂಬದವರಿಗೆ ಅನಿವಾರ್ಯವಾದ್ದರಿಂದ ಬಂಗಾಳದ ವಿಭಜನೆಗೆ ಮೊದಲೇ ಅವರ ಕುಟುಂಬ ಈಗಿನ ಪಶ್ಚಿಮ ಬಂಗಾಳದತ್ತ ವಲಸೆ ಬಂದದ್ದು ಒಂದು ಸಹಜ ಘಟನೆಯಾಗಿತ್ತು. ಮಕ್ಕಳ ವಿದ್ಯಾಭ್ಯಾಸದ ಬಗ್ಗೆ ತಂದೆಗೆ ತುಂಬ ಕಳಕಳಿಯಿದ್ದುದರಿಂದ ಕಲ್ಕತ್ತಾ ಇವರ ಕುಟುಂಬಕ್ಕೆ ನೆಲೆಯಾಯಿತು. ಇವರ ತಂದೆ ಮಾನಿಷ್ ಘಟಕ್ ಪ್ರಖ್ಯಾತ ಕವಿ ಮತ್ತು ಕಾದಂಬರಿಕಾರರು. ತಾಯಿ ಧರಿತ್ರಿ ದೇವಿ ಲೇಖಕಿ ಮತ್ತು ಸಾಮಾಜಿಕ ಕಾರ್ಯಕರ್ತೆ ಹಾಗೂ ಚಿಕ್ಕಪ್ಪ ಋತ್ವಿಕ್ ಘಟಕ್ ಹೆಸರಾಂತ ಚಿತ್ರ ನಿರ್ಮಾಪಕ. ಮಹಾಶ್ವೇತಾ ದೇವಿ ಅವರ ಬಾಲ್ಯದ



"ಬದುಕು ಗಣಿತವಲ್ಲ. ಮನುಷ್ಯನು ರಾಜಕೀಯದಾಟಕ್ಕೆ ಹೇಳಿ ಮಾಡಿಸಿದ ವ್ಯಕ್ತಿಯಲ್ಲ. ನನ್ನ ದೃಷ್ಟಿಯಲ್ಲಿ ಎಲ್ಲ ರಾಜಕೀಯ ಕಾರ್ಯಕ್ರಮಗಳು ಮನುಷ್ಯನ ಅಸ್ತಿತ್ವ ಮತ್ತು ನ್ಯಾಯದ ನೆಲೆಯನ್ನು ಪಡೆದಿರಬೇಕು. ಸದ್ಯದ ಸಾಮಾಜಿಕ ವ್ಯವಸ್ಥೆ ಪರಿವರ್ತನೆಗೊಳ್ಳಬೇಕು. ಸ್ವಾತಂತ್ರ್ಯ ಸಂದ ಇಷ್ಟು ವರ್ಷಗಳ ನಂತರವೂ ನನ್ನ ಜನ ಹಸಿವಿನಿಂದ ನರಳುತ್ತಿದ್ದಾರೆ; ಭೂಹೀನರಾಗಿದ್ದಾರೆ; ಜೀತದಾಳುಗಳಾಗಿದ್ದಾರೆ. ಈಗಿರುವ ವ್ಯವಸ್ಥೆ ವಿಮೋಚನೆ ತರುವ ದಿಕ್ಕಿನಲ್ಲಿ ಸೋತಿದೆ. ಇಂಥ ಸ್ಥಿತಿಯೇ ನನ್ನ ಬರವಣಿಗೆಯ ಹಿಂದಿರುವ ಸ್ಫೂರ್ತಿಯ ಸೆಲೆ. ನಾನು ನನ್ನ ಶಕ್ತ್ಯಾನುಸಾರ ಜನಸಮುದಾಯದ ಬಗ್ಗೆ ಬರೆಯುತ್ತಾ ಹೋಗುತ್ತೇನೆ. ಆದ್ದರಿಂದ ನಾನು ಯಾವುದೇ ಅಳುಕುಗಳಿಲ್ಲದೆ ಸಮಾಜವನ್ನು ಎದುರಿಸಬಲ್ಲೆ."




ಶಿಕ್ಷಣವನ್ನು ಶಾಂತಿನಿಕೇತನದಲ್ಲಿ ಪಡೆದರು. ನಂತರ ಕಲ್ಕತ್ತೆಗೆ ಬಂದು ಕಾಲೇಜು ಶಿಕ್ಷಣ ಮುಂದುವರೆಸಿ ಕಲ್ಕತ್ತಾ ವಿಶ್ವವಿದ್ಯಾಲಯದಿಂದ ಇಂಗ್ಲಿಷ್ ಎಂ.ಎ. ಪದವಿ ಪಡೆದರು.

ಸೃಜನಶೀಲತೆಯ ಕ್ರಿಯಾತ್ಮಕ ಅಭಿವ್ಯಕ್ತಿಗೆ ಸಕಲ ಅವಕಾಶಗಳೂ ಇದ್ದ ಶಾಂತಿನಿಕೇತನದಲ್ಲಿ ಮಹಾಶ್ವೇತಾ ದೇವಿಯ ಪ್ರತಿಭೆ ಅರಳತೊಡಗಿತು. ಪದ್ಯಗಳನ್ನು ರಚಿಸುವುದು, ನಾಟಕಗಳನ್ನು ಬರೆದು ನಿರ್ದೇಶಿಸುವುದು, ನಟಿಸುವುದು, ಪ್ರಯೋಗಗಳನ್ನು ಮಾಡುವುದು – ಹೀಗೆ ಎಲ್ಲ ಬಗೆಯ ಜವಾಬ್ದಾರಿಯನ್ನು ಮಹಾಶ್ವೇತಾ ದೇವಿ ಸಮರ್ಥವಾಗಿ ನಿರ್ವಹಿಸುತ್ತಿದ್ದುದರಿಂದ 'ಬರವಣಿಗೆ' ಅವರಿಗೆ ಹೆಚ್ಚುಗಾರಿಕೆ ಎನಿಸಿರಲಿಲ್ಲ. ತೀರ ಸಹಜವಾದ ಕಲಿಕೆಯ ಅಂಗವೇ ಆಗಿ ಮೈಗೂಡಿತು, ಎಂದು ನೆನೆಸಿಕೊಂಡ ಮಹಾದೇವಿಯವರ ಮೊಟ್ಟ ಮೊದಲ ಪ್ರಕಟಿತ ಲೇಖನ (೧೯೩೯)ಕವಿ ಮಹೇಂದ್ರರ "My Childhood" ಪ್ರಬಂಧವನ್ನು ಕುರಿತದ್ದಾಗಿತ್ತು. ಅದನ್ನು ರವೀಂದ್ರನಾಥ ಠಾಗೋರರೇ ಮೆಚ್ಚಿ, ಮಕ್ಕಳ ಪತ್ರಿಕೆಯಲ್ಲಿ ಪ್ರಕಟಿಸಲು ಕಾರಣರಾಗಿದ್ದರು. ಆದರೆ, ಮೆಟ್ರಿಕ್ ವಿದ್ಯಾಭ್ಯಾಸಕ್ಕೆಂದು ಕಲ್ಕತ್ತೆಗೆ ವಾಪಸ್ಸಾದ ನಂತರ ಅವರ ಬರವಣಿಗೆ ನಿಂತುಹೋಗಿತ್ತು. ಬಿ.ಎ. ಪೂರೈಸುವ ಮೊದಲೇ ಅವರಿಗೆ ಪ್ರಸಿದ್ಧ ನಾಟಕಕಾರ, ಇಪ್ಟಾದ ಸ್ಥಾಪಕ ಸದಸ್ಯರಲ್ಲೊಬ್ಬರಾಗಿದ್ದ ಬಿಜೋನ್ ಭಟ್ಟಚಾರ್ಯರೊಂದಿಗೆ ೧೯೪೭ರಲ್ಲಿ ಮದುವೆಯಾಗಿ ಹೋಗಿತ್ತು. ೧೯೪೮ರಲ್ಲಿ ಅವರ ಮಗ ನಬಾರುನ್ ಭಟ್ಟಾಚಾರ್ಯ ಜನಿಸಿದ.

ಮಹಾಶ್ವೇತಾ ದೇವಿ ಮತ್ತೆ ಬರೆಯತೊಡಗಿದ್ದು ೧೯೫೦ರಲ್ಲಿ. ಅದು ತುಂಬ ಗಂಭೀರವಾದ, ಇತಿಹಾಸ ಸಂಶೋಧಿತ, ವಾಸ್ತವಾಂಶಗಳನ್ನು ದಾಖಲಿಸುವ ರೂಪದ ಬರವಣಿಗೆ. ಝಾನ್ಸಿ ರಾಣಿ ಲಕ್ಷ್ಮಿಬಾಯಿಯ ಅಸದೃಶ ಶೌರ್ಯ, ಹೋರಾಟದ ವ್ಯಕ್ತಿತ್ವ ಆಕೆಯನ್ನು ಬಹುವಾಗಿ ಆಕರ್ಷಿಸಿತ್ತು. ಆ ಪ್ರದೇಶಕ್ಕೆ ಹೋಗಿ ಅಲ್ಲಿನ ಬುಡಕಟ್ಟು ಜನರ ಮೌಖಿಕ ಸಂಸ್ಕೃತಿಯಲ್ಲಿ, ಕತೆಗಳಲ್ಲಿ, ಲಾವಣಿಗಳಲ್ಲಿ, ಆ ಜನರ ನೆನಪುಗಳಲ್ಲಿ ಹರಳುಗಟ್ಟಿರುವ ಲಕ್ಷ್ಮಿದೇವಿಯ ವ್ಯಕ್ತಿತ್ವವನ್ನು, ಆ ಕಾಲದ ಇತಿಹಾಸವನ್ನು ಶೋಧಿಸಿ, ಅದಕ್ಕೆ ಜೀವನ ಚರಿತ್ರೆಯ ರೂಪ ನೀಡಿದ ಮಹಾಶ್ವೇತಾ ಇತಿಹಾಸ, ಸಾಮಾನ್ಯ ಜನತೆಯ ಬದುಕಿನ ಹೋರಾಟ ಮತ್ತು ಬರವಣಿಗೆಗಳನ್ನು ಸಂಯುಕ್ತವಾಗಿ ಗ್ರಹಿಸಬಲ್ಲ ತಮ್ಮದೇ ಆದ ದಾರಿಯನ್ನು ರೂಪಿಸಿಕೊಂಡರು. ಹೀಗೆ ೧೯೫೬ರಲ್ಲಿ ಅವರ ಮೊದಲ ಕಾದಂಬರಿ 'ಝಾನ್ಸಿ ರಾಣಿ' ಪ್ರಕಟವಾಯಿತು. ನಂತರ ಕ್ಷೇತ್ರ ಸಂಶೋಧನೆ ಮಾದರಿಯ ತಮ್ಮ ಕೆಲಸ ಮುಂದುವರಿಸಿ, ಸಂಗ್ರಹಿಸಿದ ದಾಖಲೆಗಳನ್ನು ಆಧರಿಸಿ ಅನೇಕ ಪತ್ರಿಕೆಗಳಿಗೆ ಬರೆಯತೊಡಗಿದರು. ಬಿ.ಎ. ಆದ ಎಷ್ಟೋ ಕಾಲದ ನಂತರ ೧೯೬೩ರಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯದಿಂದ ಎಂ.ಎ. ಪದವಿ ಪಡೆಯಲು ಸಾಧ್ಯವಾಯಿತು. ೧೯೬೪ರಲ್ಲಿ ಬಿಜೊಯ್ ಘರ್ ಕಾಲೇಜಿನಲ್ಲಿ ಶಿಕ್ಷಕಿಯಾಗಿ ಸೇರಿಕೊಂಡರು. ದುಡಿಯುವ ವರ್ಗದ ಹೆಣ್ಣುಮಕ್ಕಳೇ ಹೆಚ್ಚಾಗಿ ಕಲಿಯುತ್ತಿದ್ದ ಈ ಕಾಲೇಜಿನಲ್ಲಿ ಅವರು ಉಪನ್ಯಾಸಕಿಯಾಗಿ ಕೆಲಸ ಮಾಡುತ್ತಿದ್ದಾಗ ಸೃಜನಶೀಲ ಲೇಖಕಿಯಾಗಿಯೂ, ಪತ್ರಕರ್ತೆಯಾಗಿಯೂ ಕೆಲಸ ಮಾಡುತ್ತಿದ್ದರು. ೧೯೮೪ರಲ್ಲಿ ಆ ಕೆಲಸವನ್ನು ಬಿಟ್ಟು ಪೂರ್ಣವಾಗಿ ಬುಡಕಟ್ಟು ಜನರ ಸಂಘಟನೆಗಾಗಿ ತಮ್ಮ ಬದುಕನ್ನು ಮೀಸಲಿಟ್ಟರು. ಅವರು ವಿಶೇಷವಾಗಿ ಪಶ್ಚಿಮ ಬಂಗಾಳ, ಮಧ್ಯಪ್ರದೇಶ ಮತ್ತು ಚತ್ತೀಸ್‌ಘಡ್‌ನ ಬುಡಕಟ್ಟು ಜನರೊಂದಿಗೆ ಅವರ ಹಕ್ಕುಗಳಿಗಾಗಿ ಮತ್ತು ಅಭಿವೃದ್ಧಿಗಾಗಿ ಶ್ರಮಿಸಿದ್ದಾರೆ.

"ಬದುಕು ಗಣಿತವಲ್ಲ. ಮನುಷ್ಯನು ರಾಜಕೀಯದಾಟಕ್ಕೆ ಹೇಳಿ ಮಾಡಿಸಿದ ವ್ಯಕ್ತಿಯಲ್ಲ. ನನ್ನ ದೃಷ್ಟಿಯಲ್ಲಿ ಎಲ್ಲ ರಾಜಕೀಯ ಕಾರ್ಯಕ್ರಮಗಳು ಮನುಷ್ಯನ ಅಸ್ತಿತ್ವ ಮತ್ತು ನ್ಯಾಯದ ನೆಲೆಯನ್ನು ಪಡೆದಿರಬೇಕು. ಸದ್ಯದ ಸಾಮಾಜಿಕ ವ್ಯವಸ್ಥೆ ಪರಿವರ್ತನೆಗೊಳ್ಳಬೇಕು. ಸ್ವಾತಂತ್ರ್ಯ ಸಂದ ಇಷ್ಟು ವರ್ಷಗಳ ನಂತರವೂ ನನ್ನ ಜನ ಹಸಿವಿನಿಂದ ನರಳುತ್ತಿದ್ದಾರೆ; ಭೂಹೀನರಾಗಿದ್ದಾರೆ; ಜೀತದಾಳುಗಳಾಗಿದ್ದಾರೆ. ಈಗಿರುವ ವ್ಯವಸ್ಥೆ ವಿಮೋಚನೆ ತರುವ ದಿಕ್ಕಿನಲ್ಲಿ ಸೋತಿದೆ. ಇಂಥ ಸ್ಥಿತಿಯೇ ನನ್ನ ಬರವಣಿಗೆಯ ಹಿಂದಿರುವ ಸ್ಫೂರ್ತಿಯ ಸೆಲೆ. ನಾನು ನನ್ನ ಶಕ್ತ್ಯಾನುಸಾರ ಜನಸಮುದಾಯದ ಬಗ್ಗೆ ಬರೆಯುತ್ತಾ ಹೋಗುತ್ತೇನೆ. ಆದ್ದರಿಂದ ನಾನು ಯಾವುದೇ ಅಳುಕುಗಳಿಲ್ಲದೆ ಸಮಾಜವನ್ನು ಎದುರಿಸಬಲ್ಲೆ." – ಎಂದು ತಮ್ಮ "ಅಗ್ನಿಗರ್ಭ" ಕಥಾಸಂಕಲನದ ಮುನ್ನುಡಿಯಲ್ಲಿ ಬರೆದಿರುವ ಮಹಾಶ್ವೇತಾ ದೇವಿಯವರ ಮಾತುಗಳು ಅವರ ಒಟ್ಟು ಸಾಹಿತ್ಯದ ಹಾಗೂ ಜೀವನದ ವ್ಯಾಖ್ಯೆಯೇ ಆಗಿದೆಯೆಂದರೂ ತಪ್ಪಾಗದು.

ಪತ್ರಿಕೆಗಳಿಗೆ ಹಣ ಗಳಿಕೆಗಾಗಿಯೇ ಬರೆದ 'ವೃತ್ತಿನಿರತ ಲೇಖಕಿ ನಾನು' ಎಂದು ನಿರ್ದಾಕ್ಷಿಣ್ಯವಾಗಿ ಒಪ್ಪಿಕೊಳ್ಳುವ ಮಹಾಶ್ವೇತಾ ದೇವಿ, ತಮ್ಮ ಕಥೆ, ಕಾದಂಬರಿ, ನಾಟಕಗಳಲ್ಲಿ ಬರೆದದ್ದು ತಾವು ನಿಕಟ ಸಂಪರ್ಕ ಪಡೆದಿರುವ ಬುಡಕಟ್ಟು ಜನರ ಜೀವನವನ್ನು; ಈ ಜನರು 'ನಾಗರಿಕ'ರೆನಿಸಿಕೊಂಡ ಜನರೊಡನೆ ದಿನನಿತ್ಯ ತಮ್ಮ ಅಸ್ತಿತ್ವಕ್ಕಾಗಿ ನಡೆಸುತ್ತಿರುವ ಹೋರಾಟಗಳನ್ನು. ಅವರ ಬದುಕಿನ ವಾಸ್ತವಗಳೇ ಈ ಲೇಖಕಿಗೆ ಬರಹದ ಸಾಮಗ್ರಿ. ಸ್ವತಃ ಅಂತಹ ಹೋರಾಟಗಳಲ್ಲಿ ನೇರ ಪಾಲು ಪಡೆಯದಿದ್ದರೂ, ತಮ್ಮ ಹಕ್ಕು ಮತ್ತು ಸವಲತ್ತುಗಳ ಬಗ್ಗೆ, ಸಂವಿಧಾನದತ್ತ ಅವಕಾಶಗಳ ಬಗ್ಗೆ ಲಭ್ಯವಿರುವ ಕಾನೂನುಗಳ ಬಗ್ಗೆ ತಿಳುವಳಿಕೆ ನೀಡುವ ಮತ್ತು ಈ ಹೋರಾಟಗಳ ವ್ಯಾವಹಾರಿಕ ಅಂಶಗಳಿಗೆ ನೆರವಾಗುವ ಮೂಲಕ ಮಹಾಶ್ವೇತೆ ಈ ಹೋರಾಟದ ಅನುಭವಗಳನ್ನು ತಮ್ಮದನ್ನಾಗಿಸಿಕೊಂಡರು. ಇದೇ ಕಾರಣಕ್ಕೆ ಅವರ ಕೃತಿಗಳು ವ್ಯಕ್ತಪಡಿಸುವ ಬದುಕಿನ ಸಹಜ ಗುಣಗಳು ವಿವಿಧ ಬಗೆಯ ಜನ ಸಂಘಟನಾಕಾರರಿಗೆ ಸ್ಫೂರ್ತಿಯ ಸೆಲೆಗಳಾಗಿವೆ.

ಬುಡಕಟ್ಟು ಜನರ ಪ್ರೀತಿಯ ದೀದಿಯಾಗಿದ್ದ ಮಹಾಶ್ವೇತಾ ದೇವಿ ಆ ಜನರ ಸಂಸ್ಕೃತಿಗೆ ಮಾರುಹೋದವರು. ಆ ಜನ ಸಮಾಜದ ಎಲ್ಲರಿಗಿಂತ ಹೆಚ್ಚು ಶೋಷಿತರು ಎನ್ನುವುದೇ ಅವರಿಗೆ ಈ ಜನರ ಬಗೆಗಿನ ಹೆಚ್ಚು ಕಾಳಜಿ.

"ಒಂದರ್ಥದಲ್ಲಿ ಬುಡಕಟ್ಟು ಜನರು ನಮಗಿಂತ ಹೆಚ್ಚು ನಾಗರಿಕರು ಮತ್ತು ಸುಸಂಸ್ಕೃತರೂ ಆಗಿದ್ದಾರೆ. ಅವರಲ್ಲಿ ಹೆಣ್ಣುಮಗು ಒಂದು ಅವಹೇಳನದ ವಸ್ತುವಲ್ಲ. ಅವರು ವರದಕ್ಷಿಣೆಗಾಗಿ ಕೊಲ್ಲುವವರಲ್ಲ. ವಿಧವಾ ವಿವಾಹ ಅವರ ಸ್ವೀಕೃತ ಬದುಕಿನ ರೀತಿಗಳಲ್ಲಿ ಒಂದು. ವಿಚ್ಛೇದನಕ್ಕೆ ಅಲ್ಲಿ ಅವಕಾಶವುಂಟು. ಗಂಡಿಗೆ ಸಮಾನವಾಗಿಯೇ ಹೆಣ್ಣು ಗೌರವಿಸಲ್ಪಡುವುದರಿಂದ ಮದುವೆಯಾಗದಿರುವುದು ಅವಮಾನಕರ ಸಂಗತಿಯಲ್ಲ. ಈ ಎಲ್ಲ ದೃಷ್ಟಿಯಿಂದ ನಮಗಿಂತ ಹೆಚ್ಚಿನ ಉನ್ನತ ಸಂಸ್ಕೃತಿ ಅವರದು" ಎನ್ನುತ್ತಾರೆ.

ಅವರು ತಮ್ಮ ಬರವಣಿಗೆಯ ಸ್ಫೂರ್ತಿಯ ಮೂಲವನ್ನು ಗುರುತಿಸುತ್ತಾ, "ಸಾಮಾನ್ಯ ಜನರು ಸೃಷ್ಟಿಸಿರುವುದೇ ನಿಜವಾದ ಚರಿತ್ರೆ. ವಿವಿಧ ತಲೆಮಾರುಗಳಲ್ಲಿ ಸಾಮಾನ್ಯ ಜನ ಸೃಷ್ಟಿಸಿ, ಸಂಗ್ರಹಿಸಿಟ್ಟಿರುವ ಜನಪದ ಕತೆ, ಸಾಹಿತ್ಯ, ಹಾಡು, ಐತಿಹ್ಯಗಳಲ್ಲಿ, ವಿವಿಧ

### ಹೆಜ್ಜೆ

ಮಗು ಹೆಜ್ಜೆಗುರುತು ಮೂಡಿಸಲು
ಹೆಣಗುತ್ತದೆ,
ಸಾಗರದಲೆಗಳು ಭೋರ್ಗರೆದು ಬಂದು
ಗುರುತು ಅಳಿಸುತ್ತದೆ,
ಮತ್ತೆ ಮತ್ತೆ ಮಗು ಕಡಲ ಕಿನಾರೆಯಲ್ಲಿ
ಎಡೆಬಿಡದೆ ನಡೆಯುತ್ತದೆ !

**ಡಾ॥ ದೊಡ್ಡರಂಗೇಗೌಡ**
ಬೆಂಗಳೂರು – ೮೫

ರೂಪಗಳಲ್ಲಿ ಈ ಚರಿತ್ರೆಯು ಪುನರಾವರ್ತನೆ ಗೊಂಡಿರುವುದನ್ನು ಕಾಣಬಹುದಾಗಿದೆ. ನನ್ನ ಬರವಣಿಗೆಗೆ ಕಾರಣ ಮತ್ತು ಅದರ ಹಿಂದಿರುವ ಉದ್ದೇಶ ಶೋಷಿತ ಜನತೆ ಮತ್ತು ಅವರನ್ನು ಬಳಸಿಕೊಳ್ಳುತ್ತಿರುವ 'ನಾಗರಿಕ ಜನ'. ಹೀಗಿರುವಾಗ ನಾನು ಬರವಣಿಗೆಗೆ ದ್ರವ್ಯವನ್ನು ಹೊರಗಿನಿಂದ ಏಕೆ ಪಡೆಯಲಿ? ಅವರ ಕ್ರಿಯಾಶಕ್ತಿಯೇ ನನ್ನ ಬರವಣಿಗೆಯಾಗಿದೆ."




ಬುಡಕಟ್ಟು ಜನರ ಬದುಕಿನೊಂದಿಗೆ ಬೆರೆತು ಅವರ ಅನುಭವ ಸಾಮಗ್ರಿಯಿಂದ ತಮ್ಮ ಸೃಜನಶೀಲ ಸಾಹಿತ್ಯ ರಚಿಸಿದ ಈ ಲೇಖಕಿ ಅವರ ಜೀವನ ಚಿತ್ರದಿಂದಷ್ಟೇ ತೃಪ್ತರಾಗದೆ, ಸ್ವತಃ ಆ ಜನರ ಚಿಂತನೆ ಹಾಗೂ ನಂಬಿಕೆಗಳನ್ನು ಅವರದೇ ಭಾಷೆಯಲ್ಲಿ ದಾಖಲಿಸುವ ಪ್ರಯತ್ನ ಮಾಡಿದ್ದು ಒಂದು ವಿಶೇಷ. ಇದಕ್ಕಾಗಿಯೇ ಅವರ ತಂದೆಯು ನಡೆಸುತ್ತಿದ್ದ ಸಾಹಿತ್ಯ ಪತ್ರಿಕೆ "ವಾರ್ತಿಕಾ" (ಬೋರ್ತಿಕಾ)ವನ್ನು ೧೯೮೦ರ ನಂತರ ತಮ್ಮ ಅಗತ್ಯ ಮತ್ತು ಧ್ಯೇಯೋದ್ದೇಶ ಗಳಿಗನುಗುಣವಾಗಿ ಬದಲಾಯಿಸಿದರು. ಅದಕ್ಕೆ ಹೊಸ ತಾತ್ವಿಕ ಸ್ವರೂಪ, ಚೌಕಟ್ಟು ಗಳನ್ನು ನೀಡಿದರು. ಕತೆಗಳು, ಕಾದಂಬರಿ ಮತ್ತು ನಾಟಕಗಳನ್ನು ಒಳಗೊಂಡಂತೆ ಸುಮಾರು ನೂರಕ್ಕೂ ಹೆಚ್ಚು ಕೃತಿಗಳನ್ನು ಮಹಾಶ್ವೇತಾ ದೇವಿ ರಚಿಸಿದ್ದಾರೆ. ಇವುಗಳಲ್ಲಿ ಝಾನ್ಸಿ ರಾಣಿ, ಹಜಾರ್ ಚೌರಾಶಿರ್ ಮಾ, ಅರಣ್ಯೇರ್ ಅಧಿಕಾರ್, ಅಗ್ನಿಗರ್ಭ, ರುಡಾಲಿ ಪ್ರಮುಖವಾದವು. ಇವುಗಳಲ್ಲಿ ಸಂಘರ್ಷ್ (ಹಿಂದಿ), ರುಡಾಲಿ ಮತ್ತು ಹಜಾರ್ ಚೌರಾಸಿ ಕಾ ಮಾ, ಮಾತಿ ಮಾಯ್ (ಮರಾಠಿ) ಮತ್ತು ಗಾಂಗೋರ್ (ಇಟಾಲಿಯನ್) ಚಲನಚಿತ್ರಗಳಾಗಿ ಪ್ರಸಿದ್ಧವಾಗಿವೆ.

ವಸಾಹತೋತ್ತರ ವಿದ್ವಾಂಸೆ ಗಾಯತ್ರಿ ಸ್ಪಿವಾಕ್ ಮಹಾದೇವಿಯವರ ಸಣ್ಣಕತೆಗಳನ್ನು ಇಂಗ್ಲಿಷಿಗೆ ಅನುವಾದಿಸಿದ್ದಾರೆ. ಅವರ ಪ್ರಕಟಿತ ಮೂರು ಕೃತಿಗಳು Imaginary Map (೧೯೯೫), Old woman (೧೯೯೭), The Breast Stories (೧೯೯೭). ಮಹಾಶ್ವೇತಾ ದೇವಿಯವರ ಕೃತಿಗಳನ್ನು ಡಾ॥ ಎಚ್. ಎಸ್. ಶ್ರೀಮತಿಯವರು 'ಕುಲಪುತ್ರ', 'ರುಡಾಲಿ', '೧೦೮೪ ತಾಯಿ', 'ದೋಪಡಿ ಮತ್ತು ಇತರ ಕತೆಗಳು', 'ಮಹಾಶ್ವೇತಾ ದೇವಿ ಕಥಾ ಸಾಹಿತ್ಯ', 'ಮಹಾಶ್ವೇತಾ ದೇವಿ ಸೃಜನ ಸಾಹಿತ್ಯ' ಕನ್ನಡಕ್ಕೆ ರಚಿಸಿದ್ದಾರೆ. ಜಿ. ಕುಮಾರಪ್ಪ ಅವರು 'ಕಾಡಿನ ದಾವೇದಾರ' ಮತ್ತು 'ಅಗ್ನಿಗರ್ಭ' (ನವಕರ್ನಾಟಕ ಪ್ರಕಾಶನದ ಪ್ರಕಟಣೆ) ಕನ್ನಡಕ್ಕೆ ಅನುವಾದಿಸಿದ್ದಾರೆ.

ವಿದ್ಯಾವಂತ, ಸುಶಿಕ್ಷಿತ ಕುಟುಂಬದಿಂದ ಬಂದ ಮಹಾಶ್ವೇತಾ ದೇವಿ ಹೆಣ್ಣಾಗಿ ಹುಟ್ಟಿದ್ದಕ್ಕಾಗಿ ಯಾವ ಅನಾನುಕೂಲತೆಗಳನ್ನು ಎದುರಿಸಬೇಕಾಗಿ ಬರಲಿಲ್ಲ. ಅವರೇ ಹೇಳಿಕೊಳ್ಳುವಂತೆ ಅವರ ಸಾಮಾಜಿಕ, ಸಾರ್ವಜನಿಕ ಜೀವನಕ್ಕೆ ಮನೆಯವರೆಲ್ಲರ ಸಮ್ಮತಿ ಮತ್ತು ಬೆಂಬಲವಿತ್ತು. ಅವರ ತಾಯಿ ಉಳಿದ ಹೆಣ್ಣುಮಕ್ಕಳು ಮನೆಯಲ್ಲಿ ಕುಳಿತು ಆರಾಮದ ಜೀವನ ನಡೆಸುತ್ತಿದ್ದರೆ, "ಮಹಾಶ್ವೇತೆಯನ್ನು ನೋಡಿ ಕಲಿಯಿರಿ. ನೀವು ಏಕೆ ಹೊರಗೆ ಹೋಗಿ ಸಾರ್ವಜನಿಕ ಸೇವಾ ಕಾರ್ಯದಲ್ಲಿ ತೊಡಗಬಾರದು" ಎಂದು ಬುದ್ಧಿ ಮಾತು ಹೇಳುತ್ತಿದ್ದರು. ಈ ಕಾರಣದಿಂದಲೋ ಏನೋ ಅವರಿಗೆ ಮಹಿಳಾ ಪ್ರತ್ಯೇಕತೆಯು ಅಗತ್ಯವೆಂದೆನಿಸುವುದಿಲ್ಲ. ಹಾಗೆಯೇ, ಅದರ ಅನಿವಾರ್ಯತೆಯ ಬಗ್ಗೆ ಅವರದು ದಿವ್ಯ ನಿರ್ಲಕ್ಷ್ಯ.



ಮಹಿಳೆಯರದೇ ಪ್ರತ್ಯೇಕ ಸಂಘಟನೆಗಳಲ್ಲಾಗಲೀ, 'ಮಹಿಳಾ ಹೋರಾಟ'ಗಳಲ್ಲಾಗಲೀ ಮಹಾಶ್ವೇತಾ ದೇವಿಯವರಿಗೆ ನಂಬಿಕೆಯಿಲ್ಲ. "ಬುಡಕಟ್ಟು ಜನಾಂಗಗಳು ಇಮ್ಮಡಿಯಾಗಿಯೇ ಬಡತನದ ರೇಖೆಯ ಕೆಳಗೇ ಬದುಕುತ್ತಿವೆ. ಇಡೀ ಸಮುದಾಯವೇ ಆರ್ಥಿಕ ಶೋಷಣೆಗೆ ಒಳಗಾಗಿರುವಾಗ ಅವರೊಳಗಿಂದ ಸ್ತ್ರೀ ಶೋಷಣೆ ಎಂದು ಪ್ರತ್ಯೇಕಿಸಲು ಆಸ್ಪದವೆಲ್ಲಿ? ಅವರ ಪುರುಷರೂ ಅಷ್ಟೇ ಶೋಷಿತರಲ್ಲವೆ? ಆದ್ದರಿಂದ ಅವರನ್ನು ಒಂದು ಇಡಿಯಾಗಿ ಪರಿಗಣಿಸುತ್ತೇನೆ. ಇಡೀ ಸಮುದಾಯದ ಆರ್ಥಿಕ ಪ್ರಗತಿಗಾಗಿ ಯತ್ನಿಸುವುದೇ ನನ್ನ ಹೋರಾಟದ ಗುರಿ" ಎಂಬುದು ಅವರ ದೃಢವಾದ ನಿಲುವು.

ಮಹಾಶ್ವೇತಾ ದೇವಿ ತಮ್ಮ ಸಾರ್ವಜನಿಕ ಬದುಕು ಮತ್ತು ಬರಹಗಳಿಗಾಗಿ ಹಲವಾರು ಪ್ರಶಸ್ತಿ, ಪುರಸ್ಕಾರಗಳಿಗೆ ಭಾಜನರಾಗಿದ್ದಾರೆ. ೧೯೭೯ರಲ್ಲಿ ಅವರು ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆಯುವುದರೊಂದಿಗೆ ಆರಂಭಗೊಂಡು ೧೯೮೬ರಲ್ಲಿ ಪದ್ಮಶ್ರೀ ಪ್ರಶಸ್ತಿ, ೧೯೯೬ರಲ್ಲಿ ಜ್ಞಾನಪೀಠ ಪ್ರಶಸ್ತಿ, ೧೯೯೭ರಲ್ಲಿ ಮ್ಯಾಗ್ಸೆಸೆ ಪ್ರಶಸ್ತಿ, ೨೦೦೬ರಲ್ಲಿ ಪದ್ಮವಿಭೂಷಣ ಮತ್ತು ೨೦೧೧ರಲ್ಲಿ ಬಂಗ ಭೂಷಣ ಪ್ರಶಸ್ತಿಗಳು ಅವರನ್ನು ಅಲಂಕರಿಸಿವೆ.

ಬುಡಕಟ್ಟು ಜನರ ಶೋಷಣೆಯ ವಿರುದ್ಧ ಮಹಾಶ್ವೇತಾ ದೇವಿ ಹಲವಾರು ಸಂದರ್ಭದಲ್ಲಿ ದನಿಯೆತ್ತಿದ್ದಾರೆ. ಅವರ ಹೋರಾಟದ ಫಲವಾಗಿ ಜಾರ್ಖಂಡ್ ರಾಜ್ಯ ಸರ್ಕಾರವು ಜೂನ್ ೨೦೧೬ರಲ್ಲಿ ಪ್ರಸಿದ್ಧ ಬಿರ್ಸಾ ಮುಂಡಾನ ಪ್ರತಿಮೆಯನ್ನು ಪುನರ್ನಿರ್ಮಿಸಿತು. ಪಶ್ಚಿಮ ಬಂಗಾಳದ ಎಡ ಸರ್ಕಾರದ ಕೈಗಾರಿಕಾ ನೀತಿಯನ್ನು ದಿಟ್ಟವಾಗಿ ವಿರೋಧಿಸಿದ ಮಹಾಶ್ವೇತಾ ದೇವಿ ಶಾಂತಿನಿಕೇತನವನ್ನು ವಾಣಿಜ್ಯೀಕರಿಸುವುದನ್ನು ವಿರೋಧಿಸಿದರು. ವಿದೇಶಿ ಹೂಡಿಕೆಗೆ ಅನುವು ಮಾಡಲು ಪಶ್ಚಿಮ ಬಂಗಾಳ ಸರ್ಕಾರವು ಸಿಂಗೂರ್ ಮತ್ತು ನಂದಿಗ್ರಾಮದ ಹಳ್ಳಿಗಳನ್ನು ಒಕ್ಕಲೆಬ್ಬಿಸಲು ಹೊರಟಾಗ ಅದನ್ನು ಪ್ರಬಲವಾಗಿ ವಿರೋಧಿಸಿದ ಮಹಾಶ್ವೇತಾ ದೇವಿ ಈ ಚಳುವಳಿಯಲ್ಲಿ ಸಾಹಿತಿ – ಕಲಾವಿದರನ್ನು ಸಂಘಟಿಸಿದರು. ಇದರ ಮುಂದುವರಿಕೆಯಾಗಿ ಎಡ ಸರ್ಕಾರವನ್ನು ಕಿತ್ತೊಗೆಯಲು ಮಮತಾ ಬ್ಯಾನರ್ಜಿಯನ್ನು ಬೆಂಬಲಿಸಿದರು.

ಇಷ್ಟೆಲ್ಲಾ ಘಟನೆಗಳ ನಂತರವೂ ಮಹಾಶ್ವೇತಾ ದೇವಿಯವರ ಬರಹ ಮತ್ತು ಬದುಕು ಜನಸಾಮಾನ್ಯರಿಗಾಗಿ ಮಿಡಿಯುತ್ತಿತ್ತು. ೨೦೦೬ರಲ್ಲಿ ಫ್ರಾಂಕ್‌ಫರ್ಟ್‌ನಲ್ಲಿ ಅಂತರರಾಷ್ಟ್ರೀಯ ಪುಸ್ತಕ ಮೇಳವನ್ನು ಉದ್ಘಾಟಿಸಲು ಆಹ್ವಾನಿತರಾಗಿದ್ದಾಗ ಅಲ್ಲಿ ಸಭಿಕರನ್ನು ಉದ್ದೇಶಿಸಿ, ರಾಜಕಪೂರನ 'ಮೇರಾ ಜೂತಾ ಹೈ ಜಪಾನಿ' ಕವಿತೆಯ ಸಾಲುಗಳನ್ನು ಉದ್ಧರಿಸುತ್ತಾ, "ಈ ಯುಗದಲ್ಲಿ ಕಾಲಿಗೆ ಜಪಾನಿ ಬೂಟು, ಉಟ್ಟಿರುವುದು ಇಂಗ್ಲಿಷರ ಪ್ಯಾಂಟು, ತಲೆಗೆ ರಷ್ಯಾದ ಟೋಪಿ ಆದರೂ ನನ್ನ ಹೃದಯ ಮಾತ್ರ ಹಿಂದೂಸ್ಥಾನಿಯ ರಾಗ ಮಿಡಿಯುತ್ತಿದೆ. ನನ್ನ ದೇಶ ಹರಿದು ಚಿಂದಿಯಾಗಿದ್ದರೂ ನನ್ನ ದೇಶ, ನನ್ನ ಹೆಮ್ಮೆ. ಅದು ಸುಂದರವಾಗಿದೆ. ಬಿರುಬಿಸಿಲಿಂದ, ಚಳಿಗಾಳಿಗಳಿಂದ ಪ್ರಕಾಶಿಸುತ್ತಿರುವ ಭಾರತ ನನ್ನದು," ಎಂದು ನುಡಿದು ಸಭಿಕರ ಚಪ್ಪಾಳೆ ಮತ್ತು ವಿಶ್ವಾಸವನ್ನು ಗಳಿಸಿದರು. ಹೌದು, ಮಹಾಶ್ವೇತಾ ದೇವಿ ನಮ್ಮೆಲ್ಲರ ಹೆಮ್ಮೆ. ಇದೇ ಜುಲೈ ೨೮ರಂದು ಕಲ್ಕತ್ತೆಯಲ್ಲಿ ಮರಣ ಹೊಂದಿದ ಈ ಮಹಾನ್ ಲೇಖಕಿ, ಹೋರಾಟಗಾರ್ತಿ ಮತ್ತು ಮಾನವತಾವಾದಿಗೆ ಇದು 'ಹೊಸತು'ವಿನ ನುಡಿ ನಮನ.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವೀಪುರಂ
ಬೆಂಗಳೂರು – ೫೬೦ ೦೧೯




## ಖುಲಾಸಾ ಮತ್ತು ಇತರ ಲೇಖನಗಳು

*ಮರಾಠಿ ಮೂಲ : ಧರ್ಮಾನಂದ ಕೊಸಾಂಬಿ, ಅನು : ಡಾ॥ ಗೀತಾ ಶೆಣೈ*

**ಪುಟ :** ೮೪ **ಬೆಲೆ : ರೂ.** ೬೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಬಹುಶ್ರುತರೂ ಬುದ್ಧನ ಸಂದೇಶವನ್ನು ಪ್ರಸಾರ ಮಾಡುವ ಗುರಿಯನ್ನು ಜೀವನದಲ್ಲಿ ಇರಿಸಿಕೊಂಡವರೂ ಆಗಿದ್ದ ಧರ್ಮಾನಂದ ದಾಮೋದರ ಕೊಸಾಂಬಿಯವರು ಸಮಾಜವಾದ, ಸ್ವಾತಂತ್ರ್ಯ ಹೋರಾಟ, ಸತ್ಯಾಗ್ರಹಗಳತ್ತವೂ ಸೆಳೆಯಲ್ಪಟ್ಟವರು. ಜನಸಾಮಾನ್ಯರ ಬಡತನ ಮತ್ತು ಅಜ್ಞಾನಗಳು ಅವರ ಮನಸ್ಸನ್ನು ಕಲಕಿದ್ದುವು. ಕೊಂಕಣ ಕರಾವಳಿಯಲ್ಲಿ ಅವರು ಗೋವೆಯ ಸಮೀಪ ಉಪ್ಪಿನ ಸತ್ಯಾಗ್ರಹ ನಡೆಸಿದರು (೧೯೩೦). ಆಗ ಧರ್ಮಾನಂದರು ಬಂಧನಕ್ಕೊಳಗಾಗಿ ಜೈಲು ಸೇರಿದರು. ಗಾಂಧಿ–ಇರ್ವಿನ್ ಒಪ್ಪಂದವಾದ ಮೇಲೆ (೧೯೩೧) ಅವರ ಬಿಡುಗಡೆ (ಖುಲಾಸ) ಆಯಿತು. ಈ ಕೃತಿಯಲ್ಲಿ ಖುಲಾಸಾ, ಅಶೋಕನ ಶಿಲಾಶಾಸನ, ಭಾರತೀಯ ಕಾರ್ಮಿಕರ ಪರಿಸ್ಥಿತಿ ಸುಧಾರಣೆ, ನಾಗರಿಕತೆ ಮತ್ತು ಅಹಿಂಸೆ ಎಂಬ ಐದು ಭಾಗಗಳಲ್ಲಿ ಧರ್ಮಾನಂದರ ಲೇಖನಗಳಿವೆ. ಸಮಾಜವಾದ, ಅಧ್ಯಾಪನ, ಗಾಂಧೀಜಿಯೊಂದಿಗಿನ ಮಾತುಕತೆ, ಉಪ್ಪಿನ ಸತ್ಯಾಗ್ರಹ, ಜೈಲುವಾಸ, ಅಶೋಕ ಶಾಸನಗಳ ವಿವರಣೆ, ಸಾಮ್ರಾಜ್ಯದ ಏಳು–ಬೀಳುಗಳು, ನಗರ ಸಭೆ ಹಾಗೂ ಸರಕಾರ – ಬಂಡವಾಳಗಾರರ ಕರ್ತವ್ಯಗಳು, ಸಾಮ್ರಾಜ್ಯ ಹಾಗೂ ಕೈಗಾರಿಕಾ ಕ್ರಾಂತಿ – ಇವುಗಳ ಏಳು–ಬೀಳುಗಳು, ಸೊತ್ತು ಸಂಚಯನದ ನಿವಾರಣೆ, ಸತ್ಯಾಗ್ರಹ, ಅನುಭವದಿಂದ ಹುಟ್ಟಿಕೊಳ್ಳುವ ಅಪ್ಪಟ ಪ್ರಜ್ಞೆ. ಅಹಿಂಸೆ – ಇವನ್ನು ಈ ಲೇಖನಗಳಲ್ಲಿ ಚರ್ಚಿಸಲಾಗಿದೆ.*




## ಬೋಧಿಸತ್ವ (ನಾಟಕ)

*ಮರಾಠಿ ಮೂಲ : ಧರ್ಮಾನಂದ ಕೊಸಾಂಬಿ*

*ಅನು : ಡಾ॥ ಗೀತಾ ಶೆಣೈ*

**ಪುಟ :** ೬೪

**ಬೆಲೆ : ರೂ.** ೫೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ರಾಜಕುಮಾರ ಗೌತಮನಿಗೆ ವೈರಾಗ್ಯ ಮೂಡಲು ಕಾರಣವೆಂದು ಸಾಮಾನ್ಯವಾಗಿ ಜನರು ಭಾವಿಸಿದ ಘಟನೆಗಳನ್ನು ಬಿಟ್ಟು ತ್ರಿಪಿಟಕ ಗ್ರಂಥವನ್ನು ಆಧರಿಸಿ ಈ ನಾಟಕವನ್ನು ಬೌದ್ಧ ವಿದ್ವಾಂಸ ಧರ್ಮಾನಂದ ಕೊಸಾಂಬಿ ಬರೆದಿದ್ದಾರೆ. ಬುದ್ಧನ ಸ್ಥಿತಿ (ಪೂರ್ಣಜ್ಞಾನದ ಸ್ಥಿತಿ) ಪಡೆಯುವ ಪ್ರಕ್ರಿಯೆ ಯಲ್ಲಿರುವ, ನಿರ್ವಾಣ ಸ್ಥಿತಿ ತಲುಪಲು ಶಕ್ತನಾದರೂ ನರಳುವ ಜನರಿಗೆ ಬಹಳ ಕರುಣಾಮಯಿಯಾಗಿ, ಅದನ್ನು ವಿಳಂಬಿಸುವಾತನೇ ಬೋಧಿಸತ್ವ. ತಾಯಿ ಮಾಯಾದೇವಿ, ಪತ್ನಿ ಯಶೋಧರಾ, ಧರ್ಮೋಪದೇಶ ಕೇಳಿದ ರಾಷ್ಟ್ರಪಾಲ, ಶುದ್ಧೋದನ, ಸೂತ್ರಧಾರ, ಗೋತಮಿ, ಉದಯಿ, ಹಿರಿಯ ಶಾಕ್ಯ, ಶಾಕ್ಯ ಸೇನಾಪತಿ, ಶಾಕ್ಯ ಮಹಾನಾಮ, ಬಿಂಬಿಸಾರ, ಮಾರ, ಕೌಂಡಿನ್ಯ – ಮುಖ್ಯ ಪಾತ್ರಗಳು. 'ಮನುಷ್ಯನಿಗೆ ಕಷ್ಟ ಬೇಡವಾದರೆ ಅವನು ಬಯಕೆಯನ್ನು ನೀಗಬೇಕು. ನಾನು ಬಯಕೆಯನ್ನು ನೀಗುವ ಪಥವನ್ನು ಕಾಣಲಾರಂಭಿಸಿದ್ದೇನೆ' ಎಂಬ ಬೋಧಿಸತ್ವನ ಮಾತಿನ ಬಳಿಕ, ಬುದ್ಧನಿಗೆ ವಿಜಯ, ಓರ್ವ ಜ್ಞಾನೋದಯಿಗೆ ವಿಜಯ... ಹಾಡಿನೊಂದಿಗೆ ನಾಟಕ ಮುಕ್ತಾಯ ವಾಗುತ್ತದೆ. ರಂಗಭೂಮಿಗೆ ಅಳವಡಿಸುವ ದೃಷ್ಟಿಯಿಂದ ಕಥಾ ಸಾರಾಂಶ, ಪಾತ್ರವರ್ಗಗಳೊಳಗಿನ ಸಂಬಂಧ ಗಳನ್ನು ಮೊದಲಿಗೆ ಸೂಚಿಸಿದ್ದರೆ ಹೆಚ್ಚು ಅನುಕೂಲ ವಾಗುತ್ತಿತ್ತು ಎಂದೆನಿಸುತ್ತದೆ.*




## ರಾಮಾಯಣ, ಮಹಾಭಾರತ ಮತ್ತು ಧರ್ಮ

*ಮರಾಠಿ ಮೂಲ : ಇರಾವತಿ ಕರ್ವೆ, ಅನು : ಚಂದ್ರಕಾಂತ ಪೋಕಳೆ*

**ಪುಟ :** ೧೫೬ **ಬೆಲೆ : ರೂ.** ೧೨೦

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಇರಾವತಿ ಕರ್ವೆಯವರು ಬರೆದ ಎಂಟು ಲೇಖನಗಳು ಹಾಗೂ ಇರಾವತಿ ಕರ್ವೆಯವರ 'ಬರೆಹಗಳ ವೈಚಾರಿಕ ವಿವೇಚನೆ' (ನರಹರ ಕುರಂದಕರ) ಎಂಬ ದೀರ್ಘ ಲೇಖನ – ಇವನ್ನು ಒಳಗೊಂಡ ಸಂಕಲನವೇ ಈ ಕೃತಿ. 'ಕಾಂಡ'ಗಳನ್ನೊಳಗೊಂಡ ರಾಮಾಯಣ ಮತ್ತು ಪರ್ವಗಳನ್ನೊಳಗೊಂಡ ಮಹಾಭಾರತ ಇವುಗಳೊಳಗೆ ಸಾಮಾಜಿಕ ಸ್ವರೂಪ ಹಾಗೂ ಕಥಾನಾಯಕ ವನವಾಸವನ್ನು ಅನುಭವಿಸುವ ಕಥಾ ವಿನ್ಯಾಸಗಳಲ್ಲಿ ಸಾಮ್ಯವಿದೆ. ಹಾಗೆಯೇ ಭಿನ್ನತೆಗಳೂ ಇವೆ. ನಿರೂಪಣೆಯ ಮೂಲವನ್ನು ನೋಡಿದರೆ ವಾಲ್ಮೀಕಿ ಲವ–ಕುಶರಿಗೆ ರಾಮಾಯಣ ಕಥೆ ಕಲಿಸಿದ. ಅವರಿಬ್ಬರೂ ಅದನ್ನು ಅಯೋಧ್ಯೆಯ ಬೀದಿಗಳಲ್ಲಿ ಹಾಡಿದರು. ಮಹಾಭಾರತ ಕಥೆ ಹೇಳಿದವನು ಸೂತ ಮುನಿ. ರಾಮಾಯಣ ರಮ್ಯಕಥೆಯಾಗಿತ್ತು. ಮಹಾಭಾರತ ರಾಜವಂಶದ ನಾಲ್ಕು ಪೀಳಿಗೆಗಳ ಇತಿಹಾಸವಾಯಿತು. ಮಹಾಭಾರತದಲ್ಲಿ ಮನುಷ್ಯ ಸಂಘರ್ಷ ಮತ್ತು ಅದರ ಭಯಂಕರ ಪರಿಣಾಮ ಕಾಣುತ್ತದೆ. ರಾಮಾಯಣದಲ್ಲಿ ಉದಾತ್ತತೆಯಿಂದ ಮನುಷ್ಯ ಸಂಘರ್ಷ ನಿವಾರಣೆಯಾಗುತ್ತದೆ. ಧರ್ಮವೆಂದರೆ ಮನುಷ್ಯನು ಸಮಾಜದಲ್ಲಿ ವರ್ತಿಸಬೇಕಾದ ಲಿಖಿತ ಅಥವಾ ಅಲಿಖಿತ ನಿಯಮ. ವ್ಯಕ್ತಿಯ ವರ್ತನೆಯ ಸಾಮಾಜಿಕ ಮೌಲ್ಯಮಾಪನ ಮತ್ತು ಒಳಿತನ್ನು ಮಾಡಲು ಹೇಳುವ ಸಾಮಾಜಿಕ ಸಾಮರ್ಥ್ಯವಿಲ್ಲದೆ ಧರ್ಮದ ಉಗಮವಾಗಲಿ, ವಿಕಾಸವಾಗಲಿ ಆಗುವುದಿಲ್ಲ. ಇವೆಲ್ಲ ಇರಾವತಿ ಕರ್ವೆಯವರ ಬರೆಹಗಳಲ್ಲಿ ಬಂದ ಅಂಶಗಳು. ಇರಾವತಿಯವರ ಬರಹಗಳಲ್ಲಿ ಕಾಣುವ ಅವರ ನಿಲುವುಗಳ ಸವಿವರವಾದ ವಿಶ್ಲೇಷಣೆಯನ್ನು ನರಹರ ಕುರಂದಕರ ನಡೆಸಿದ್ದಾರೆ. ಅದು ಕೂಡ ಈ ಕೃತಿಯ ಕೊನೆಗೆ ಸೇರಿಕೊಂಡಿದೆ.*

## ಅಲ್ಲಾಹ್‌ನಿಂದ ನಿರಾಕೃತರು

*ಆಂಗ್ಲ ಮೂಲ : ನೂರ್ ಜಹೀರ್, ಅನು : ಎಂ. ಅಬ್ದುಲ್ ರೆಹಮಾನ್ ಪಾಷ*

**ಪುಟ :** ೧೬೮ **ಬೆಲೆ : ರೂ.** ೧೨೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧




*ಮುಸ್ಲಿಮ್ ಸಮುದಾಯದಲ್ಲಿರುವ ಆಚರಣೆಗಳ ಬಗ್ಗೆ ಖಚಿತ ಮಾಹಿತಿ ಹಾಗೂ ಅರಿವು ಉಳಿದ ಸಮುದಾಯಗಳಲ್ಲಿರುವ ಜನರಿಗೆ ಹೆಚ್ಚು ಲಭಿಸಿಲ್ಲ. ಉದಾಹರಣೆ ಕೆಲವು ಊರುಗಳಲ್ಲಿ ಧ್ವನಿವರ್ಧಕಗಳಿಂದ ಕೇಳಿಬರುವ ಪ್ರಾರ್ಥನಾ ವಾಕ್ಯಗಳು ಯಾವ ಭಾಷೆಯಲ್ಲಿವೆ ಎಂದು ಪ್ರಶ್ನಿಸಿದರೆ ಸರಿಯಾದ ಉತ್ತರ ಸಿಗದಿರಲೂಬಹುದು. ಒಂದಕ್ಕಿಂತ ಹೆಚ್ಚು ಮತಗಳು ಆಚರಣೆಯಲ್ಲಿರುವ ಸಮಾಜದಲ್ಲಿ ಇಂಥ ಅಜ್ಞಾನ ಇಲ್ಲದಿರುವುದು ಲೇಸು. ಕಷ್ಟವೋ ಸುಖವೋ ಸಮಾಜದಲ್ಲಿ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡರಷ್ಟೇ ಸಮರಸ. ಇಂಥ ಸಮರಸದ ಸಾಧನೆಯಲ್ಲಿ ನೂರ್ ಜಹೀರ್ ಅವರ ಕೃತಿ ಬಹಳ ಸಹಾಯಕವಾದೀತು. ಇದೊಂದು ಸಂವಹನಶೀಲ ಕೃತಿ ಎಂದು ಗ್ರಹಿಸಿ ಓದಿದಾಗ ಮುಸ್ಲಿಮ್ ಮಹಿಳೆಯರು ಎದುರಿಸಬೇಕಾದ ಸಮಸ್ಯೆಗಳ ಒಂದು ಚಿತ್ರಣ ಸಿಗುತ್ತದೆ. ಅದರೊಂದಿಗೆ, ನಿರಾಕೃತರಾದವರು ತಿರಸ್ಕೃತರಾಗಕೂಡದು ಎಂಬ ಆಶಯವೂ ಬೆಳೆಯುತ್ತದೆ. ಹಲಾಲಾ, ತ್ರಿತಲಾಕ್, ಖುಲಾ, ಮುತಾಹ್ ವಿವಾಹದಂಥ ಸಂಗತಿಗಳನ್ನು ಏಕೆ ಚರ್ಚೆಗೆ ಒಳಪಡಿಸುವುದಿಲ್ಲ ಎಂಬ ಪ್ರಶ್ನೆಗೆ ಉತ್ತರಿಸುವಂತೆ ಲೇಖಕಿ ಕೆಲವೊಮ್ಮೆ ಘಟನೆಗಳನ್ನು ನಿರೂಪಿಸಿ ವಿವರಣೆ ನೀಡಿದ್ದಾರೆ. ಧರ್ಮದ (ಅಂದರೆ ಮತದ) ಹೆಸರಿನಲ್ಲಿ ನಡೆಯುವ ಅಪರಾಧಗಳು ಕುರಾನ್ ಗ್ರಂಥ ಹೇಳುವುದಕ್ಕೂ ಆಚರಣೆಯಲ್ಲಿರುವುದಕ್ಕೂ ಇರುವ ವ್ಯತ್ಯಾಸ, ಮಹಿಳೆಯರ ಕುರಿತಾಗಿ ಇಸ್ಲಾಮ್‌ನಲ್ಲಿರುವ ಕ್ರೂರ ಕಾನೂನುಗಳು, ತಪ್ಪಿತಸ್ಥರು ತಪ್ಪಿಸಿಕೊಳ್ಳುವ ಬಗೆ, ಬಹು ಪತ್ನಿತ್ವ, ಹಲಾಲಾ ಲಾಭದಾಯಕ ವ್ಯವಹಾರವಾಗುವುದು – ಹೀಗೆ ಹಲವು ಪ್ರಮೇಯಗಳನ್ನು ಕೃತಿಯಲ್ಲಿ ಚರ್ಚಿಸಲಾಗಿದೆ. 'ಅರ್ಪಣೆ'ಯಲ್ಲಿ ಬರೆದ 'ಅತ್ಯಂತ ಹೀನ ಯುದ್ಧವೆಂದರೆ ಕಾದಾಡದ ಕದನ' ಎಂಬ ವಾಕ್ಯ ಅರ್ಥಗರ್ಭಿತವಾಗಿದೆ.*

– **ಅಡ್ಡನಡ್ಕ ಕೃಷ್ಣ ಭಟ್,** ನಿಪ್ಪಾಣಿ ಕಣ್ಣು ಆಸ್ಪತ್ರೆ, ಮುಖ್ಯರಸ್ತೆ, ಗೋಕಾಕ – ೫೯೧ ೩೦೭




# ಗುರುತ್ವದಲೆಗಳು

“ಅಪ್ಪಾ, ನಿಂಗೆ ನಾನೊಂದು ಪ್ರಶ್ನೆ ಕೇಳ್ಲಾ ?”

“ಕೇಳು ಮಗನೆ”

“ಅಪ್ಪಾ, ನಾನು ದೊಡ್ಡವನಾದ ಮೇಲೆ ಏನಾಗಬೇಕೂಂತ ನಿನ್ನಾಸೆ ?”

“ನೀನೇನ್ ಅಂತ ಅನ್ಕೊಂಡಿದಿಯಾ, ಹೇಳು ಮೊದಲು ?”

“ವಿಜ್ಞಾನಿ ಆಗ್ಬೇಕು ಅಂತ ಆಸೆ ಇದೆ”

“ವಿಜ್ಞಾನಿನಾ, ಆ ಪುಸ್ತಕ ಈ ಪುಸ್ತಕ ಅಂತ ಒಂದೇ ಸಮಾ ಓದ್ತಾ, ಜೀವನ ಪೂರ್ತಿ ಅಲ್ಲಿ ಇಲ್ಲಿ, ಅದು ಇದು ಹುಡುಕ್ಕೊಂಡು ಇದ್ಬಿಡ್ತೀಯಾ ? ನಂಗನ್ಸುತ್ತೆ ನೀನು ಕೈತುಂಬ ಸಂಬಳ, ಸವಲತ್ತು ಇರೋ ಕೆಲಸ ಹಿಡಿದ್ರೆ ಒಳ್ಳೇದು”

“ಬರೀ ಸಂಬಳ ಬಂದ್ರೆ ಸಾಕಾ ಅಪ್ಪಾ, ಕೆಲಸದ ಖುಷಿನೂ ಬೇಡ್ವಾ ?”

“ಸಂಬಳ ಎಣಿಸೋದ್ರಲ್ಲೆ ಖುಷಿ ಕಣೋ. ನಾವೆಲ್ಲ ನಿನ್ ಹಾಗೆ ಚಪ್ಪಲಿ, ಶೂ ಎಲ್ಲಿ ಹಾಕಿದ್ವಿ ?”

**ಕೆ. ಎಸ್. ರವಿಕುಮಾರ್**

“ಇಲ್ಲಪ್ಪ, ನಂಗೆ ವಿಜ್ಞಾನದಲ್ಲೇ ಏನಾದ್ರೂ ಮಾಡ್ಬೇಕು ಅನ್ನಿದೆ.”

“ನಾನ್ ಹೇಳ್ತೀನಿ ಕೇಳು, ಅದೆಲ್ಲ ಬೇಡ. ಇಂಜಿನಿಯರಿಂಗ್ ಲೈನಲ್ಲಿ ಓದು. ಒಳ್ಳೇ ಕಂಪೆನಿ ಸೇರು. ಒಳ್ಳೇ ಸ್ಯಾಲರಿ ಪ್ಯಾಕೇಜ್ ತಗೋ. ಅಮೆರಿಕ, ಆಸ್ಟ್ರೇಲಿಯ, ಜರ್ಮನಿ, ಇಂಗ್ಲೆಂಡ್ ಹೀಗೆ ಎಲ್ಲಿ ಬೇಕಾದ್ರೂ ಹೋಗಿ ಕೆಲಸ ಮಾಡು. ಆಮೇಲೆ ಎಲ್ಲೋ ಒಂದು ಕಡೆ ಸೆಟ್ಲ್ ಆಗು. ನಾವೂ ನೀನಿದ್ದಲ್ಲಿಗೆ ಬರ್ತೀವಿ. ಬೇಜಾರಾದ್ರೆ ನಮ್ಮ ಭವ್ಯ ಸಂಸ್ಕೃತಿಯ ದೇಶ ಇದ್ದೇ ಇದೆ. ವಯಸ್ಸಾದ ಕಾಲಕ್ಕೆ ಶ್ರೀಗಳವರ ವೃದ್ಧಾಶ್ರಮ ಇದ್ದೇ ಇದೆ. ಪುರಾಣ ಪುಣ್ಯಕತೆ ಅಂತ ಕಾಲ ಹಾಕ್ತೀವಿ. ಏನಂತಿ ?”

“ಕಂಪೆನಿ ಕೆಲಸ ಅಂದ್ರೆ ರಾತ್ರಿ–ಹಗಲು, ಮುಂಜಾನೆ–ಮುಸ್ಸಂಜೆ ವ್ಯತ್ಯಾಸ ಇಲ್ಲದಂಗೆ ದುಡಿಯೋದಂತೆ. ನನ್ನ ಫ್ರೆಂಡ್ ಅಣ್ಣ ದುಡಿದು ದುಡಿದು ಸಾಕಾಗಿದೆ ಅಂತಿರ್ತಾನಂತೆ. ನಂಗೆ ಆಸ್ಟ್ರೋಫಿಸಿಕ್ಸ್ ಓದಿ ಕಪ್ಪು ರಂಧ್ರ (Black hole)ಗಳ ಬಗ್ಗೆ ರಿಸರ್ಚ್ ಮಾಡಬೇಕು ಅಂತ ಆಸೆ ಇದೆ.”

“ಅದೇನು ರಂಧ್ರಗಳೋ, ನಂಗೆ ತಿಳೀದು. ಆದರೆ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಅಂತಹ ರಂಧ್ರಗಳ ಬಗ್ಗೆ ಪ್ರಸ್ತಾಪ ಇದ್ದೇ ಇರುತ್ತೆ ಅನ್ನು. ನಮ್ ಋಷಿ ಮುನಿಗಳೇನು ಸಾಮಾನ್ಯರೇ ? ಏನೋ, ನಿನ್ನಿಷ್ಟ ಬಂದ್ ಹಾಗೆ ಮಾಡು. ಈಗಿನ ಕಾಲದ ಮಕ್ಕಳು ಅಪ್ಪ ಅಮ್ಮನ ಮಾತಿಗೆ ಕ್ಯಾರೇ ಅನ್ನೋದಿಲ್ಲ”

“ಅಪ್ಪಾ, ಒಂದು ವೇಳೆ ನಾನು ಫಾರಿನ್ನಿಗೆ ಹೋಗೋಕೆ ಇಷ್ಟ ಪಡದಿದ್ರೆ ನಿಂಗೆ ಬೇಜಾರಾಗುತ್ತ ?”

“ಏನಾದ್ರೂ ಮಾಡು, ಇಲ್ಲಿ ನಮ್ ಪ್ರತಿಭೆಗೆ ಬೆಲೆ ಇದೆಯೇನೋ ? ಮೂರು ಕಾಸಿನ ಚಪರಾಸಿ ಕೆಲಸಕ್ಕೆ ಇರೋ ಗೌರವ ನಮ್ಮ ಸಂಸ್ಕಾರಕ್ಕೆ ಇಲ್ಲ ಕಣೋ.” ಅಪ್ಪ ಒಂಬತ್ತನೇ ತರಗತಿಯಲ್ಲಿ ಓದುವ ಮಗನಿಗೆ ತೀವ್ರ ಅಸಮಾಧಾನದಿಂದಲೇ ಪ್ರತಿಕ್ರಿಯಿಸಿದರು.

ಮಗನಿಗೆ ಅಪ್ಪನ ನಿರೀಕ್ಷೆಗಳ ತೀವ್ರತೆ ಎಷ್ಟು ಮನದಟ್ಟಾಯ್ತೋ ಗೊತ್ತಿಲ್ಲ. ಈಗಿಂದಲೇ ತನ್ನೊಳಗೆ ಒಂದು ಸ್ಪಷ್ಟ ಗುರಿಯನ್ನು ಹುಟ್ಟು ಹಾಕುವ ಅಪ್ಪನ ಉಪಾಯ ಕೂಡ ಎಷ್ಟರಮಟ್ಟಿಗೆ ಅರ್ಥವಾಯಿತೊ ಗೊತ್ತಿಲ್ಲ. ಆದರೆ ಮಗನಲ್ಲಿ ಮಾತ್ರ ವಿಜ್ಞಾನಿಯಾಗಬೇಕೆಂಬ ಗುರಿ ಮೊಳಕೆಯೊಡೆದಾಗಿತ್ತು. ಅದು ಎಲ್ಲವನ್ನೂ ವಿಸ್ಮಯದಿಂದ ನೋಡುವ ವಯಸ್ಸಿಗೆ ಸಹಜವಾಗಿತ್ತು ಮತ್ತು ವಯಸ್ಸಿನ ಮುಗ್ಧತೆಗೆ ಅನುಗುಣವಾಗಿತ್ತು.

*          *          *

ವಿಭಾಕರ ಗಲ್ಲಕ್ಕೆ ಕೈಯಿಟ್ಟು ಪಾಠ ಕೇಳುತ್ತಿದ್ದ. ಅವನು ಅದೆಷ್ಟು ತದೇಕಚಿತ್ತನಾಗಿದ್ದನೆಂದರೆ ತಾನು ಶಾಲೆಗೆ ಬಂದಿರುವೆನೆಂಬುದನ್ನೇ ಮರೆತುಬಿಟ್ಟಿದ್ದ. ಪೂರ್ಣ ತಲ್ಲೀನರಾಗಿ ಪಾಠ ಮಾಡುತ್ತಿದ್ದ ಟೀಚರ್, ಅವರ ಎಡಗೈ ಹಿಡಿದ ವಿಜ್ಞಾನದ ಪಠ್ಯಪುಸ್ತಕ, ಅವರು ಬರೆಯುವ ಕಪ್ಪು ಹಲಗೆ ಮತ್ತು ಅವರ ಬೆರಳ ನಡುವೆ ಓಡಾಡುವ ಸೀಮೆಸುಣ್ಣ ಇವುಗಳ ಹೊರತಾಗಿ ಅವನು ಬೇರೆ ಏನನ್ನೂ ಕಾಣಲಾರದವನಾಗಿದ್ದ. ಹೇಳಬೇಕೆಂದರೆ ಪಾಠದ ವಿಷಯವೇ ಅಂತಹುದಾಗಿತ್ತು. ಗುರುತ್ವ ಬಲ ಅಥವಾ ಗುರುತ್ವಾಕರ್ಷಣೆ (Gravitational Force)ಯನ್ನು ಅರ್ಥೈಸುವ ಇತಿಹಾಸ ಮತ್ತು ಇತ್ತೀಚೆಗೆ ಸಾವಿರಾರು ವಿಜ್ಞಾನಿಗಳ ಸಮೂಹ ಪ್ರಯತ್ನದಲ್ಲಿ ಪತ್ತೆಯಾದ ಗುರುತ್ವದ ಅಲೆ (Gravity Wave)ಗಳ ಬಗ್ಗೆ ಟೀಚರ್ ಅತ್ಯಂತ ರಸವತ್ತಾಗಿ ವಿವರಿಸುತ್ತಿದ್ದರು. ವಿಜ್ಞಾನ ಅದರಲ್ಲೂ ಭೌತಶಾಸ್ತ್ರವೆಂದರೆ ವಿಭಾಕರನಿಗೆ ತುಸು ಹೆಚ್ಚೇ ಆಸಕ್ತಿ. ವಿಜ್ಞಾನದ ಟೀಚರ್ ಪಠ್ಯಪುಸ್ತಕದ ಆಚೆಗೂ ಹೆಚ್ಚು ಓದಿಕೊಂಡಿರುತ್ತಿದ್ದರು. ಜನರು ಮತ್ತು ವಸ್ತುಗಳು ವೃತ್ತಾಕಾರದ ಭೂಮಿಯ ಮೇಲೆ ಜಾರಿ ಉರುಳಿ ಹೋಗದಂತೆ ಯಾವುದೋ ಆಕರ್ಷಣ ಶಕ್ತಿ ತಡೆಯುತ್ತದೆ ಎಂದಿದ್ದ ಆರ್ಯಭಟನ ಮುನ್ನೋಟ, ಪೀಸಾ ಗೋಪುರದಿಂದ ಗೆಲಿಲಿಯೋ ಬೇರೆ ಬೇರೆ ತೂಕದ ಎರಡು ಲೋಹದ ಗುಂಡುಗಳನ್ನು ಒಮ್ಮೆಲೆ ಕೆಳಗೆ ಬಿಟ್ಟಾಗ ಎರಡೂ ಒಟ್ಟಿಗೆ ನೆಲ ತಲುಪಿದ ಪ್ರಸಂಗ, ಗುರುತ್ವ ಬಲವನ್ನು ಸೂತ್ರೀಕರಿಸಿದ ನ್ಯೂಟನ್ನನ ಸೇಬಿನ ಆಖ್ಯಾಯಿಕೆ, ಯುರೆನಸ್ ಗ್ರಹವನ್ನು ಕಂಡುಹಿಡಿದ ಹರ್ಷೆಲ್‌ನ ಸಾಧನೆ, ಐನ್‌ಸ್ಟೈನ್, ಸ್ಟೀಫನ್ ಹಾಕಿಂಗ್‌ರ ವಿಶ್ವದ ಕುರಿತ ವ್ಯಾಖ್ಯಾನಗಳು... ಹೀಗೆ ಟೀಚರ್



ಸಂದರ್ಭಾನುಸಾರ ವಿವರಿಸುವಾಗ ಭೌತಶಾಸ್ತ್ರ ಇಷ್ಟೊಂದು ಸ್ವಾರಸ್ಯವೇ ಎಂದು ವಿಭಾಕರ ಬೆರಗಾಗಿದ್ದ. ವಿಚಾರಗಳನ್ನು ಮಕ್ಕಳ ಮನಸೆಳೆಯುವಂತೆ ರಸವತ್ತಾಗಿ ಹೇಳಬಲ್ಲ ಸಾಮರ್ಥ್ಯ ಅವನ ಟೀಚರ್‌ಗಿತ್ತು. ಅವರ ವಿಷಯದಲ್ಲಿ ಅತಿ ದಡ್ಡ ವಿದ್ಯಾರ್ಥಿಗಳೂ ಶೇಕಡ ಕನಿಷ್ಠ ೫೫–೬೦ ಅಂಕ ಗಳಿಸುತ್ತಿದ್ದರು. ನಾಲ್ಕಕ್ಕೆ ಶಾಲೆ ಮುಗಿದ ಮೇಲೆ ಒಂದು ಗಂಟೆ ಕಾಲ ಹೊರಗೆ ಮಳೆ. ಮರದ ಕೆಳಗೆ ನಿರಾಳವಾಗಿ ಕುಳಿತು ವಿಜ್ಞಾನಕ್ಕೆ ಸಂಬಂಧಿಸಿದ ಮಕ್ಕಳ ಅನುಮಾನಗಳನ್ನು ಪರಿಹರಿಸುವುದು ಅವರ ಪರಿಪಾಠವಾಗಿತ್ತು. ಸಂಜೆಯ ತಂಪು ಹವೆ, ಹಕ್ಕಿಗಳ ಕಲರವದಿಂದ ತುಂಬಿತುಳುಕುವ ಮರ ಮತ್ತು ಟೀಚರ್ ಅವರ ಕಾಳಜಿ ಎಲ್ಲ ಸೇರಿ ಮಕ್ಕಳ ಮನಸ್ಸು ಪ್ರಫುಲ್ಲವಾಗಿರುತ್ತಿತ್ತು. ಆ ಪ್ರಫುಲ್ಲತೆ ಸಹಜವಾಗಿ ಅಂದಂದಿನ ಪಾಠಗಳು ಮಕ್ಕಳ ನೆನಪಿನ ಕೋಶದಲ್ಲಿ ದಾಖಲಾಗಲು ಪೂರಕವಾಗಿತ್ತು. ವಿಭಾಕರ ಇಂತಹುದೊಂದು ಸನ್ನಿವೇಶದ ಪೂರ್ಣ ಲಾಭವನ್ನು ಪಡೆಯಲು ಯಾವತ್ತೂ ಹಿಂದೆ ಬೀಳುತ್ತಿರಲಿಲ್ಲ.

✳ ✳ ✳

ಹೋಮ್‌ವರ್ಕ್ ಮುಗಿಸಿ ಎದ್ದ ವಿಭಾಕರನಿಗೆ ಅಪ್ಪ ಮಾಮೂಲಿನಂತೆ ಕೇಳಿದರು: "ಏನೋ, ಇವತ್ತು ಶಾಲೆಯಲ್ಲಿ ವಿಶೇಷ ?"

"ಏನಿಲ್ಲ... ಹ್ಞಾಂ ! ರೀಸೆಂಟಾಗಿ ಗುರುತ್ವದ ಅಲೆಗಳನ್ನು ಕಂಡುಹಿಡಿದ್ರಲ್ಲ. ಅದರ ಬಗ್ಗೆ ಇವತ್ತು ವಿಜ್ಞಾನದ ಟೀಚರ್ ಹೊಸ ಹೊಸ ವಿಷಯ ತಿಳಿಸಿದ್ರು. ತುಂಬಾ ಚೆನ್ನಾಗಿತ್ತು ಪಾಠ."

"ಹೌದಾ ? ಅಂದ ಹಾಗೆ ಗುರುತ್ವ ಅಂದಾಗ ನೆನಪಾಯಿತು. ನೀವಿನ್ನೂ ನ್ಯೂಟನ್ನನ ಸೇಬಿನ ಹಣ್ಣಿನ ಕತೆ ಕೇಳ್ಕೊಂಡೇ ಇದಿರಾ ? ನಾವು ಚಿಕ್ಕವರಾಗಿದ್ದಾಗ್ಲೂ ಕೇಳಿದ್ವಿ . ಈಗ್ಲೂ ಅದೇ ಕತೆ ಅನ್ನು. ಪಠ್ಯಪುಸ್ತಕ ಬದಲಾಗಬೇಕು ನೋಡು."

"ಅಂದ್ರೆ ಏನಪ್ಪಾ ?"

"ನೋಡು ಮಗನೆ, ಆವತ್ತು ಋಷಿ ಮುನಿಗಳು ಯಜ್ಞ–ಯಾಗ ಮಾಡುವಾಗ ದೇವಲೋಕದಿಂದ ದೇವತೆಗಳು ಸುಪ್ರೀತರಾಗಿ ಹೂವಿನ ಮಳೆ (ಪುಷ್ಪವೃಷ್ಟಿ) ಸುರಿಸುತ್ತಿದ್ದರಂತೆ. ಅದೇನು ಸಾಮಾನ್ಯಾನ ? ಲಕ್ಷ ಲಕ್ಷ ಮೈಲಿ ದೂರದ ದೇವಲೋಕದಿಂದ ಭೂಮಿಯ ಮೇಲೆ ನೇರವಾಗಿ ಹೂವುಗಳು ಬೀಳಬೇಕಂದ್ರೆ ಯಾವ ತರಹದ ಗುರುತ್ವಾಕರ್ಷಣೆಯ ಬಲ ಕೆಲಸ ಮಾಡಿರಬೇಕು ? ನಿಮ್ಮ ವಿಜ್ಞಾನವು ಇದನ್ನು ಹೇಗೆ ವಿವರಿಸುತ್ತೆ ? ಈ ತರಹದ ವಿಷಯಾನೆಲ್ಲ ಇವತ್ತಿನ ಮಕ್ಕಳಿಗೆ ಕಲಿಸಬೇಕು. ನಿಮ್ ಟೀಚರ್ ಇದ್ನೆಲ್ಲ ಸ್ವಲ್ಪ ಓದಿ ತಿಳ್ಕೊಂಡಿರಬೇಕು."

ವಿಭಾಕರನಿಗೆ ಏನು ಹೇಳಬೇಕೋ ತೋಚಲಿಲ್ಲ. ಅಪ್ಪ ಹೇಳಿದ್ದು ಅವನ ವಯೋಸಹಜ ಗ್ರಹಿಕೆಗೆ ಒಂದು ಕಟ್ಟುಕತೆ ಅನ್ನಿಸಿದ್ದ ವಿಚಾರವಾಗಿತ್ತು. ಅವನು ಸುಮ್ಮನೆ ಎದ್ದು ಹೋದ.

ಮಾರನೇ ದಿನ ಶಾಲೆಯಲ್ಲಿ "ಸರ್, ದೇವಲೋಕದಿಂದ ದೇವತೆಗಳು ಚೆಲ್ಲಿದ ಹೂಗಳು ಭೂಮಿಯ ಮೇಲೆ ಬೀಳಲು ಗುರುತ್ವ ಬಲ ಕಾರಣಾನ ?" ವಿಭಾಕರ ಟೀಚರ್‌ಗೆ ಪ್ರಶ್ನೆ ಹಾಕಿದ.

ಪ್ರಶ್ನೆ ವಿಚಿತ್ರವೆನಿಸಿ ಟೀಚರ್ ಕಣ್ಣರಳಿಸಿದರು. ಏನೋ ಯೋಚಿಸಿಕೊಂಡು ಮುಗುಳುನಕ್ಕು "ವಿಭಾಕರ, ನಿನ್ನ ಮನಸ್ಸಲ್ಲಿ ಈ ಅನುಮಾನವನ್ನು ಬಿತ್ತನೆ ಮಾಡಿದ್ದು ಯಾರು ?" ಮರು ಪ್ರಶ್ನಿಸಿದರು.

"ನಮ್ಮಪ್ಪ ಸರ್"

"ನಿಮ್ಮಪ್ಪ ಏನ್ ಓದಿದಾರೆ ?"

"ಎಸ್ಸೆಸೆಲ್ಸಿ ಸರ್. ಅವರತ್ರ ದೇವಭಾಷೆಯ ಏನೇನೋ ಪುಸ್ತಕ ಇವೆ. ತಾಳೆಗರಿಗಳನ್ನೂ ಓದ್ತಾರೆ."

"ನೋಡು, ನಿಂಗೆ ಗೊತ್ತೇ ಇದೆ. ಭೂಮಿಯ ವಾತಾವರಣದಾಚೆ ಇರುವ ನಿರ್ವಾತದಲ್ಲಿ ಹೂವಿನಂತಹ ಹಗುರ ವಸ್ತುಗಳನ್ನು ಚೆಲ್ಲಿದರೆ ಭೂಮಿಯ ಕಡೆ ಬೀಳುವ ಬದಲು ಚೆಲ್ಲಾಪಿಲ್ಲಿಯಾಗಿ ಹರಡಿ ಹೋಗುತ್ತವೆ. ನೆಲ ತಲುಪುವುದೇ ಇಲ್ಲ. ತೀರಾ ಭಾರವಾದ ಉಲ್ಕೆಯಂತಹ ವಸ್ತುಗಳು ಮಾತ್ರ ಭೂಮಿಯ ಕಡೆ ಬೀಳುವುದು. ಹೀಗಾಗಿ ಇದೆಲ್ಲ ರಮ್ಯ ಕಲ್ಪನೆಯ ಕತೆಗಳು. ಕಲ್ಪನೆಯಲ್ಲಿ ಅಸಾಧ್ಯವಾದುದನ್ನೆಲ್ಲ ನಾವು ಸಾಧ್ಯ ಮಾಡಿಕೊಳ್ಳಬಹುದು. ನಮಗೆ ಕಲ್ಪನೆ ಬೇಕು. ಆದರೆ ಕಾಲಾನಂತರ ಸತ್ಯ ಗೊತ್ತಾದಾಗ ನಮ್ಮ ಅಭಿಪ್ರಾಯವನ್ನು ಬದಲಿಸ್ಕೋಬೇಕು. ವಿಜ್ಞಾನ ಯಾವಾಗಲೂ ಸತ್ಯ ಮತ್ತು ವಸ್ತುನಿಷ್ಠ ಸುಧಾರಣೆಯನ್ನ ಅನುಸರಿಸುತ್ತೆ. ಆವತ್ತು ಹುಚ್ಚು ನಾಯಿ ಕಚ್ಚಿದಾಗ ಗಾಯಕ್ಕೆ ಬರೆ ಹಾಕ್ತಿದ್ದರು. ಇವತ್ತು ರೇಬಿಸ್ ಕಾಯಿಲೆಗೆ ಲಸಿಕೆಯಿದೆ. ನಾವು ಈಗ ಬರೆ ಹಾಕ್ತೀವಾ ? ಇಲ್ಲ ಅಲ್ವಾ ? ವಿಜ್ಞಾನದ ಆವಿಷ್ಕಾರಗಳು ಹೆಚ್ಚಾ ಹೋದಂತೆ ಹಿಂದಿನ ಎಷ್ಟೋ ಸಾಂಪ್ರದಾಯಿಕ ಅಭ್ಯಾಸಗಳು ಬಿಟ್ಟುಹೋಗ್ತವೆ. ಹಾಗೆಯೇ ಈ ತರಹದ ಕಲ್ಪನೆಗಳು ಕೂಡ. ಪರೀಕ್ಷೆ ಮುಗಿದ ಮೇಲೆ ಈ ವಿಚಾರವಾಗಿ ಸಾಕಷ್ಟು ವಿಷಯ ತಿಳಿಸ್ತೀನಿ, ಆಯ್ತಾ ?"

ಟೀಚರ್ ನೀಡಿದ ಸಮಜಾಯಿಷಿಯಿಂದ ವಿಭಾಕರನಿಗೆ ಪೂರ್ಣ ತಿಳುವಳಿಕೆ ದಕ್ಕದಿದ್ದರೂ ಒಂದು ತಾರ್ಕಿಕತೆಯ ಸುಳಿವು ಸಿಕ್ಕಿತು. ಹೆಚ್ಚಿಗೆ ಆಲೋಚಿಸಲು ಇಂಬು ಸಿಕ್ಕಿತು.

ಒಂದು ವಾರದ ನಂತರ ಟೀಚರ್ ವಿದ್ಯುದ್ವಿಭಜನೆ (Electrolysis)ಯ ಬಗ್ಗೆ ಪಾಠ ಮಾಡಿದರು. ಮನೆಗೆ ಬಂದ ಮೇಲೂ ಫ್ಯಾರಡೆಯ ಪ್ರಯೋಗಗಳ ವಿವರಗಳು ವಿಭಾಕರನನ್ನು ಕಾಡುತ್ತಿದ್ದವು. ಅವನು ಜೋರಾಗಿ ಪಾಠ ಓದಿಕೊಳ್ಳುವಾಗ ಅಪ್ಪ ಕೇಳಿದರು: "ಶುದ್ಧ ನೀರಿಗೆ ನಿಂಬೆ ರಸ ಸೇರಿಸಿದರೆ ಅದು ವಿದ್ಯುತ್‌ಅನ್ನು ಪ್ರಸಾರ ಮಾಡುತ್ತೆ ಅಂತ ಓದ್‌ತಿದಿಯಾ. ಏನೂ ಸೇರಿಸದೆ ಇದ್ರೂ ಪವಿತ್ರ ಗೋವಿನ ಮೂತ್ರ ಕೂಡ ವಿದ್ಯುತ್‌ಅನ್ನು ಉತ್ಪಾದನೆ ಮಾಡುತ್ತೆ ಗೊತ್ತಾ, ನಿಮ್ಮ ಮೇಷ್ಟ್ರಿಗೆ ಇದು ಗೊತ್ತಾ ಕೇಳಿ ನೋಡು."

✳ ✳ ✳

"ಸರ್, ಅಪ್ಪ ಹೇಳಿದ್ದು ನಿಜಾನ ?"

"ಉಪ್ಪಿನಂಶ ಬೆರೆತ ಮನುಷ್ಯನ ಮೂತ್ರವೂ ವಿದ್ಯುತ್ತನ್ನು ಪ್ರಸಾರ ಮಾಡುತ್ತೆ. ಗೋವಿನ ಮೂತ್ರದಲ್ಲೂ ಉಪ್ಪಿನಂಶವಿದ್ದರೆ ಅದು ಕೂಡ ಹಾಗೇನೆ. ಅದರಲ್ಲೇನು ವಿಶೇಷ ? ಉಪ್ಪಿನಲ್ಲಿರುವ ಸೋಡಿಯಂ ಮತ್ತು ಕ್ಲೋರಿನ್ ಅಣುಗಳು ವಿಭಜನೆಗೆ ಒಳಪಟ್ಟು ಐಯಾನುಗಳಾಗುತ್ತವೆ" ಟೀಚರ್ ಸ್ಪಷ್ಟೀಕರಿಸಿದರು.

"ವಿಭಾಕರ, ಇವತ್ತು ಸಂಜೆ ನಿಮ್ಮ ಮನೆಗೆ ಬರ್ತೀನಿ. ಅಪ್ಪನ ಜೊತೆ ಮಾತನಾಡಬೇಕು. ಬರ್ಲಾ ?"

"ಓ ! ಖಂಡಿತ ಬನ್ನಿ ಸರ್ ?"

✳ ✳ ✳

"ಅಪ್ಪ , ನಮ್ಮನೆಗೆ ಯಾರ್ ಬಂದಿದಾರೆ ನೋಡು, ನಮ್ಮ ವಿಜ್ಞಾನದ ಟೀಚರ್."

ಅಪ್ಪನ ಮುಖ ಮುಗುಳುನಗಲು ಯಾಕೋ ಹಿಂದೆ ಮುಂದೆ ನೋಡಿತು. ಆದರೂ ಕೃತಕ ಸೌಜನ್ಯ ತೋರಿ "ಬನ್ನಿ, ಒಳಗೆ ಬನ್ನಿ, ಕೂತ್ಕೊಳ್ಳಿ" ಎಂದಷ್ಟೆ ಸ್ವಾಗತಿಸಿತು.

"ಸರ್, ನೀವು ನಿಮ್ಮ ಮಗನಿಗೆ ಹಲವು ಸ್ವಾರಸ್ಯಕರ ವಿಚಾರಗಳನ್ನು ಹೇಳ್ತೀರಿ. ಆ ಮೂಲಕ ಅವನಲ್ಲಿ ಹೆಚ್ಚು ತಿಳ್ಕೊಳೋಕೆ ಕುತೂಹಲ ಮೂಡುತ್ತೆ" ಟೀಚರ್ ಬಹಳ ಎಚ್ಚರಿಕೆಯಿಂದ ಮಾತುಗಳನ್ನು ಜೋಡಿಸಿದರು. ಸ್ವಾರಸ್ಯಕರ ಮತ್ತು ಕುತೂಹಲ ಪದಗಳನ್ನು ಬೇಕೆಂತಲೇ ಬಳಸಿದರು.

ಅಪ್ಪನ ಮೊಗದಲ್ಲೀಗ ನಸುನಗೆ ಮೂಡಿತು. "ನೋಡಿ ಮೇಷ್ಟ್ರೆ , ಈಗಿನ ಕಾಲದ ಮಕ್ಕಳಿಗೆ ನಾವು ನಮ್ಮ ಹಿಂದಿನವರ ಎಷ್ಟೋ ಸಾಧನೆಗಳ ವಿಚಾರ ತಿಳಿಸೋದೇ ಇಲ್ಲ. ಎಲ್ಲ ಕಂಡುಹಿಡಿದದ್ದು ವಿದೇಶದವ್ರು ಅಂತಾನೇ ಹೇಳಿಕೊಡ್ತೀವಿ. ನಮ್ಮ ಋಷಿ ಮುನಿಗಳೇನು ಕಡಿಮೆಯೆ ?"

"ಯಾವ್ ವಿಚಾರ ಹೇಳಿ, ಸರ್ ?"

"ಉದಾಹರಣೆಗೆ, ಪವಿತ್ರ ಪರ್ಜನ್ಯ ಜಪ ಗೊತ್ತಲ್ಲ. ಅಂದಿನ ಋಷಿಗಳು ಈ ಜಪವನ್ನು ಮಾಡಿ ಮಳೆ ಬರ್‍ಸ್ತಿದ್ದರು. ಈಗ ನಿಮ್ಮ ವಿಜ್ಞಾನಿಗಳು ಕೃತಕ ಮಳೆ ಬರಿಸೋಕೆ ಕೆಮಿಕಲ್ ಉಪಯೋಗಿಸ್ತಾರೆ. ಎಲ್ಲೋ ಒಂದ್ಕಡೆ ಒಂಚೂರು ಮಳೆ ಆಗುತ್ತೆ. ಅದೆಷ್ಟು ಖರ್ಚು ಬರತ್ತೆ, ರಾಜಕಾರಣಿಗಳು ಎಷ್ಟು ನುಂಗ್ತಾರೆ, ಏನ್ ಕತೆ ಅಂತೀನಿ."

"ಕೃತಕ ಮಳೆಗೆ ಸಿಲ್ವರ್ ಐಯೋಡೈಡ್ ರಾಸಾಯನಿಕ ಬಳಸಿ ಮೋಡಬಿತ್ತನೆ ಮಾಡ್ತಾರೆ" ಟೀಚರ್ ಮಾಹಿತಿ ನೀಡಿದರು.

"ಅದೇ, ಎಂತದೋ ಕೆಮಿಕಲ್. ಇರಲಿ, ನೀವ್ ಹೇಳ್ತೀರಿ, ವಿಮಾನ ಅನ್ನೋದು ೨೦ನೇ ಶತಮಾನದ್ದು ಅಂತ. ಆದರೆ ಬಹಳ ಹಿಂದೇನೇ ನಮ್ಮ ದೇಶದವರಿಗೆ ವಿಮಾನ ಶಾಸ್ತ್ರದ ಜ್ಞಾನವಿತ್ತು ಗೊತ್ತ ? ಭಾರದ್ವಾಜ ಋಷಿಯ ಸುಂದರ ವಿಮಾನದ ಮಾದರಿ ಒಂದು ಗಂಟೆಗೆ ೮೦೦೦ ಕಿ.ಮೀ. ಸ್ಪೀಡಲ್ಲಿ ಹಾರ್ತಾ ಇತ್ತಂತೆ. ನಿಮ್ಮ ವಿಜ್ಞಾನಿಗಳಿಗೆ ಇಂತಾದೊಂದು ವಿಮಾನ ತಯಾರಿಸೋಕೆ ಇನ್ನೂ ಯಾಕೆ ಸಾಧ್ಯ ಆಗಿಲ್ಲ ?"

"ಸರ್, ನೀವು ಈ ವಿಷಯನೆಲ್ಲ ಎಲ್ಲಿ ತಿಳಕೊಂಡಿರಿ ?" ಟೀಚರ್‌ಗೆ ಕುತೂಹಲ. ವಿಭಾಕರ ತನ್ಮಯತೆಯಿಂದ ಇಬ್ಬರ ಮಾತನ್ನೂ ಆಲಿಸುತ್ತಿದ್ದ.

"ನಮ್ಮದೊಂದು ಸಂಘ ಇದೆ. ಅದರ ಹೆಸರು ರಾ.ಸಂ.ಸಂ.ಭಾ. ಅಂದ್ರೆ

ರಾಷ್ಟ್ರೀಯ ಸಂಸ್ಕೃತಿ ಸಂಸ್ಕಾರ ಭಾರತಿ ಅಂತ. ಪ್ರತಿ ತಿಂಗಳು ದೇಶದ ಮೂಲೆ ಮೂಲೆಯಿಂದ ಖ್ಯಾತ ವಿದ್ವಾಂಸರು ಮತ್ತು ಮೇಧಾವಿಗಳು ನಮ್ಮ ಸಂಘಕ್ಕೆ ಬಂದು ಅನೇಕ ವಿಷಯಗಳ ಬಗ್ಗೆ ಉಪನ್ಯಾಸ ನೀಡ್ತಾರೆ. ಅವರ ಪ್ರತಿಭೆಯನ್ನು ಈ ದೇಶ ಬಳಸಿಕೊಂಡಿದ್ದರೆ ಪ್ರಪಂಚದಲ್ಲೇ ನಂಬರ್ ಒನ್ ಬಲಿಷ್ಠ ದೇಶ ಆಗಿರ್‍ತಿತ್ತು."

"ಹಾಗಂತೀರಾ ?"

"ಹೌದಲ್ವಾ ಮತ್ತೆ? ನನ್ ಮಗನಿಗೂ ಗೊತ್ತಿರಬೇಕು ಅಂತ ಆಗಾಗ ಕೆಲವು ವಿಷಯ ತಿಳಿಸ್ತೀನಿ."

"ಇನ್ ನಾನು ಬರ್‍ತೀನಿ ಸರ್" ಟೀಚರ್ ಎದ್ದರು.

ವಿಭಾಕರ ಟೀಚರ್‌ನ್ನು ಕಳಿಸಲು ಗೇಟ್ ತನಕ ಹೆಜ್ಜೆ ಹಾಕಿದ. "ಸರ್, ನೀವ್ಯಾಕೆ ನಮ್ಮಪ್ಪ ಹೇಳಿದ್ದಕ್ಕೆಲ್ಲ ತಿರುಗಿ ಏನೂ ಹೇಳ್ಲಿಲ್ಲ ?"

"ನೋಡು, ನಾನು ನಿಮ್ಮ ತಂದೆ ಜೊತೆ ವಾದಿಸಬೇಕು ಅಂತ ನಿರ್ಧಾರ ಮಾಡಿಕೊಂಡು ಬಂದಿರಲಿಲ್ಲ. ಅವರ ಜೊತೆ ಹಾಗೇ ಸ್ವಲ್ಪ ಮಾತಾಡೋಣ ಅನ್ನಿಸ್ತು, ಅಷ್ಟೆ. ಮೇಲಾಗಿ ಅವರು ವಯಸ್ಸಿನಲ್ಲಿ ನನಗಿಂತ ಹಿರೀಕರು. ಸರಿ, ನಾಳೆ ಶಾಲೇಲಿ ಭೇಟಿ ಆಗೋಣ. ನಡಿ."

"ಸರ್, ನೀವು ನಮ್ಮಪ್ಪ ಹೇಳಿದ ಎರಡು ವಿಷಯಗಳ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಈಗ್ಲೇ ತಿಳಿಸಬೇಕು. ನಾಳೆ ತನಕ ನಂಗೆ ಕಾಯೋಕಾಗೋಲ್ಲ" ವಿಭಾಕರನ ಪ್ರೀತಿಯ ಒತ್ತಾಯ.

"ನೋಡು, ಜಪ ಮಾಡಿ ಮಳೆ ಬರ್‍ಸೋಕೆ ಆಗಿದ್ದಿದ್ರೆ ಪ್ರಪಂಚದಲ್ಲಿ ಎಲ್ಲೂ ಬರಗಾಲ ಇಲ್ಲದ ಹಾಗೆ ಮಾಡಬಹುದಾಗಿತ್ತು. ಕಳೆದ ವರ್ಷ ನಮ್ಮ ಊರಿನಲ್ಲೇ ಕುಡಿಯೋ ನೀರಿಗೆ ಭಯಂಕರ ಕೊರತೆ ಆಗಿತ್ತಲ್ವ ? ಇನ್ನು ಎರಡನೇ ವಿಚಾರ. ಸುಂದರ ವಿಮಾನ ಹಾರಿಸೋಕೆ ಭಾರದ್ವಾಜ ಋಷಿ ೧೬ ಬೊಗಸೆಯಷ್ಟು ಕತ್ತೆ ಉಚ್ಚೆಯನ್ನು ಇಂಧನವಾಗಿ ಬಳಸಬೇಕು ಅಂತಾನೆ. ವಿಮಾನ ಹಾರೋದು ಪೆಟ್ರೋಲಿನಿಂದ ಅಂತ ನಿನಗೆ ಗೊತ್ತು. ಅದೊಂದೆ ಇದ್ರೂ ಸಾಲದು. ವಿಮಾನ ಹಾರ್‍ಸೋಕೆ ಏರೋಡೈನಾಮಿಕ್ಸ್ ಬಗ್ಗೆ ತಿಳುವಳಿಕೇನೂ ಬೇಕಾಗುತ್ತೆ. ವಿಮಾನದ ಆಕಾರ, ತೂಕ, ಎಂಜಿನ್ ಎಲ್ಲದರ ಹಿಂದೆಯೂ ಇರುವ ತಂತ್ರಜ್ಞಾನ ಭೌತಶಾಸ್ತ್ರದ ನಿಯಮಗಳಿಗೆ ಅನುಸಾರವಾಗಿ ಅಭಿವೃದ್ಧಿಯಾಗಿರಬೇಕು. ಮುಂದೆ ಇದನ್ನೆಲ್ಲ ನೀನು ತಿಳ್ಕೋಬಹುದು. ನಡಿ ಈಗ, ಹೋಗಿ ಓದ್ಕೋ, ಜಾಣ" ಟೀಚರ್ ಟಾ ಟಾ ಹೇಳಿ ಬೆನ್ನು ತಿರುಗಿಸಿದರು.

"ಏನು, ಮುದ್ದಿನ ಮೇಷ್ಟ್ರ ಜೊತೆ ಏನೋ ಗಹನವಾದ ಚರ್ಚೆ ನಡೀತಿತ್ತಲ್ಲ" ಅಪ್ಪನ ಎನ್ಕ್ವೈರಿ.

ವಿಭಾಕರ ಕೆಲವು ಕ್ಷಣ ಸುಮ್ಮನಿದ್ದು ಪ್ರತಿಕ್ರಿಯಿಸಿದ: "ಏನಿಲ್ಲ, ಕಾಲಹರಣ ಮಾಡ್ದೆ ಚೆನ್ನಾಗಿ ಓದ್ಕೋಬೇಕು ಅಂತ ಟೀಚರ್ ಹೇಳ್ತಾ ಇದ್ರು."

"ನಿಮ್ ಟೀಚರ್ ಬಾಳಾ ಕಿಲಾಡಿ. ನನ್ ಜೊತೆ ವಾದ ಮಾಡ್ಲೇ ಇಲ್ಲ. ತಾನು ತುಂಬ ತಿಳ್ಕೊಂಡಿದೀನಿ ಅಂತ ಜಂಭ ಇರಬೇಕು, ಆ ಮನುಷ್ಯನಿಗೆ." ಅಪ್ಪನ ಈ ತಣ್ಣಗಿನ ಟೀಕೆಯಿಂದ ವಿಭಾಕರನಿಗೆ ಇರುಸುಮುರುಸಾಯಿತು. ಟೀಚರ್ ಯಾವತ್ತೂ ಅವನ ಜೊತೆ ಒರಟಾಗಿ ವರ್ತಿಸಿರಲಿಲ್ಲ. ಅವನ ಅಭಿಪ್ರಾಯವನ್ನು ಖಂಡತುಂಡ ನಿರಾಕರಿಸಿರಲಿಲ್ಲ. ತಾವು ಹೇಳಬೇಕಾದ್ದನ್ನು ಸರಳವಾಗಿ ಸಹನೆಯಿಂದ ತಿಳಿಸಿಕೊಡುತ್ತಿದ್ದರು. ಅಂತಹ ಟೀಚರ್ ಬಗ್ಗೆ ಅಪ್ಪನ ಟೀಕೆ ಅವನಿಗೆ ಇಷ್ಟವಾಗಲಿಲ್ಲ. ಅಪ್ಪನ ಮುಖವನ್ನೇ ಸುಮ್ಮನೆ ನೋಡಿದ.

"ಏನ್ ಹಾಗ್ ನೋಡ್ತಾ ಇದಿಯಾ. ನಿನ್ ಟೀಚರ್‌ಗೆ ಜಂಭ ಅಂದೆ ಅಂತಾನಾ ?"

"ಅಪ್ಪ ನೀನ್ ಹೇಳಿದ್ದಕ್ಕೆ ನಾನು ಯಾವಾಗ್ಲೂ ತಿರುಗಿ ಮಾತಾಡಿಲ್ಲ. ನಮ್ ಟೀಚರ್ ಹೇಳೋದು ಮತ್ತು ನೀನ್ ಹೇಳೋದು ಎರಡೂ ತಾಳೆಯಾಗೋಲ್ಲ. ಆದರೆ ಅವರು ಹೇಳೋದ್ರಲ್ಲಿ ನಿಜ ಇರುತ್ತೆ ಅನ್ಸುತ್ತೆ. ಪ್ರತಿದಿನ ಶಾಲೆಗೆ ನಾನು ಖುಷಿಯಾಗಿ ಹೋಗೋಕೆ ಅವರೇ ಕಾರಣ. ಅವರಿಗೆ ಏನೂ ಹೇಳ್ಬೇಡ."

"ನೋಡೆ, ಕೇಳ್ದೇನೆ ನಿನ್ ಮಗನ ಮಾತನ್ನ? ನನಗಿಂತ ಇವನಿಗೆ ಟೀಚರ್ರೆ ಹೆಚ್ಚು. ಈ ಕಾಲದ ಮಕ್ಕಳಿಗೆ ಹೆತ್ತವರ ಬಗ್ಗೆ ಗೌರವ ಅಷ್ಟರಲ್ಲೆ ಇದೆ. ವಯಸ್ಸಾದ ಕಾಲಕ್ಕೆ ಇವರು ನಮ್ಮನ್ನು ನೋಡ್ತಾರೇನೆ ?" ಅಪ್ಪನ ದನಿಯಲ್ಲಿ ಸ್ವಲ್ಪ ಹೆಚ್ಚೇ ಅನ್ನುವಷ್ಟು ಗಡಸುತನವಿತ್ತು.

"ಅವರಿಗಿಂತ ನೀನ್ ಕಡಿಮೆ ಅಂತ ನಾನು ಯಾವತ್ತೂ ಅನ್ಕೊಂಡಿಲ್ಲ, ಅಪ್ಪ, ನಿನ್ ಮೇಲೂ ಪ್ರೀತಿ ಇದೆ. ಒಂದು ಕೆಲಸ ಮಾಡ್ತೀಯಾ, ಹಾಗ್ ಮಾಡಿದ್ರೆ ನಿಂಗೆ ಸಮಾಧಾನ ಆಗಬಹುದು ?"

"ಓಹೋ, ಏನದು ?"

"ನಿಮ್ಮ ಸಂಘದವರು ನಡೆಸೊ ಶಾಲೆಗೇ ನನ್ನನ್ನು ಸೇರಿಸಿಬಿಡು. ನೀನ್ ಹೇಳೋದನ್ನೆ ತಾನೆ ಅವರು ಹೇಳ್ಕೊಡೋದು ?" ಧೈರ್ಯವನ್ನೆಲ್ಲ ಒಗ್ಗೂಡಿಸಿ ವಿಭಾಕರ ಒಂದೇ ಉಸಿರಿಗೆ ಹೇಳಿಬಿಟ್ಟ.

ಅಪ್ಪ ಒಂದು ಕ್ಷಣ ಮಗನನ್ನು ದುರುಗುಟ್ಟಿ ನೋಡಿ ದಢನೆ ಎದ್ದು ಹೋಗಿಬಿಟ್ಟರು.

"ಅಮ್ಮ, ಅಪ್ಪ ಯಾಕೆ ಎದ್ದು ಹೋದ್ರು ?"

"ಇನ್ನೇನು ಮಾಡ್ತಾರೆ, ನಿನ್ ಪ್ರಶ್ನೆ ಹಂಗಿತ್ತಲ್ಲ ಮಗನೆ ? ಸಂಘದ ಶಾಲೆಗೆ ಸೇರಿಸಿದ್ರೆ ತನ್ನ ಹಾಗೆ ಮಗನೂ ಗಂಟೆ ಬಾರಿಸ್ಕೊಂಡು ಗರ್ಭಗುಡಿಯ ಕತ್ತಲಲ್ಲಿ ಬದುಕು ಸವೆಸಬೇಕಾಗುತ್ತೆ ಅಂತ ನಿಮ್ಮಪ್ಪನಿಗೆ ಗೊತ್ತಿಲ್ವ ?" ಅಮ್ಮ ವಿಶ್ಲೇಷಿಸಿದಳು.

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ
ಅಂಚೆ ಪೆಟ್ಟಿಗೆ ಸಂಖ್ಯೆ ೯, ಶಾಖಾ ಕಛೇರಿ, ಕುವೆಂಪು ನಗರ
ಹೌಸಿಂಗ್ ಬೋರ್ಡ್ ಕಾಲನಿ, ಹಾಸನ – ೫೭೩ ೨೦೧

# ಬಲಪಂಥೀಯನಿಗೊಂದು ಪತ್ರ

ಮಿಸ್ಟರ್ ಫ್ಯಾಸಿಸ್ಟ್,
ಕರಸೇವಕರ ರೈಲು ಸುಡುವಾಗ ನಾನು ಹೊರಗಿರಲಿಲ್ಲ.
ಆಪರೇಷನ್ ಎಂಟೆಬ್ಬೆಯಲ್ಲಿ ನನ್ನಪ್ಪ ಸಾಯಲಿಲ್ಲ.
ನನ್ನ ತಮ್ಮಂದಿರು ತಾಜ್ ಹೋಟೆಲಿನಲ್ಲಿ ಎಕೆ–೪೭ ಹೊತ್ತು
ನಡೆದಾಡಲಿಲ್ಲ.
'ಮೈ ನೇಮ್ ಈಸ್ ಖಾನ್' ಇಂಡಿಯಾದ ವಿರುದ್ಧವಲ್ಲ.
ಹೇಗೆ ಶಿವಾಜಿ ನಿನ್ನ ಖಾಸಾ ಅಣ್ಣನಲ್ಲವೋ
ಹಾಗೆಯೇ ಘೋರಿ ನನ್ನ ಮಾವನೂ ಅಲ್ಲ
ಘಜ್ನಿ ನನ್ನ ದೊಡ್ಡಪ್ಪನೂ ಅಲ್ಲ.
ನಾನು 'ವಂದೇ ಮಾತರಂ' ಹಾಡುತ್ತೇನೆ, ಬಿಡುತ್ತೇನೆ.
ಅದು ನನ್ನಿಷ್ಟ.
'ಸಾರೇ ಜಹಾಂಸೆ ಅಚ್ಛಾ' ನನಗೆ ಅದಕ್ಕಿಂತ ಇಷ್ಟ.
ಪ್ಯಾಲಸ್ತೈನ್ ಸ್ವಾತಂತ್ರ್ಯಕ್ಕೆ ನಾನು ಪ್ರಾಣ ಬಿಡಲು ಸಿದ್ಧ.
ಇಸ್ರೇಲ್‌ನ ಎದೆಗೆ ಕಾಲೆತ್ತಿ ಒದೆಯಲು ಬದ್ಧ.
ನೀನಿದನ್ನು 'ಇಸ್ಲಾಮಿಕ್ ಧರ್ಮಾಂಧತೆ' ಅನ್ನು.
ಐ ಡೋಂಟ್ ಕೇರ್.
ಟಿಪ್ಪೂ ಒಳ್ಳೆಯವನೋ ಕೆಟ್ಟವನೋ ಹೇಳಲು
ನಾನಾಗ ಬದುಕಿರಲಿಲ್ಲ.
ಆದರೆ ಒಂದಂತೂ ಸತ್ಯ
ಅವನು ನಿನಗಿಂತ ದೊಡ್ಡ ಮನುಷ್ಯ.
ಮಿಸ್ಟರ್ ಫ್ಯಾಸಿಸ್ಟ್,
ನೀನೊಬ್ಬ ಗೋಬೆಲ್ಸ್‌ನ ಗುಲಾಮ.
'ನೂರು ಬಾರಿ ಒಂದು ಸುಳ್ಳಾಡಿದರೆ ಸತ್ಯವಾಗುತ್ತದೆ'
ಅನ್ನುವುದು ನಿನ್ನ ಅಚಲ ವಿಶ್ವಾಸ.
ನಾನೊಬ್ಬ ಇಂಡಿಯನ್ ಮುಸ್ಲಿಂ ಆಗಿಯೇ ಇರುವೆ.
ಮತ್ತು ಎದೆ ತಟ್ಟಿ ಹೇಳುತ್ತೇನೆ
ನಾನೊಬ್ಬ ಹಿಂದುಸ್ತಾನಿ ಮುಸಲ್ಮಾನ–
ಐ ಮೀನ್, ಭಾರತೀಯ ತುರುಕ.

**ಸಫ್ವಾನ್ ವೇಣೂರು**
ನಿಶಾಂತ್ ಮಂಜಿಲ್, ಗಾರ್ಡಡಿ ಅಂಚೆ
ಬೆಳ್ತಂಗಡಿ ತಾ॥ ದ.ಕ. ಜಿಲ್ಲೆ – ೫೭೪೨೧೭

## ಟರ್ಕಿ ಕ್ಷಿಪ್ರಕ್ರಾಂತಿ : ಕಳವಳಕಾರಿ ವಿದ್ಯಮಾನಗಳು

**ಯೂ**ರೋಪು ಮತ್ತು ಏಷಿಯ ಖಂಡಗಳಿಗೆ ಕೊಂಡಿಯಾಗಿರುವ ಟರ್ಕಿ ಗಣರಾಜ್ಯ ಈಗ ಒಡೆದ ಮನೆ. ಅಮೆರಿಕ ನೇತೃತ್ವದ 'ನ್ಯಾಟೋ' ಸದಸ್ಯ ರಾಷ್ಟ್ರ ಟರ್ಕಿಯಲ್ಲಿ ಈಚೆಗೆ ಸಂಭವಿಸಿದ ಮಿಲಿಟರಿ ಕ್ಷಿಪ್ರಕ್ರಾಂತಿಯ ವೈಫಲ್ಯ ಮತ್ತು ತದನಂತರದ ವಿದ್ಯಮಾನಗಳು ಅದಕ್ಕೆ ನಿದರ್ಶನ. ಜುಲೈ ಮೂರನೇ ವಾರದಲ್ಲಿ ಜರುಗಿದ ಸೇನಾ ಬಂಡಾಯ ೨೫೦ ಜನರನ್ನು ಬಲಿ ತೆಗೆದುಕೊಂಡು ಸಹಸ್ರಾರು ಮಂದಿಯನ್ನು ಕಾರಾಗೃಹಕ್ಕೆ ದೂಡಿದೆ. ಅಧ್ಯಕ್ಷ ಎರ್ಡೋಗನ್ ಅಷ್ಟೇ ಕ್ಷಿಪ್ರವಾಗಿ ಕ್ರಮ ಕೈಗೊಂಡು ಜನರಲ್‌ಗಳು, ಅಡ್ಮಿರಲ್‌ಗಳೂ ಒಳಗೊಂಡಂತೆ ಆರು ಸಾವಿರ ಸೇನಾಧಿಕಾರಿಗಳನ್ನು ಕಿತ್ತುಹಾಕಿದ್ದಾರೆ, ಹತ್ತಾರು ಸಾವಿರ ಸರಕಾರಿ ನೌಕರರು, ನ್ಯಾಯಾಧೀಶರುಗಳು, ಗವರ್ನರುಗಳು ಮುಂತಾದವರನ್ನು ಕೆಲಸದಿಂದ ವಜಾ ಮಾಡಿದ್ದಾರೆ. ಸೇನಾಕ್ರಾಂತಿಯ ಹಿಂದೆ ಅಮೆರಿಕದ ಕೈವಾಡ ಇರುವುದು ಸ್ಪಷ್ಟವಾಗುತ್ತಿದೆ. ರಾಜಧಾನಿ ಅಂಕಾರಾದಲ್ಲಿರುವ ಅಮೆರಿಕನ್ ಎಂಬೆಸಿಯು ಕ್ಷಿಪ್ರಕ್ರಾಂತಿಯನ್ನು "ಜನತಾ ಬಂಡಾಯ" ಎಂದು ಬಣ್ಣಿಸಿತು. ಈ ವಿದ್ಯಮಾನದ ಹಿಂದಿರುವ ಫೆತುಲ್ಲಾ ಗುಲೆನ್ ೧೯೯೯ರಿಂದ ಅಮೆರಿಕದಲ್ಲಿ ನೆಲೆಸಿದ್ದಾನೆ. ಈತನನ್ನು ಬಂಧಿಸಿ ಟರ್ಕಿಗೆ ಕಳಿಸಲು ಅಮೆರಿಕ ಸಿದ್ಧವಿಲ್ಲ. ಟರ್ಕಿ ನೀಡಿರುವ ಸಾಕ್ಷ್ಯಾಧಾರಗಳು ನಂಬಲರ್ಹವಲ್ಲ ಎನ್ನುವುದು ಅಮೆರಿಕ ಸರಕಾರದ ಅಭಿಮತ. ಮೂರು ವರ್ಷಗಳ ಹಿಂದೆ ಅಧ್ಯಕ್ಷ ಎರ್ಡೋಗನ್ ಮತ್ತು ಗುಲೆನ್ ನಡುವೆ ಭಿನ್ನಾಭಿಪ್ರಾಯ ಬಂದು ಒಡಕು ಸಂಭವಿಸಿತ್ತು. ಸೇನಾಕ್ರಾಂತಿಯ ಹಿಂದೆ ಗುಲೆನ್ ಬೆಂಬಲಿಗರು ಸಕ್ರಿಯರಾಗಿದ್ದರು ಎಂದು ಹೇಳಲಾಗಿದೆ.

ಟರ್ಕಿಯಲ್ಲಿ ಸೇನಾಕ್ರಾಂತಿ ಅಥವಾ ಸೇನಾಡಳಿತ ಹೊಸದೇನಲ್ಲ. ೧೯೬೦ರಲ್ಲೇ ಸೇನೆಯು ಚುನಾಯಿತ ಸರಕಾರವನ್ನು ಪದಚ್ಯುತಗೊಳಿಸಿ ಅಧಿಕಾರವಹಿಸಿಕೊಂಡಿತು. ಅನಂತರ ತಪ್ಪದೇ ಆಗಾಗ್ಗೆ ಪ್ರತಿ ದಶಕಕ್ಕೊಮ್ಮೆ ಮಿಲಿಟರಿ ಅಧಿಕಾರ ಸ್ಥಾಪನೆಗೊಂಡಿದೆ. ೨೦೦೭ರಲ್ಲಿ ಎರ್ಡೋಗನ್ ಗುಲೆನಿಸ್ಟರು ಎಂದು ಕರೆದುಕೊಳ್ಳುತ್ತಿದ್ದ ಫೆತುಲ್ಲಾ ಗುಲೆನ್ ಬೆಂಬಲಿಗರ ನೆರವಿನಿಂದ ಸಂಭವಿಸಲಿದ್ದ 'ಮಿಲಿಟರಿ ಕೂಪ್' ಅನ್ನು ತಪ್ಪಿಸಿದ್ದರು. ಅಧಿಕಾರ ಹಂಚಿಕೊಂಡ ಗುಲೆನಿಸ್ಟರು ಆಯಕಟ್ಟಿನ ಸ್ಥಾನಗಳಲ್ಲಿ ತಮಗೆ ಅನುಕೂಲವಾದ ಅಧಿಕಾರಿ ವರ್ಗವನ್ನು ನೇಮಕ ಮಾಡಿತ್ತು. ಇದಕ್ಕೆ ಸೇನೆಯ ಬೆಂಬಲವೂ ಇತ್ತು. ಹಾಗಾಗಿ ಈಗ ಅಧ್ಯಕ್ಷರು ಈಚೆಗಿನ ವಿದ್ಯಮಾನಗಳ ನಂತರ ಹತ್ತಾರು ಸಾವಿರ ಮಂದಿ ಅಧಿಕಾರಿಗಳನ್ನು ವಜಾ ಮಾಡಿದೆ. ಜುಲೈನಲ್ಲಿ ಜರುಗಿದ ಕ್ಷಿಪ್ರಕ್ರಾಂತಿಗೆ ಟರ್ಕಿಯ ಜನಸಂಖ್ಯೆಯಲ್ಲಿ ಶೇ. ೧೦ರಷ್ಟಿರುವ ಯೂರೋಪಿಯನ್ ಮೂಲದ 'ಬಳಿ ಟರ್ಕರ' ಬೆಂಬಲ ಇತ್ತು. ಈ ವಿಭಾಗದ ಜನ ಉನ್ನಾತಾಧಿಕಾರಿಗಳಾಗಿ, ನ್ಯಾಯಾಧೀಶರುಗಳು, ಸೇನಾಧಿಕಾರಿಗಳು ಆಗಿದ್ದವರು. ಈಗ ಟರ್ಕಿಯಲ್ಲಿ ತುರ್ತು ಪರಿಸ್ಥಿತಿ ಹೇರಲಾಗಿದೆ. ೨೦೦೮ರಿಂದಲೇ ಅಧ್ಯಕ್ಷ ಎರ್ಡೋಗನ್ ದೇಶದ ರಾಜಕೀಯದಲ್ಲಿ ಮಿಲಿಟರಿ ಪ್ರಾಬಲ್ಯವನ್ನು ನಿಯಂತ್ರಿಸಲು ಹಲವು ಕ್ರಮಗಳನ್ನು ಕೈಗೊಂಡಿದ್ದರು.

ಪಾರ್ಲಿಮೆಂಟರಿ ಪ್ರಜಾಪ್ರಭುತ್ವದಿಂದ ಟರ್ಕಿ ಎಂದೂ ವಿಮುಖವಾಗದು ಎಂದು ಹೇಳುತ್ತಿದ್ದಾರೆ. ಆದರೆ ಅವರ ಆಡಳಿತ ಶೈಲಿಯನ್ನು ಅರಿತಿರುವ ಜನ ಮಾತ್ರ ಅದನ್ನು ನಂಬುತ್ತಿಲ್ಲ. ಆಡಳಿತ ಹಾಗೂ ಶಾಸಕಾಂಗಗಳ ಮೇಲೆ ನಿಯಂತ್ರಣ ಸಾಧಿಸಿಕೊಂಡಿರುವ ಅಧ್ಯಕ್ಷರು ದೇಶದ ಜಾತ್ಯತೀತ ಸ್ವರೂಪವನ್ನು ಬದಲಿಸುವ ಸಂಭವ ಅಧಿಕವಾಗಿದೆ. ಕ್ಷಿಪ್ರಕ್ರಾಂತಿಯ ವೈಫಲ್ಯದಿಂದಾಗಿ ಎರ್ಡೋಗನ್ ಅವರಿಗೆ ಇಸ್ಲಾಮಿಕ್ ಮೌಲ್ಯಗಳನ್ನು ಎತ್ತಿ ಹಿಡಿಯುವಂಥ ಆಡಳಿತವನ್ನು ಸ್ಥಾಪಿಸುವ ಕನಸು ನನಸಾದೀತು. ಏನೇ ಆದರೂ ಕ್ಷಿಪ್ರಕ್ರಾಂತಿಯ ನಂತರದ ವಿದ್ಯಮಾನಗಳು ದೇಶದ ಛಿದ್ರತೆಗೆ ಮೂಲವಾಗುತ್ತಿವೆ.

* * *

## ವಿವಾದಗಳ ಸುಳಿಯಲ್ಲಿ ಸಿಲುಕಿರುವ 'ಸಾರ್ಕ್'

**ದ**ಕ್ಷಿಣ ಏಶಿಯಾದ ಏಳು ರಾಷ್ಟ್ರಗಳು ಭಾರತ, ಬಾಂಗ್ಲಾದೇಶ, ಶ್ರೀಲಂಕಾ, ಪಾಕಿಸ್ತಾನ, ಭೂತಾನ, ನೇಪಾಳ, ಮಾಲ್ಡೀವ್ಸ್‌ನ ಅಧಿಪತಿಗಳು ೧೯೮೫ರಲ್ಲಿ ಮೊದಲ ಬಾರಿಗೆ ಶೃಂಗಸಭೆ ಬಾಂಗ್ಲಾದೇಶದ ರಾಜಧಾನಿ ಢಾಕ್ಕಾದಲ್ಲಿ ನಡೆಸಿ ಸ್ಥಾಪಿಸಿದ ಸಂಘಟನೆಯೇ 'ಸಾರ್ಕ್' – ಪ್ರಾದೇಶಿಕ ಸಹಕಾರಕ್ಕಾಗಿ ದಕ್ಷಿಣ ಏಶಿಯಾದ ಸಂಘಟನೆ. ಈ ಶೃಂಗಸಭೆಯ ಉದ್ದೇಶ ಸ್ಪಷ್ಟವಾದ್ದಾಗಿತ್ತು – ಇತಿಹಾಸ ಸಂಸ್ಕೃತಿಯಿಂದ ಬೆಸೆದುಕೊಂಡಿರುವ ಸದಸ್ಯರಾಷ್ಟ್ರಗಳ ನಡುವೆ ಪರಸ್ಪರ ತಿಳುವಳಿಕೆ ಉಂಟುಮಾಡುವುದರ ಮೂಲಕ ಒಳ್ಳೆಯ ನೆರೆಸಂಬಂಧಗಳನ್ನು ಮತ್ತು ಅರ್ಥಪೂರ್ಣವಾದ ಸಹಕಾರವನ್ನು ಪ್ರೇರೇಪಿಸುವುದರ ಮೂಲಕ ದಕ್ಷಿಣ ಏಶಿಯಾದ ಪ್ರದೇಶದಲ್ಲಿ ಶಾಂತಿ, ಸ್ವಾತಂತ್ರ್ಯ, ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಸಮೃದ್ಧಿಯನ್ನು ಸಾಧಿಸುವುದು. ಮೂರು ದಶಕಗಳಿಂದ ಅಸ್ತಿತ್ವದಲ್ಲಿರುವ ಈ ಸಂಘಟನೆ ಇದುವರೆಗೆ ಸಾಧಿಸಿರುವ ಪ್ರಗತಿಯನ್ನು ಅವಲೋಕಿಸಿದರೆ ನಿರೀಕ್ಷಿತ ಗುರಿ ಮುಟ್ಟಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ.

ಸಂಘಟನೆಯಲ್ಲಿರುವ ಪ್ರಮುಖ ರಾಷ್ಟ್ರಗಳಾದ ಭಾರತ ಮತ್ತು ಪಾಕಿಸ್ತಾನಗಳ ನಡುವಣ ವಿವಾದಗಳಿಂದಾಗಿ 'ಸಾರ್ಕ್' ಸೊರಗಿದೆ. ನಿರೀಕ್ಷಿತ ಫಲಗಳನ್ನು ನೀಡದೆ ಹೋಗಿದೆ. ಸ್ಥಾಪನೆಯಾದಾಗ ಇನ್ನೂ ಜಾಗತೀಕರಣದ ಬಿಸಿ ತಟ್ಟಿರಲಿಲ್ಲ. ಆರ್ಥಿಕ ಕ್ಷೇತ್ರದಲ್ಲಿ ತಕ್ಕಮಟ್ಟಿಗೆ ಈ ದೇಶಗಳ ಮಧ್ಯೆ ಸಹಕಾರ ವೃದ್ಧಿಯಾಗಿದೆಯಾದರೂ ಉಳಿದ ಕ್ಷೇತ್ರಗಳಲ್ಲಿ ಪ್ರಗತಿ ಕಡಿಮೆ. ಪ್ರತಿಸಲ ಶೃಂಗಸಭೆ ಸರದಿಯ ಮೇಲೆ ಸದಸ್ಯ ರಾಷ್ಟ್ರಗಳಲ್ಲಿ ನಡೆಯುವಾಗಲೂ ಏನಾದರೊಂದು ರಾಜಕೀಯ ಬಿಕ್ಕಟ್ಟು ಉದ್ಭವಿಸಿರುತ್ತದೆ. ಸಂಬಂಧಪಟ್ಟ ದೇಶಗಳ ಜುಗ್ಗಾಟ ಇರುತ್ತದೆ. ಇಂಥ ಸಂಘಟನೆಗಳ ಶೃಂಗ ಸಮಾವೇಶ ವಿವಿಧ ದೇಶಗಳ ಮಧ್ಯೆ ಇರುವ ಭಿನ್ನತೆಗಳನ್ನು ನಿವಾರಿಸಿಕೊಳ್ಳಲು ಒಂದು ಅವಕಾಶವಾಗಿರುತ್ತದೆ. ಆದರೆ ಅದು ಸಾಧ್ಯವಾಗದೇ ಇರುವುದು ವಿಷಾದಕರ. ಶೃಂಗಸಭೆಗೆ ಮುನ್ನ ವಿವಿಧ ಹಂತಗಳಲ್ಲಿ ಅಂದರೆ ಅಧಿಕಾರಿಗಳ ಮಟ್ಟದಲ್ಲಿ, ಸಚಿವರ ಮಟ್ಟದಲ್ಲಿ ಪೂರ್ವಸಿದ್ಧತೆ ನಡೆಯುತ್ತದೆ. ಬಗೆಹರಿಯದ ವಿವಾದಾತ್ಮಕ ವಿಷಯಗಳು ಶೃಂಗಸಭೆಯಲ್ಲಿ ಪ್ರಸ್ತಾಪವಾಗುತ್ತದೆ. ರಾಜಕೀಯಕ್ಕೆ ಸಂಬಂಧಪಟ್ಟ ವಿವಾದಗಳಿಂದ ದೂರ ಇರುವ ಈ ಶೃಂಗಸಭೆಗಳ ಕಾಲದಲ್ಲಿ ದ್ವಿಪಕ್ಷೀಯ ನಾಯಕರುಗಳು ಪ್ರತ್ಯೇಕವಾಗಿ ಮುಖಾಮುಖಿಯಾಗಿ ಭೇಟಿಯಾದಾಗ ತಕ್ಕಮಟ್ಟಿಗೆ ಇತ್ಯರ್ಥವಾಗಿರುವ ಸಂದರ್ಭಗಳು ಇಲ್ಲದಿಲ್ಲ. ಒಟ್ಟಾರೆ ನೋಡಿದಾಗ ಆಗಿರುವ ಪ್ರಗತಿ ಹೇಳಿಕೊಳ್ಳುವಂಥದ್ದೇನಲ್ಲ, ತಪ್ಪದೆ ಶೃಂಗಸಭೆಗಳು ನಡೆಯುವುದೊಂದುಬಿಟ್ಟರೆ.

ಈ ಸಲ ಎಂದರೆ ೨೦೧೬ರ ಡಿಸೆಂಬರ್‌ನಲ್ಲಿ ಪಾಕಿಸ್ತಾನದ ರಾಜಧಾನಿ ಇಸ್ಲಾಮಾಬಾದ್‌ನಲ್ಲಿ ಶೃಂಗಸಭೆ ನಡೆಯಲಿದೆ. ಭಯೋತ್ಪಾದನೆ ಕುರಿತ ಆರೋಪ–ಪ್ರತ್ಯಾರೋಪಗಳಿಂದಾಗಿ ಭಾರತ–ಪಾಕಿಸ್ತಾನಗಳ ನಡುವಣ ಸಂಬಂಧಗಳು ಹದಗೆಟ್ಟಿದೆ. ಕಾಶ್ಮೀರದ ಪರಿಸ್ಥಿತಿಯಿಂದಾಗಿ ಅದು ಇನ್ನಷ್ಟು ಅಧೋಗತಿಗಿಳಿದಿದೆ. ಈಚೆಗೆ ನಡೆದ ಅಧಿಕಾರಿಗಳ ಮಟ್ಟದ ಸಾರ್ಕ್ ಸಭೆಯಲ್ಲಿ ಯಾವುದೇ ಒಮ್ಮತಕ್ಕೆ ಬರಲಾಗಲಿಲ್ಲ. ಹಾಗೆಯೇ ಗೃಹಸಚಿವರ ಮಟ್ಟದಲ್ಲಿ ನಡೆದ ಸಭೆಯಲ್ಲಿ ಭಾರತದ ಗೃಹಸಚಿವ ರಾಜನಾಥ ಸಿಂಗ್ ಯಾವುದೇ ಚರ್ಚೆಗಳಲ್ಲಿ ಭಾಗಿಯಾಗದೆ ಮಧ್ಯದಲ್ಲಿಯೇ ಸಭೆಯಿಂದ ನಿರ್ಗಮಿಸಿ ರಾಜಧಾನಿ ದೆಹಲಿಗೆ ಹಿಂದಿರುಗಿದರು. ಇದು ಖಂಡಿತ ಒಳ್ಳೆಯ ಬೆಳವಣಿಗೆಯಲ್ಲ. ಹೀಗೆಯೇ ಮುಂದುವರಿದರೆ 'ಸಾರ್ಕ್' ಏನಾದೀತು ಎನ್ನುವ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಭಾರತ ಉಪಖಂಡದಲ್ಲಿರುವ ಇನ್ನೊಂದು ದೇಶ ಮ್ಯೆನ್ಮಾರ್ ಈ ಸಂಘಟನೆಯಿಂದ ದೂರ ಉಳಿದಿದೆ ಎನ್ನುವುದನ್ನು ಗಮನಿಸಬೇಕು. ಸದುದ್ದೇಶದಿಂದ ಸ್ಥಾಪನೆಯಾಗಿರುವ ಈ ಸಂಘಟನೆ ವಿವಾದಗಳ ಸುಳಿಯಲ್ಲಿ ಸಿಲುಕಿ ನಲುಗದಿರಲಿ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

## ಟಿ. ವಿ. ಲೋಕ

# ಏಕಸ್ವಾಮ್ಯದತ್ತ ವಾಲುತ್ತಿರುವ ಟಿ.ವಿ. ವಾಹಿನಿಗಳು



**ಜನಪ್ರಿಯತೆ ಗಳಿಸಲು ವಾಹಿನಿಗಳು ನಡೆಸುವ ಸರ್ಕಸ್‌ಗಳು ಹಲವು. ಪ್ರತಿಭೆ ಅರಸುವ ಹೆಸರಿನಲ್ಲಿ ಸಣ್ಣ ಮಕ್ಕಳಿಂದ ಹಿಡಿದು ವಯಸ್ಕರವರೆಗೆ ನಾನಾ ಬಗೆಯ ಸ್ಪರ್ಧೆಗಳನ್ನೂ ಏರ್ಪಡಿಸುವುದು ಅವುಗಳಲ್ಲಿ ಒಂದು. ಹೆಚ್ಚಾಗಿ ಇವು ಚಿತ್ರಗೀತೆಗಳಿಗೆ ಸಂಬಂಧಪಟ್ಟದ್ದಾಗಿರುತ್ತದೆ. ಅಪರೂಪಕ್ಕೊಮ್ಮೆ ಭಕ್ತಿಗೀತೆಗಳು ಇರುತ್ತವೆ. ಕಿರಿ ವಯಸ್ಸಿನ ಮಕ್ಕಳು ಪ್ರೇಮಗೀತೆಗಳನ್ನು ಹಾಡುವುದನ್ನು ಕೇಳಿದಾಗ ಇರಿಸುಮುರಿಸಾಗುತ್ತದೆ. ಇಲ್ಲಿ ಸಾಹಿತ್ಯಕ್ಕಿಂತ ಧ್ವನಿ, ಅನುಕರಣೆಗಳಿಗೇ ಪ್ರಾಧಾನ್ಯತೆ. ಇದರ ಜೊತೆಗೆ ಮಕ್ಕಳಿಂದ ವಯಸ್ಕರ ಪಾತ್ರಗಳನ್ನು ಮಾಡಿಸುವುದೂ ಕೂಡ ಉಂಟು. ಅರ್ಥವಿಲ್ಲದ ಇಂಥ ಕಾರ್ಯಕ್ರಮಗಳ ಅಟಾಟೋಪ, ಆರ್ಭಟಗಳೇ ಅಧಿಕ.**

**ಸಿ. ಆರ್. ಕೃಷ್ಣರಾವ್**

**ಟಿ.**ವಿ. ಮಾಧ್ಯಮದ ಮೇಲೆ ಕಾರ್ಪೊರೇಟ್ ವಲಯದ ಹಿಡಿತ ಬಿಗಿಯಾಗಿದೆ. ಅದು ವಿಸ್ತರಿಸುತ್ತಿದೆ. ಇತ್ತೀಚೆಗೆ ಖಾಸಗಿ ಉದ್ಯಮದ ಮಾಲಿಕತ್ವದಲ್ಲಿದ್ದ ಸುವರ್ಣ ವಾಹಿನಿ ಈಗ ಸ್ಟಾರ್ ಸುವರ್ಣ ಆಗಿದೆ. ಅಂದರೆ ಸ್ಟಾರ್ ಟಿವಿ ನೆಟ್‌ವರ್ಕ್‌ನ ಭಾಗವಾಗಿದೆ. ಸ್ಟಾರ್ ಟಿವಿ ಜಗತ್ತಿನಾದ್ಯಂತ ಹರಡಿಕೊಂಡಿರುವ ಅತಿ ದೊಡ್ಡ ಜಾಲ. ಮನರಂಜನೆ, ಕ್ರೀಡೆ, ಸುದ್ದಿ ಮುಂತಾದ ಹಲವು ಚಾನೆಲ್‌ಗಳನ್ನು ಹೊಂದಿರುವ ಇದು ಅಮೆರಿಕ ಮೂಲದ್ದು. 'ಟ್ವೆಂಟಿಯೆತ್ ಸೆಂಚುರಿ ಫಾಕ್ಸ್' ಎಂಬ ಪ್ರಖ್ಯಾತ ಹಾಲಿವುಡ್ ಸ್ಟುಡಿಯೋದ ಅಧೀನದಲ್ಲಿರುವ ಸಂಸ್ಥೆ. ಇದರ ಸಂಸ್ಥಾಪಕ, ಒಡೆಯ ರೂಪರ್ಟ್ ಮುರ್ಡೋಕ್ ಎಂಬಾತ. ಈ ಉದ್ಯಮಿಯ ಹೆಬ್ಬಯಕೆ ಮಾಧ್ಯಮಗಳ ಸಾಮ್ರಾಟನಾಗಿ ಮೆರೆಯುವುದು. ಅದು ಪ್ರಿಂಟ್ ಮೀಡಿಯ ಆಗಿರಬಹುದು ಅಥವಾ ಎಲೆಕ್ಟ್ರಾನಿಕ್ ಮೀಡಿಯಾ ಆಗಿರಬಹುದು. ಯಾವುದಾದರೂ ಸರಿ ಈ ಸ್ವಾಮ್ಯ ಪಡೆದುಕೊಳ್ಳಲು ಸಿದ್ಧ. ಮಾಧ್ಯಮ ಕ್ಷೇತ್ರದಲ್ಲಿ ಈತ ಜಾಗತೀಕರಣಕ್ಕೆ ಹೇಳಿಮಾಡಿಸಿದ ವ್ಯಕ್ತಿ. ವೃತ್ತಪತ್ರಿಕೆಗಳನ್ನು, ಟಿ.ವಿ. ಚಾನೆಲ್‌ಗಳನ್ನು ಕಬಳಿಸುವುದು ವೃತ್ತಿ. ಕಳೆದ ಶತಮಾನದ ಅಂತ್ಯದಲ್ಲೆ ಸ್ಟಾರ್ ಮತ್ತು ಝೀ ಟಿವಿಗಳು ಖಾಸಗೀ ವಾಹಿನಿಗಳಾಗಿ ಪ್ರವೇಶಿಸಿದವು. ಒಂದು ಜಾಗತಿಕ ಮೂಲದ್ದು, ಇನ್ನೊಂದು ಕಾರ್ಪೊರೇಟ್ ಸಂಸ್ಥೆ ಭಾರತೀಯ 'ಎಸ್ಸೆಲ್ ಗ್ರೂಪ್'ಗೆ ಸೇರಿದ್ದು. ಎರಡೂ ಅತ್ಯಂತ ಜನಪ್ರಿಯ ಚಾನೆಲ್‌ಗಳು. ಸ್ಟಾರ್ ಟಿ.ವಿ. ಭಾರತದಲ್ಲಿ ಎಂಟು ಭಾಷೆಗಳಲ್ಲಿ ೫೮ ಚಾನೆಲ್‌ಗಳನ್ನು ಹೊಂದಿದೆ. ಮುಂದೆ ಯಾವ ಯಾವ ಚಾನೆಲ್‌ಗಳನ್ನು ನುಂಗಿಹಾಕುತ್ತದೋ ನೋಡಬೇಕು. ಅಂದಹಾಗೆ ನಮ್ಮ ಭಾರತದ ಶೇ. ೭೦ರಷ್ಟು ಚಾನೆಲ್‌ಗಳಲ್ಲಿ ಅಂಬಾನಿ ಸೋದರರು ಹಣ ತೊಡಗಿಸಿದ್ದಾರೆ ಎನ್ನುವ ಮಾಹಿತಿಯೂ ಇದೆ. ಕಳೆದ ಸಲ ಪಾರ್ಲಿಮೆಂಟಿಗೆ ನಡೆದ ಚುನಾವಣೆಗಳಲ್ಲಿ ಮಾಧ್ಯಮಗಳು ವಹಿಸಿದ ಪಾತ್ರವನ್ನು ನೆನಪು ಮಾಡಿಕೊಂಡರೆ ಇದು ಅರ್ಥವಾದೀತು.

ಇನ್ನು ಕಾರ್ಯಕ್ರಮಗಳ ಪರಿ ನೋಡೋಣ. ಸೀರಿಯಲ್ಲುಗಳ ಸಂತೆ ವಿಚಾರ ಸಾಕಷ್ಟು ವಿವರಗಳನ್ನು ಪರಿಶೀಲಿಸಲಾಗಿದೆ. ಅವುಗಳ ವೀಕ್ಷಣೆಯನ್ನು ಮಿಸ್ ಮಾಡಿಕೊಳ್ಳದಿರಲು ಬಹುಮುಖ್ಯವಾದ ಕೆಲಸ ಕಾರ್ಯಗಳನ್ನು ಅಲಕ್ಷ್ಯ ಮಾಡುವವರೂ ಇದ್ದಾರೆ. ಎಲ್ಲ ಧಾರಾವಾಹಿಗಳೂ ಯಾವ ಭಾಷೆಯಲ್ಲೇ ಆದರೂ ತದ್ರೂಪು. ಈಚೆಗೆ ಹಿಂದಿಯಿಂದ ಆಯ್ದ ಕೆಲವು ಡಬ್ಬಿಂಗ್ ಆಗಿ ಕನ್ನಡದಲ್ಲಿ ಕೆಲವು ಚಾನೆಲ್‌ಗಳಲ್ಲಿ ಪ್ರಸಾರವಾಗುತ್ತಿವೆ. ಇದರಲ್ಲಿಯೂ ಡಬ್ಬಿಂಗ್ ಹರಡಿ ಮುಂದೆ ವಿವಾದಕ್ಕೆಡೆ ಯಾದೀತೇನೋ. ಅನ್ಯಭಾಷೆಗಳಲ್ಲಿ ಯಶಸ್ವಿಯಾದ ಸೀರಿಯಲ್ಲುಗಳನ್ನು ಕನ್ನಡೀಕರಿಸುವ ಕಾಯಕ ನಡೆದುಕೊಂಡು ಬಂದಿದೆ. ಸೀರಿಯಲ್ಲುಗಳಲ್ಲೂ ಮೂಢನಂಬಿಕೆಗಳನ್ನು ಬೇರೂರಿಸುವ ರೀತಿಗೆ ಕಡಿಮೆ ಏನಿಲ್ಲ. ಸಮಕಾಲೀನ ಸಮಸ್ಯೆಗಳನ್ನು ಕುರಿತು ಚಿಂತನೆಗೆ ಹಚ್ಚುವ ಸೀರಿಯಲ್‌ಗಳು ಇಲ್ಲವೇ ಇಲ್ಲ ಎನ್ನಬಹುದು. ಸಾಂಸಾರಿಕ ವ್ಯವಹಾರಗಳು, ಘರ್ಷಣೆಗಳು, ಜಗಳಗಳು, ಪ್ರೀತಿ, ಪ್ರೇಮ, ಸಂಬಂಧಗಳು ಇವುಗಳಿಗೇ ಪ್ರಾಧಾನ್ಯತೆ. ಟಿ.ಆರ್.ಪಿ. ಆಧಾರಿತವಾಗಿರುವ ಇಂಥ ಕಾರ್ಯಕ್ರಮಗಳಿಂದ ಬೇರೇನನ್ನು ನಿರೀಕ್ಷಿಸಲು ಸಾಧ್ಯ. ಅರ್ಧಗಂಟೆಯಲ್ಲಿ ಹತ್ತು ನಿಮಿಷ ಜಾಹೀರಾತುಗಳಿಗೇ ಹೋಗುವುದರಿಂದ ಎಷ್ಟು ಬೇಕಾದರೂ ಹಿಗ್ಗಿಸಬಹುದು, ತಿರುವುಗಳಿಗೆ ಬೇಕಾದಷ್ಟು ಅವಕಾಶಗಳಿರುತ್ತವೆ ನಿರ್ದೇಶಕರಿಗೆ.

ಇನ್ನು ಉಳಿದಂತೆ ಹೆಚ್ಚಿನ ಕಾರ್ಯಕ್ರಮಗಳು ಸಿನಿಮಾ ಆಧಾರಿತವಾದವು. ತಾರೆಯರ ಜೊತೆ ಸಂದರ್ಶನ ಹರಟೆ, ಬಿಡುಗಡೆಯಾಗಲಿರುವ ಚಿತ್ರಗಳ ತುಣುಕುಗಳು ಒಂದು ಕಡೆಯಾದರೆ, ಚಿತ್ರಗಳ ಪ್ರದರ್ಶನ ಇದ್ದೇ ಇರುತ್ತದೆ. ಹಳೆಯ ಚಿತ್ರಗಳಾದರೂ ಗಿರಾಕಿಗಳು ಇದ್ದೇ ಇರುತ್ತಾರೆ. ಚಿತ್ರಗೀತೆಗಳ ಪ್ರಸಾರಕ್ಕೆ ಪ್ರತ್ಯೇಕ ಚಾನೆಲ್‌ಗಳೇ ಇವೆ. ಕನ್ನಡದಲ್ಲಿ ಉದಯ ಮ್ಯೂಸಿಕ್, ಪಬ್ಲಿಕ್ ಮ್ಯೂಸಿಕ್, ರಾಜ್ ಮ್ಯೂಸಿಕ್ ಮುಂತಾದವು ಬೆಳಗಿನಿಂದ ರಾತ್ರೆವರೆಗೆ ಒಂದೇ ಸಮನಾಗಿ ಚಿತ್ರಗೀತೆಗಳನ್ನು ಪ್ರದರ್ಶಿಸುತ್ತವೆ. ಇದೊಂದು ಸುಲಭವಾದ ಜನಪ್ರಿಯವಾದ ಕಾರ್ಯಕ್ರಮ. ಇಷ್ಟೆಲ್ಲ ಚಾನೆಲ್‌ಗಳಿದ್ದರೂ ಶುದ್ಧ ಶಾಸ್ತ್ರೀಯ ಸಂಗೀತ ಪ್ರಸಾರ ಮಾಡುವ ಚಾನೆಲ್ ಒಂದೂ ಇಲ್ಲ. ದೂರದರ್ಶನ ಮಾತ್ರ ಅರ್ಧಗಂಟೆ ಕಾರ್ಯಕ್ರಮ ಒದಗಿಸುತ್ತದೆ, ಶನಿವಾರಗಳು ಒಂದು ಗಂಟೆ ಇರುತ್ತದೆ. ಹಿಂದೆ ಒಮ್ಮೆ ರೇಡಿಯೋದಲ್ಲಿ ಶಾಸ್ತ್ರೀಯ ಸಂಗೀತವನ್ನೇ ಪ್ರಸಾರ ಮಾಡುತ್ತಿದ್ದ ಕೇಂದ್ರವೊಂದಿತ್ತು. ಆದರೆ ಅದು ಹೆಚ್ಚು ದಿನ ನಡೆಯಲಿಲ್ಲ. ಹಲವರು ಪ್ರಯತ್ನಿಸಿದಾಗ್ಯೂ ಅಂಥ ಚಾನೆಲ್ ಒಂದನ್ನು ಸ್ಥಾಪಿಸಲಾಗಲಿಲ್ಲ. ಏಕೆಂದರೆ ಶಾಸ್ತ್ರೀಯ ಸಂಗೀತ ಮಾರಾಟದ ಸರಕಲ್ಲ,

ಜಾಹೀರಾತುಗಳನ್ನು ತರುವ ವ್ಯವಧಾನ ಹೊಂದಿಲ್ಲ. ಈಗಲೇ ಟಿವಿ ಚಾನೆಲ್‌ಗಳನ್ನು ನಡೆಸಿಕೊಂಡು ಹೋಗುವುದು ದುಸ್ತರವಾಗುತ್ತಿದೆ ಎಂಬುದು ನಿರ್ವಿವಾದದ ಸಂಗತಿ. ಸಿಬ್ಬಂದಿಯ ಸಂಬಳ, ಸಾರಿಗೆ, ಇತರೆ ಖರ್ಚುಗಳು ಸಾಕಷ್ಟು ದುಬಾರಿ. ಎಷ್ಟೊ ಚಾನೆಲ್‌ಗಳಲ್ಲಿ ಪ್ರತಿ ತಿಂಗಳೂ ವೇತನ ವಿಲೇವಾರಿಯೇ ಕಷ್ಟವಾಗುತ್ತಿದೆ. ಇದು ಆಂತರಿಕ ವ್ಯವಹಾರ, ಗೋಪ್ಯ, ಏನೇ ಆದರೂ ಜನಸಾಮಾನ್ಯರ ಮೇಲೆ ಪ್ರಭಾವ ಬೀರಬಲ್ಲ ಸಾಧನ ಈ ದೃಶ್ಯಮಾಧ್ಯಮ.

ಜನಪ್ರಿಯತೆ ಗಳಿಸಲು ವಾಹಿನಿಗಳು ನಡೆಸುವ ಸರ್ಕಸ್‌ಗಳು ಹಲವು. ಪ್ರತಿಭೆ ಅರಸುವ ಹೆಸರಿನಲ್ಲಿ ಸಣ್ಣ ಮಕ್ಕಳಿಂದ ಹಿಡಿದು ವಯಸ್ಕರವರೆಗೆ ನಾನಾ ಬಗೆಯ ಸ್ಪರ್ಧೆಗಳನ್ನೂ ಏರ್ಪಡಿಸುವುದು ಅವುಗಳಲ್ಲಿ ಒಂದು. ಹೆಚ್ಚಾಗಿ ಇವು ಚಿತ್ರಗೀತೆಗಳಿಗೆ ಸಂಬಂಧಪಟ್ಟದ್ದಾಗಿರುತ್ತವೆ. ಅಪರೂಪಕ್ಕೊಮ್ಮೆ ಭಕ್ತಿಗೀತೆಗಳು ಇರುತ್ತವೆ. ಕಿರಿ ವಯಸ್ಸಿನ ಮಕ್ಕಳು ಪ್ರೇಮಗೀತೆಗಳನ್ನು ಹಾಡುವುದನ್ನು ಕೇಳಿದಾಗ ಇರಿಸುಮುರಿಸಾಗುತ್ತದೆ. ಇಲ್ಲಿ ಸಾಹಿತ್ಯಕ್ಕಿಂತ ಧ್ವನಿ, ಅನುಕರಣೆಗಳಿಗೇ ಪ್ರಾಧಾನ್ಯತೆ. ಇದರ ಜೊತೆಗೆ ಮಕ್ಕಳಿಂದ ವಯಸ್ಕರ ಪಾತ್ರಗಳನ್ನು ಮಾಡಿಸುವುದೂ ಕೂಡ ಉಂಟು. ಅರ್ಥವಿಲ್ಲದ ಇಂಥ ಕಾರ್ಯಕ್ರಮಗಳ ಅಟಾಟೋಪ, ಆರ್ಭಟಗಳೇ ಅಧಿಕ. ಬಿಗ್‌ಬಾಸ್ ಎಂಬ ರಿಯಾಲಿಟಿ ಶೋಗಳು ಈ ವರ್ಗಕ್ಕೆ ಸೇರಿದವು. ಇಂಥ ರಿಯಾಲಿಟಿ ಶೋಗಳು ಸೀಮಿತ ಕಾಲಾವಧಿಯಾಗಿರುವುದರಿಂದ ಬಚಾವು. ಟಿ.ವಿ. ವಾಹಿನಿಗಳಲ್ಲಿ ಪ್ರಸಾರವಾಗುವ ಎಲ್ಲ ಕಾರ್ಯಕ್ರಮಗಳೂ ನಮ್ಮ ಸಂಸ್ಕೃತಿಯ ಪ್ರತೀಕ ಎಂದು ಬಣ್ಣಿಸುವುದೀಗ ವಿಪರ್ಯಾಸ. ಅದು ಸಿನಿಮಾ ಆಧಾರಿತವಾಗಿರಬಹುದು ಅಥವಾ ಬೇರೆ ಇನ್ನೇನಾದರೂ ಆಗಿರಬಹುದು, ಯಾವುದೇ ಆದರೂ ಅವು ಭಾರತೀಯತೆಯ ಪ್ರತೀಕ ಎನ್ನುವುದು ಸರಿಯಲ್ಲ.

ಲೈಂಗಿಕತೆ ಮತ್ತು ಅಪರಾಧವನ್ನು ವೈಭವೀಕರಿಸುವುದು ಮಾಧ್ಯಮಗಳಲ್ಲಿ ಹಿಂದಿನಿಂದ ಬಂದದ್ದು. ಪ್ರಿಂಟ್ ಮೀಡಿಯದಲ್ಲಿ ಅಂಥ ವೈಭವೀಕರಣವನ್ನು ಪೀತ ಪತ್ರಿಕೋದ್ಯಮ ಎಂದು ಕರೆಯುತ್ತಿದ್ದರು. ಅಂಥ ಪತ್ರಿಕೆಗಳು ಮೂಲವಾಹಿನಿಗೆ ದೂರವಾಗಿದ್ದುವು. ಆದರೆ ಇಂದು ಈ ಶತಮಾನದಲ್ಲಿ, ಉತ್ಪ್ರೇಕ್ಷೆ, ವೈಭವೀಕರಣ, ಹಿಂಸಾಕೃತ್ಯಗಳು, ದುರ್ಘಟನೆಗಳಿಗೆ ಪ್ರಾಧಾನ್ಯತೆ ವಿಪರೀತದ ಮಟ್ಟಕ್ಕೆ ಹೋಗಿದೆ. ಇಲೆಕ್ಟ್ರಾನಿಕ್ ಮಾಧ್ಯಮ ಬಂದ ಮೇಲಂತೂ ಅದು ಮುಗಿಲು ಮುಟ್ಟಿದೆ. ದೃಶ್ಯಮಾಧ್ಯಮವಾಗಿರುವುದರಿಂದ ಅಪರಾಧ ಕೃತ್ಯವನ್ನು ಪುನರ್‌ರೂಪಿಸಿ ಬಣ್ಣಕಟ್ಟಿ ಹೇಳುವುದಕ್ಕೆ ಆದ್ಯತೆ ಬಂದಿದೆ. ಬಹುತೇಕ ಸಂದರ್ಭಗಳಲ್ಲಿ ಚಾನೆಲ್‌ಗಳು ಆರೋಪವನ್ನು ಸಾಬೀತು ಮಾಡುವ, ಅವುಗಳೇ ಪ್ರಾಸಿಕ್ಯೂಟರುಗಳು, ತೀರ್ಪುಗಾರರೂ ಆಗುವ ಸಂಭವವೇ ಹೆಚ್ಚು. ಪ್ರಚಾರಪ್ರಿಯವಾದ ಪೊಲೀಸು ಅಧಿಕಾರಿಗಳ ಸಹಯೋಗದಿಂದ ಕ್ರೈಮ್ ಸ್ಟೋರಿಗಳನ್ನು ಪ್ರಸಾರ ಮಾಡಲಾಗುತ್ತದೆ. ಅಪರಾಧ ಕೃತ್ಯದಲ್ಲಿ ಮೃತರಾದವರ ಕುಟುಂಬದವರ ಪ್ರಲಾಪ, ಅವರೊಂದಿಗೆ ಸಂದರ್ಶನ ಇವುಗಳಿಗೆ ರೀತಿನೀತಿಗಳೇ ಇಲ್ಲವಾಗಿದೆ. ರಾತ್ರೆ ಒಂಬತ್ತರ ನಂತರ ವಾಹಿನಿಗಳಲ್ಲಿ ಅವುಗಳದ್ದೇ ದರ್ಬಾರು. ಪ್ರತಿದಿನ ಒಂದೊಂದು ಕ್ರೈಮ್ ಸ್ಟೋರಿಗಳನ್ನು ಪ್ರಸಾರ ಮಾಡುವ ಚಾನೆಲ್‌ಗಳಿವೆ. ಹಳೆಯ ಪ್ರಕರಣವನ್ನೋ ಹೊಸದನ್ನೋ ಕೆದಕಿ, ರಂಜಕವಾಗಿ ಪ್ರದರ್ಶಿಸುವುದು ಸಾಮಾನ್ಯ. ಇದಕ್ಕೆ ಧ್ವನಿ ಕೊಡುವವರೂ ಕೂಡ ಒಂದು ಬಗೆಯ ಗೊಗ್ಗರು ದನಿಯಲ್ಲಿ ವಿವರಗಳನ್ನು, ಕೊಡುತ್ತಾರೆ. ಪ್ರಾಯಶಃ ಇದು ಅಪರಾಧ ಕೃತ್ಯದ ವೈಭವೀಕರಣದ ಒಂದು ಭಾಗವಾಗಿರುವುದೋ ಏನೋ. ಹಾಗೆಯೇ ದುರ್ಘಟನೆಗಳ, ಅಪಘಾತಗಳ ದೃಶ್ಯಾವಳಿಗಳೂ ಕೂಡ. ಪ್ರೇಕ್ಷಕರ ಮನದಲ್ಲಿ ಕ್ಲೇಶ ಉಂಟುಮಾಡುವ ದೃಶ್ಯಗಳನ್ನು ಪ್ರದರ್ಶಿಸುವುದು ಸರಿಯಲ್ಲದಿದ್ದರೂ ಅದನ್ನು ವಾಹಿನಿಗಳು ನಿರ್ಲಕ್ಷಿಸುವುದೇ ಹೆಚ್ಚು. ಅಪರಾಧದ ಹೀನ ಕೃತ್ಯವನ್ನೋ, ಘೋರವಾದ ದೃಶ್ಯವನ್ನೋ ಪ್ರಕಟಿಸದಿರುವ ನೀತಿಸಂಹಿತೆ ಒಂದು ಕಾಲದಲ್ಲಿ ಇತ್ತು. ಆದರೆ ಈಗ ಅಂಥವಾವುದರ ಬಗೆಗೂ ಚಾನೆಲ್‌ಗಳು ತಲೆಕೆಡಿಸಿಕೊಳ್ಳುವುದಿಲ್ಲ.

ಪುನರ್ಜನ್ಮ, ಭೂತಪ್ರೇತಗಳ ಹಾವಳಿ ಮುಂತಾದವನ್ನು ಕುರಿತು ದಿಗ್ಭ್ರಮೆ ಹುಟ್ಟಿಸುವಂತೆ ಪ್ರಸಾರ ಮಾಡುವುದು ಇನ್ನೊಂದು ಬಗೆ. ಕೆಲವು ಚಾನೆಲ್‌ಗಳು ಇಂಥವುಗಳಲ್ಲೇ ವಿಶೇಷ ಪರಿಣತೆ ಪಡೆದುಕೊಂಡಿವೆ ಎನ್ನಬೇಕು. ಇವುಗಳಿಗೆ ಧ್ವನಿ ಕೊಡುವವರೇ ಬೇರೆ. ಪುಣ್ಯ ಇಂಥ ಕಾರ್ಯಕ್ರಮಗಳು ರಾತ್ರೆ ಹೊತ್ತಾದ ಮೇಲೆ ಪ್ರಸಾರವಾಗುವುದು. ಖಂಡಿತ ಇವು ಮಕ್ಕಳು, ಅಳ್ಳೆದೆಯವರು ನೋಡುವಂಥದ್ದಲ್ಲ. ಮೂಢನಂಬಿಕೆ ಮೂಡಿಸುವುದರಲ್ಲಿ ಇಂಥ ಕಾರ್ಯಕ್ರಮಗಳು ಎತ್ತಿದ ಕೈ. ಮುಖ್ಯಮಂತ್ರಿ ಸಿದ್ದರಾಮಯ್ಯ ತರಲು ಬಯಸಿರುವ ಮೂಢನಂಬಿಕೆ ನಿಷೇಧ ಕಾಯಿದೆ ಬಂದಾಗ ಇಂಥ ಕಾರ್ಯಕ್ರಮಗಳಿಗೆ ಕಡಿವಾಣ ಬಿದ್ದೀತೇನೊ. ಮಸೂದೆ ಮಂಡನೆಯಾಗಿ, ಅದು ಕಾಯಿದೆರೂಪ ಪಡೆದುಕೊಳ್ಳುವವರೆಗೆ ಭಯವಿಲ್ಲ. ಎಲ್ಲ ಮಾಮೂಲಾಗಿ ನಡೆದುಕೊಂಡು ಹೋಗುತ್ತದೆ.

(ಮುಂದುವರಿಯುವುದು)

ಸಿ. ಆರ್. ಕೃಷ್ಣರಾವ್
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಬರೆಯಲಾಗದು ಕವಿತೆ



ಮದುವೆ ಕರೆಯೋಲೆ ಹಿಡಿದು ನಿಂತಾಗ
ಕಪ್ಪಾಗಿ ಕಾಣುತ್ತಿದ್ದ ಸೂರ್ಯ
ಮತ್ತು
ನನ್ನ ಕಣ್ಣುಗಳು ನಿರ್ಧರಿಸಿದವು
ನೋಡಬಾರದೆಂದು ಹಗಲಿನಲಿ ನಿನ್ನ

ಬರೆಯುವದಿಲ್ಲ :
ಲಗ್ನಪತ್ರಿಕೆಗಳು ತುರುಬಿನ ಹೂವು
ಮೂರ್ಛೆಗೊಳಿಸುವ ಸತ್ಯ
ಹೇಳುವದಿಲ್ಲ :
ಸಾಯಲಿರುವ ನಗುವಿಗೊಂದು 'ಕೊನೆಯ ದಿನ'
ಪಕ್ಕಾದ ಮುಹೂರ್ತ !

ಅಲ್ಲಿ ತುಳಿದ ಕುರುಹುಗಳು
ಕತ್ತು ಕೊಯ್ದ ಕಲೆಗಳು
ನೀನೇ ಹೊತ್ತ ರಥ
ದ ಮೆರವಣಿಗೆ – ನಿನಗೆ ತಿಳಿಯುವದಿಲ್ಲ !
ಗೆಳತಿ,
'ರೇಖೆಗಳನು' ರಂಗೋಲಿಯೆಂದು
ನಂಬಿರುವಾಗ
ಬರೆಯಲಾಗದು ಕವಿತೆ.

ಉಮೇಶ ನಾಯ್ಕ
ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು
ಜಗಲಬೇಟ – ೫೮೧ ೩೪೧, ಜೊಯಿಡಾ ತಾಲೂಕು, ಉತ್ತರ ಕನ್ನಡ ಜಿಲ್ಲೆ



ತಿಂಗಳ ಕಥೆ

# ಜಗತ್ಪ್ರಸಿದ್ಧ ಮೂಗು

"ಹೆಸರು ?"

"ಶಾಂತಬಾಲ ಕ್ಯೂಲ."

"ಗಂಡನ ಹೆಸರು ?"

ಶಾಂತಬಾಲ ಮಾತನಾಡಲಿಲ್ಲ. ಆದರೆ ಅವಳೆದುರು ಕುಳಿತ ವ್ಯಕ್ತಿ ಅವಳು ಹಾಗೆ ಸುಮ್ಮನೆ ಇರಲು ಬಿಡಲಿಲ್ಲ. "ಮಾತಾಡು, ಸುಮ್ಮನೆ ಏಕಿದ್ದೀ. ಹೇಳು. ಇದು ಸರ್ಕಾರಿ ಕೆಲ್ಸ. ಕಾನೂನು ಕಟ್ಟಳೆ ಪಾಲಿಸಬೇಕು. ಏನು ನಿನ್ನ ಪತಿಯ ಹೆಸರು ?"

"ಹರಿಧನ್ ಕ್ಯೂಲ."

"ಜೋರಾಗಿ ಹೇಳು, ಸ್ಪಷ್ಟವಾಗಿ ಹೇಳು."

ಶಾಂತಬಾಲ ಈಗ ಕತ್ತೆತ್ತಿ ಎದುರು ಕುಳಿತವನ ಕಣ್ಣುಗಳಲ್ಲಿ ಕಣ್ಣಿಟ್ಟು ದಿಟ್ಟಿಸಿ, "ಹರಿಧನ್ ಕ್ಯೂಲ" ಎಂದಳು.

"ವಿಳಾಸ ?"

ಈ ವೇಳೆಗೆ ಶಾಂತಬಾಲಳಿಗೆ ಈ ಮಂದಿ ಏನೇನು ಪ್ರಶ್ನಿಸುವರೆಂದು ಅರ್ಥವಾಗಿತ್ತು. ಪ್ರಾರಂಭಕ್ಕೆ ಅಳುವುದೊಂದೇ ಅವಳಿಗಿದ್ದದ್ದು, ಎಷ್ಟೊಂದು ಮಂದಿ, ದಿಗ್ಭ್ರಮೆಗೊಳಿಸುವ ಎಂತೆಂತಹ ಪ್ರಶ್ನೆ ಅವರು ಕೇಳುತ್ತಾ ಇದ್ದದ್ದು. ಅವರು ಕೇಳಿದ ಪ್ರಶ್ನೆಗಳಲ್ಲಿ ಅರ್ಧದಷ್ಟು ಅವಳಿಗೆ ಅರ್ಥವೇ ಆಗಲಿಲ್ಲ. ಹೀಗಾಗಿ, ಅವಳು ಅತ್ತಿದ್ದೇ ಅತ್ತಿದ್ದು. ಆದರೆ ಅವಳು ಅಷ್ಟು ಬಿಟ್ಟು ಇನ್ನೇನು ತಾನೇ ಮಾಡಲು ಸಾಧ್ಯ?

ಒಂದು ಸಂಜೆ ಅವಳ ಅಪ್ಪ ಅವಳ ಮದುವೆ ನಿಶ್ಚಯಿಸಿಕೊಂಡು ಮನೆಗೆ ಬಂದ. ಆಗ ಅವಳ ತಾಯಿ "ಅಲ್ಲಾ, ಅವಳಿನ್ನೂ ಬಾಲೆ, ಅವಳನ್ನು ಅವಳ ತಂದೆಗೆ ಸಮಾನನಾಗಿರೋ ವಿದುರನಿಗೆ ಕೊಡಲೊಪ್ಪಿದ್ದೀರಲ್ಲಾ ನ್ಯಾಯವೆ ?" ಎಂದು ಪ್ರಶ್ನಿಸುತ್ತಿರುವಾಗ ಅವಳ ಅಪ್ಪ ತೆಳ್ಳನೆಯ ಪಟ್‌ಪಟೆ ಟವಲೊಂದರಿಂದ ಕೈಕಾಲು ಒರೆಸಿಕೊಳ್ಳುತ್ತಿದ್ದವನು ಅರ್ಧಕ್ಕೆ ನಿಲ್ಲಿಸಿ, "ಅವನೇ ವಧು ತೆರ ಕೊಡುತ್ತೇನೆಂದು ಆಣೆ ಮಾಡವ್ನೆ. ಗೊತ್ತಾ ? ಚಿನ್ನದ ಬಳೆ, ಕತ್ತಿನ ಸರ ಎಲ್ಲಾ ಕೊಡ್ತಾನೆ ಹೆಣ್ಣಿಗೆ. ವರದಕ್ಷಿಣೆ ತೆತ್ತು ಪ್ರಾಯದ ಗಂಡು ತರೋ ಶಕ್ತಿ ನನಗೆಲ್ಲಿದೆ ?"

ಆಮೇಲೆ ಅವಳ ಹೃದಯದ ಬಡಿತ ನಿಲ್ಲುವ ಮುನ್ನ ಬಿದಿರಿನ ತಡಿಕೆಯ ಆ ಕಡೆ ತಾಂಬೂಲ ವರ್ಣದ ಎಲೆಗಳಿಗೆ ಸುಪಾರಿ ಚೂರು ಹಾಕಿ ಸುತ್ತುತ್ತ ಕುಳಿತಿದ್ದ ಅವಳಿಗೆ ಪುನಃ ಅವಳಮ್ಮ ಹೇಳುವ ಮಾತಿನ ದನಿ ಕೇಳಿಸಿತು: "ಅವನು ಬಹು ದೂರದ ಊರಿನವನು. ಯಾರಿಗೆ ಗೊತ್ತು. ನಾವು ಅವಳನ್ನು ಮತ್ತೊಮ್ಮೆ ನೋಡ್ತಿವೋ ಇಲ್ವೋ ರೈಲಿನಲ್ಲಾದ್ರೂ ಎಷ್ಟು ಸಲ ಅಂತ ಹೋಗಾಕೆ ಆಯ್ತದೆ ? ಹೇಗಿದ್ದಾಳೆ ಅಲ್ಲಿ ಅಂತ ನಮಗೆ ಗೊತ್ತಾಗೊಲ್ಲ. ಅಲ್ಲದೆ ಅವಳಿನ್ನೂ ಎಳೆ ಕಂದ.

ಪುನಃ ಅವಳ ಅಪ್ಪ ಒರಟೊರಟಾಗಿ ಬುಸುಗುಡುತ್ತ "ಆಯ್ತು, ಅವಳು ಮನೇಲೇ ಕೂತ್ಕೊಳ್ಳಿ ಬಿಡು, ನಿನ್ನ ಮುದ್ದು ಮಗಳಿಗೆ ರಾಜಕುಮಾರ ಬರ್ತಾನೆ ಅನ್ನೋ ಆಸೆ ಇಟ್ಕೊಂಡಿದ್ದೀಯಾ ?"

"ಹಾಗಲ್ಲ, ಹಾಗಲ್ಲ, ಅದಲ್ಲ, ನನ್ನ ಮಾತಿನ ಅರ್ಥ. ನಮಗಿರೋಳು ಒಬ್ಬಳೇ ಮಗಳು. ನನಗೆ ಅವಳನ್ನು ಬಿಟ್ಟಿರೋಕೆ ಆಗಲ್ಲ. ಜೊತೆಗೆ, ನಮ್ಮ ಶಾಂತ ತುಂಬ ಒಳ್ಳೇ ಹುಡ್ಗಿ. ಅವಳು ಆ ವಿದುರನ ಕೂಡ ಏಗಲಾರಳು. ಆ ವಯಸ್ಸಾದೋನ ಸಂಗಡ ಅವಳಾದರೂ ಹೇಗೆ ನೀಚ್‌ತಾಳೆ ? ಎಲ್ಲ ವಿಧಿ ಲಿಖಿತ. ವ್ಯಥೆ ಪಟ್ಟು ಏನು ಉಪಯೋಗ ?"

"ದಿಟ, ನೀನಾಗಲಿ, ನಾನಾಗಲಿ, ಏನನ್ನೂ ಬದಲಿಸೋಕೆ ಆಗೊಲ್ಲ" ಎಂದ ಅವಳ ಅಪ್ಪನ ಮಾತು ಈಗ ಮೆತ್ತಗಾಗಿತ್ತು, ಕೋಪ ಹಾರಿತ್ತು.

"ನಾನೇನು ಅವನ್ನೆಲ್ಲ ಯೋಚ್ನೆ ಮಾಡಿಲ್ಲ ಅಂತ ಅಂದುಕ್ಕೊಂಡೆಯಾ ? ಆದರೆ ನಾನೇನು ಮಾಡಲಿ, ನಿನಗೆ ಗೊತ್ತಲ್ಲ. ಕೊಟ್ಟ ಹೆಣ್ಣು ಕುಲಕ್ಕೆ ಹೊರಗು ಅಂತ. ಅವರನ್ನು ಶಾಶ್ವತವಾಗಿ ಮನೇಲಿ ಇಟ್ಕೋಳ್ಳೊಕ್ಕಾಲ್ಲಲ್ವ . ನೆನಪಿದೆಯಾ ನಿನಗೆ, ನಮ್ಮಮ್ಮ ಸದಾ ನಿನ್ನ ಮಗಳನ್ನು ಮದುವೆ ಮಾಡಿಕೊಡೋದು ಸಾವಿಗೆ ದೂಡೋದು ಎರಡೂ ಒಂದೇ ಅಂತ ಹೇಳ್ತಿದ್ದ ಮಾತು, ಅವಾಗಿನ್ನೂ ನಮ್ಮ ಶಾಂತ ಮಗು..."

ಅಳುವುದೊಂದನ್ನು ಬಿಟ್ಟು ಮತ್ತಿನ್ನೇನನ್ನೂ ಮಾಡುತ್ತಿರಲಿಲ್ಲ ಶಾಂತ. ಸೆರಗಿನಲ್ಲಿ ಮುಖ ಮುಚ್ಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಮದುವೆಯಾದ ಮೇಲೆ ತನಗೆ ವರನೆಂದು ತನ್ನ ಪಾಲಕರು ಆಯ್ಕೆ


ಬಂಗಾಳಿ ಮೂಲ

**ಜೋಯಾ ಮಿತ್ರ**

ಕನ್ನಡಕ್ಕೆ

**ಸೊಂದಲಗೆರೆ ಲಕ್ಷ್ಮೀಪತಿ**

ಮಾಡಿದವನು ಒಂದು ಬಗೆಯ ಸಾವೇ ಎಂದು ಅದನ್ನು ಅಪ್ಪುವ ಅನಿವಾರ್ಯತೆ ತನ್ನದೆಂದುಕೊಂಡಳು, ಅವಳು ಅವನನ್ನು ಪ್ರಥಮ ಸಲ ನೋಡಿದಾಗ. ಆಮೇಲೆ ಹರಿವ ಕಣ್ಣೀರನ್ನು ಒರೆಸಿಕೊಳ್ಳಲು ಅವಳ ಎಡಗೈ ಸೀರೆಯ ಪಲ್ಲುವಿನಲ್ಲಿ ಶಾಶ್ವತ ಆಶ್ರಯ ಪಡೆಯಿತು. ಪ್ರಾರಂಭದ ಆ ಮೊದಲ ದಿನ, ಆ ಮೊದಲ ತಿಂಗಳು ವ್ಯಥೆಯನ್ನು ಅನುಭವಿಸಿದಳು. ಆಮೇಲೆ ವರುಷಗಳು ಉರುಳಿದಂತೆ ಮಕ್ಕಳೂ ಆದವು, ಹದಿಮೂರು ವರುಷಗಳಲ್ಲಿ ಒಂಬತ್ತು ಮಕ್ಕಳು ಸಾಲು ಸಾಲಾಗಿ ಅವುಗಳಲ್ಲಿ ಐದು ಮಸಣ ಸೇರಿ ನಾಲ್ಕು ಮಾತ್ರ ಉಳಿದವು. ಪ್ರಸ್ಥದ ಪ್ರಥಮ ರಾತ್ರಿಯ ಪಲ್ಲಂಗದ ಮೇಲೆ ಭಯದಿಂದ ಹೆಚ್ಚು ಕಡಿಮೆ ಸತ್ತೇ ಹೋಗಿದ್ದಳು. ಆ ಬಳಿಕದ ನೋವು, ಹಾಸಿಗೆ ಮೇಲಿನ ಹೊದಿಕೆ ಮೇಲಾದ ರಕ್ತದ ಕಲೆ ನೋಡಿ ರೋದಿಸುತ್ತ, "ನನ್ನನ್ನು ಬಿಟ್ಟು ಬಿಡಿ, ನಿಮ್ಮ ದಮ್ಮಯ್ಯ" ಎಂದು ಗೋಗರೆದಿದ್ದಳು ಅವನೊಡನೆ.




ಆದರೆ ಹರಿಧನ್ ಕ್ಯೂಲ ಅವಳ ಮಾತಿಗೆ ಸೊಪ್ಪು ಹಾಕಲಿಲ್ಲ. ಅವಳ ಕೆನ್ನೆಗೆ ಬಾರಿಸಿ ಕೈಗಳನ್ನು ಬಿಗಿಯಾಗಿ ನುಲುಚಿದ, ಅವಳು ಅಯ್ಯೋ ! ಅಮ್ಮಾ ! ಎನ್ನುವ ತನಕ. ಚಿನ್ನದ ಬಳೆಗಳಿಂದ ಶೋಭಿಸುತ್ತಿದ್ದ ಆ ಸುಂದರ ಬಾಹುಗಳನ್ನು ಅವನು ಖರೀದಿಸಿದ್ದ. ಅವಳ ಮೊದಲ ಶಿಶು ಹೊರಬಂದಾದ ಅವಳ ಹದಿಮೂರು ವರ್ಷದ ದೇಹ ಎರಡು ತುಂಡಾದಂತೆ ತೋಚಿತು, ಅವನ ಮೇಲೆ ಅನುರಾಗ ಎಳ್ಳಷ್ಟೂ ಇಲ್ಲವಾಯಿತು. ಅವನೆಡೆ ಕಣ್ಣೆತ್ತಿಯೂ ನೋಡಲು ಅವಳಿಗೆ ಸಹ್ಯವೆನಿಸಲಿಲ್ಲ. ಅವಳ ಆತ್ಮ ಭಯ ಹಾಗೂ ನಾಚಿಕೆಯಿಂದ ದಾಸಾನುದಾಸಳಂತೆ ವರ್ತಿಸಲಾರಂಭಿಸಿತು. ಏಕೆ ನನ್ನ ಹೆತ್ತವರು ನನ್ನನ್ನು ಈ ನರಕಕ್ಕೆ ದೂಡಿದರು ಎಂದೆಲ್ಲ ಪ್ರಶ್ನಿಸಿಕೊಂಡಳು ತನ್ನನ್ನು ತಾನೇ. ತನ್ನ ಪೋಷಕರಿಗೆ ಇದು ನಿಜವಾಗಿಯೂ ಹೀಗೆಯೇ ಎಂಬ ವಾಸ್ತವ ಸತ್ಯ ಗೊತ್ತಿದ್ದರೂ ಎಂದೆಲ್ಲ ಚಿಂತಿಸಿದಳು. ಅವಳನ್ನು ಅವಳ ಹೊಸ ಮನೆಯಲ್ಲಿ ಕಾಪಾಡಲು ಬೇರೆ ಯಾರೂ ಇರಲಿಲ್ಲ, ಅತ್ತೆ ಇಲ್ಲ, ನಾದಿನಿ ಇಲ್ಲ, ಮೈದುನ ಇಲ್ಲ, ತಿರುಗಿ ನೋಡಲು...! ಅವಳ ಗಂಡನ ಮೊದಲ ಪತ್ನಿ ಎರಡೆರಡು ಬಾರಿ ಮನೆ ತೊರೆದು ಓಡಿಹೋಗಿದ್ದಳೆಂದು ಗುಸು, ಗುಸು ಮಾತು ಕೇಳಿ, ಕೊನೆಗೆ ಆಕೆ ಇಹಲೋಕದಿಂದಲೇ ಮರೆಯಾದಳೆಂಬ ಗುಟ್ಟು ರಟ್ಟಾಯಿತು ಶಾಂತಬಾಲ ನೀರು ತರಲು ಹೋದಾಗ.

"ಪಾಪ ! ಆ ಕೊಣಪನನ್ನು ಈ ಚೋಕರಿ ಹೇಗೆ ತಾನೆ ತೃಪ್ತಿ ಪಡಿಸ್ಯಾಳು ? ಅವಳ ಅಮ್ಮನಾದರೂ ಇದನ್ನು ಹೇಗೆ ಸಹಿಸಿದಳು ಈ ಮೃಗದ ಕೈಗೆ ಇವಳನ್ನಿತ್ತು ?" ಆದರೆ, ಇಂತಹ ಈ ಮಾತುಗಳೊಂದನ್ನೂ ಯಾರೂ ನೇರವಾಗಿ ಅವಳೊಂದಿಗೆ ಆಡಲಿಲ್ಲ. ಅವಳ ಪ್ರಥಮ ಶಿಶು ನಾಲ್ಕು ತಿಂಗಳು ಬದುಕಿತ್ತು. ಅದು ಸತ್ತು ಎರಡು ತಿಂಗಳಾದ ಮೇಲೆ ತಾನೀಗ ಪುನಃ ಗರ್ಭಿಣಿ ಎಂದು ಅವಳಿಗೆ ಅರಿವಾಯಿತು. ಬಾವಿಗೆ ಬಿದ್ದೋ, ದನದ ಕೊಟ್ಟಿಗೆಯಲ್ಲಿ ನೇಣು ಹಾಕಿಕೊಂಡೋ ಸಾಯೋಣ ಅಂತೆಲ್ಲ ಯೋಚಿಸಿದಳು. ಅವಳ ಹಲವು ರಾತ್ರಿಗಳು ದನದ ಕೊಟ್ಟಿಗೆಯಲ್ಲಿ ಉರುಳಿಹೋದವು. ಅವಳ ಮೊದಲ ಗಂಡು ಶಿಶು ಜನಿಸಿದ ನಂತರದ ದಿನಗಳಲ್ಲಿ ಅವಳ ಪತಿಯ ಖೋಲಿಗೆ ಮತ್ತೋರ್ವ ಹೆಣ್ಣು ಅಡಿ ಇಟ್ಟಿದ್ದನ್ನು ಕಣ್ಣಾರೆ ಕಂಡಳು. ಮತ್ತೊಂದು ಮಗು ಹೆರಿಗೆಯಾದ ಮೇಲೂ ಅದೇ ಹೆಣ್ಣು ಕಂಡಳು. ಅವಳ ಗಾಯಗಳು ಇನ್ನೂ ಹಸಿಯಾಗಿಯೇ ಇದ್ದು, ನೋವು ಕೂಡ ಹಾಗೇ ಇತ್ತು. ಕತ್ತಲೆಯಲ್ಲಿ ಸರಸರ ಹೆಜ್ಜೆ ಹಾಕುತ್ತ ಒಳ ಬಂದು ತನ್ನ ಬೆನ್ನ ಹಿಂದೆ ಚಿಲಕ ಹಾಕುತ್ತಿದ್ದ ಆಕೆ ಪುನಃ ತುಸು ಸಮಯದ ಬಳಿಕ ಹೊರಬಂದು ಕತ್ತಲೆಯಲ್ಲಿ ಮರೆಯಾಗುತ್ತಿದ್ದಳು. ಅಂತಹ ರಾತ್ರಿಗಳಲ್ಲಿ ಶಾಂತಳ ಗಂಡ ಪತ್ನಿಯನ್ನು ಮನೆಯಿಂದ ಹೊರದಬ್ಬುತ್ತಿದ್ದ. ಮಗನನ್ನು ಜೊತೆಗಿಟ್ಟುಕೊಂಡು ದನದ ಕೊಟ್ಟಿಗೆಯಲ್ಲಿ ರಾತ್ರಿ ಕಳೆಯುತ್ತಿದ್ದಳು, ಜಾನುವಾರುಗಳ ಉಸಿರೊಂದಿಗೆ ನೆಮ್ಮದಿ ಕಾಣುತ್ತಿದ್ದಳು. ಈ ರಾತ್ರಿ ದನಗಳು ನನ್ನನ್ನು ಒದ್ದು ಸಾಯಿಸಿದರೆ ಒಳ್ಳೆಯದೇ ಈ ಗಂಡನೆಂಬ ಮೃಗದ ಬಳಿಗೆ ಮತ್ತೆ ಮರಳುವುದಕ್ಕಿಂತ ಎಂದೆಲ್ಲ ಯೋಚಿಸಿದ್ದಳು ಅವಳು ಒಂದೆರಡು ಸಲ.

ಆದರೆ ಈ ತೆರನ ಆಲೋಚನೆಗಳೆಲ್ಲ ಬಂದದ್ದು ಅವಳ ಮದುವೆಯ ಪ್ರಾರಂಭದ ಕೆಲ ವರುಷಗಳಲ್ಲಿ ಮಾತ್ರ. ಆಮೇಲೆ ಅವಳು ದಿನನಿತ್ಯದ ಈ ರೋಸಿಗೆ ಹೊಂದಿಕೊಂಡು ಬಿಟ್ಟಿದ್ದಳು. ಇದೇ ತನ್ನ ಜೀವನ ಅಂತ ಅವಳಿಗೆ ನಿಶ್ಚಿತವಾಯಿತು, ಹೀಗಾಗಿ ಬಳಿಕ ಯೋಚಿಸುವುದನ್ನೂ ಬಿಟ್ಟುಬಿಟ್ಟಳು. ಪತಿಯ ಮಂಚದ ಮೇಲಿನ ಯಮಯಾತನೆ ಅವಳ ಮನಸನ್ನು ಮರಗಟ್ಟಿಸಿಬಿಟ್ಟಿತ್ತು, ಸಂವೇದನೆ ಮರೆಯಾಗಿತ್ತು. ಹೀಗಾಗಿ ಅವಳಿನ್ನೂ ಯಾವುದಕ್ಕೂ ಅಂಜದ, ಹೇಸದ ವ್ಯಕ್ತಿಯಾಗಿ ಉಳಿದುಬಿಟ್ಟಿದ್ದಳು. ಅವಳ ಪತಿ ಕೋಪದಿಂದ ಕೃದ್ಧನಾಗಿ, ಅನ್ನದ ಮಡಿಕೆಯನ್ನು ಕಾಲಿನಿಂದ ಒದ್ದರೂ ಅಥವಾ ದನಗಳನ್ನು ಕಟ್ಟುವ ವರ್ಜಿ ಹಗ್ಗದಿಂದ ವರಾಂಡದ ಕಂಬಕ್ಕೆ ಕಟ್ಟಿ ಬಾರಿಸಿದರೂ ಭಯವೆಂಬುದು ಇರಲಿಲ್ಲ. ಅವಳ ಸಂಪದ್ಭರಿತ ಬಸಿರು ಅವನಿಗೆ ಮಕ್ಕಳ ಫಲ ನೀಡಿತು, ಅವಳೂ ಹೆರಿಗೆಗಳ ಮೂಲಕ ಚೈತನ್ಯ ಕಂಡುಕೊಂಡಳು. ಅಂತೆಯೇ ತನ್ನ ಶಿಶುಗಳ ಸಾವು ತಂದ ನೋವಿನ ಮೂಲಕವೂ, ಗರ್ಭಸ್ಥ ಶಿಶುಗಳ ಭಾರದಿಂದಲೂ ಅವಳ ದೇಹ ಭಾರವಾಯಿತು, ಮೊಲೆಯುಡಿಸುತ್ತಾ ಅಥವಾ ಗರ್ಭದಲ್ಲಿ ಬೆಳೆವ ಅಜಾತ ಮಗುವಿನ ಭಾರದಿಂದ ದೇಹ ಇನ್ನೂ ವಜ್ಜೆ ಎನಿಸಿತ್ತು. ಅನ್ನ ಬೇಯಿಸುವಾಗ, ಬಸಿಯುವಾಗ, ದನದ ಕೊಟ್ಟಿಗೆ ಸ್ವಚ್ಛ ಮಾಡುವಾಗ, ತೊಡೆ ಹಾಗೂ ವಪೆ ನೋವಿನಿಂದ ಸೆಟೆದು ನಿಂತವು.

ಇಪ್ಪತ್ತೈದು ವಸಂತಗಳನ್ನು ಕಳೆಯುವುದರೊಳಗೆ ಶಾಂತಬಾಲ ಜೀವಮಾನ ಪೂರೈಸಿದಂತೆ ಕಂಡುಬಂದಳು. ಈ ವೇಳೆಗೆ ತನ್ನ ನೆರೆಹೊರೆಯವರೊಂದಿಗೆ ಒಂದೆರಡು ಮಾತುಕತೆಗಳನ್ನು ಆಡಿದ್ದಳಾದರೂ, ಅದನ್ನು ಅವರೊಂದಿಗೆ ಮುಂದುವರಿಸಿಕೊಂಡು ಹೋಗಲು ಅವಳಿಗೆ ಪುರಸೊತ್ತು ಅಷ್ಟಾಗಿ ಇರಲಿಲ್ಲ. ಈಗವಳು ನೀರು ತರಲೂ ಕೂಡ ಹೋಗುತ್ತಿರಲಿಲ್ಲ. ಅವಳ ಜೇಷ್ಠ ಪುತ್ರಿ ಜಾಮಿನಿ ಈಗ ಅದರ ಹೊಣೆ ಹೊತ್ತಿದ್ದಳು. ಅಪರೂಪಕ್ಕೊಂಬಂತೆ ಹರಟೆ ಹೊಡೆಯಲು ಒಬ್ಬಿಬ್ಬರು ಅವಳ ಬಳಿ ಬರುತ್ತಿದ್ದರು. ಆಗಷ್ಟೇ ಅವ ಮುಕ್ತವಾಗಿ ಬಾಯಿ ತೆರೆಯುತ್ತಿದ್ದದ್ದು. ರಾತ್ರಿಯ ಕತ್ತಲೆಯಲ್ಲಿ ಗುಟ್ಟಾಗಿ ಮನೆಯೊಳಹೊಕ್ಕು ಹರಿಧನ್ ಖೋಲಿಯೊಳಗೆ ಅಡಿ ಇಡುತ್ತಿದ್ದ ರೋಹಿಣಿಯ ಆ ಹಿಂದಿನ ದಿನಗಳು ಇಂದು ಗತಕಾಲಕ್ಕೆ ಸರಿದಿದ್ದವು. ರೋಹಿಣಿ ಈಗ ಹಗಲಿನಲ್ಲಿಯೇ ಅವಳ ಮನೆಗೆ ಬರಲಾರಂಭಿಸಿದಳು. ಈಗವಳು ಹರಿಧನ್ ಮನೆಯಲ್ಲಿ ಇಲ್ಲದಿರುವಾಗಲೂ ಬರಲಾರಂಭಿಸಿದಳು. ಶಾಂತಳ ಜೊತೆ ತನ್ನ ದುಃಖ ದುಮ್ಮಾನಗಳನ್ನು ಹಂಚಿಕೊಳ್ಳಲು ಪ್ರಾರಂಭಿಸಿದಳು.

ರೋಹಿಣಿಗೆ ಕುಟುಂಬವ್ಯಾವುದೂ ಇರಲಿಲ್ಲ. ತನಗೆ ಮದುವೆ ಎಂದು ಆಯಿತೆಂದು ಸಹ ಅರಿಯದ ಮುಗ್ಧೆ ಅವಳು. ಅವಳ ಪ್ರಾಯಸ್ಥ ಪತಿ ಹಾವು ಕಡಿತದಿಂದ ಸತ್ತಾಗ ಅವಳ ವಯಸ್ಸು ಹದಿನೈದು. ಗಂಡ ಸತ್ತ ನಂತರವೂ ಪತಿಯ ಮನೆಯಲ್ಲೇ ಉಳಿದಳು. ಇಡೀ ದಿನ ಹಗಲು ಹೊಲಗದ್ದೆಯಲ್ಲಿ ದುಡಿದು ರಾತ್ರಿ ಮರದ ಕೊರಡಿನಂತೆ ಬಿದ್ದಿರುತ್ತಿದ್ದಳು. ಆದರೆ ಒಂದು ರಾತ್ರಿ, ಅವಳಿಗಾಗ ಹದಿನಾರರ ವಯಸ್ಸು, ಅವಳ ಹಿರಿಯ ಮೈದುನ ಅವಳು ರಾತ್ರಿಯ ಸರಿಹೊತ್ತಿನಲ್ಲಿ ಮೂತ್ರವಿಸರ್ಜನೆಗೆಂದು ಎದ್ದಾಗ ಹೊಂಚು ಹಾಕಿ ಕುಳಿತಿದ್ದುದನ್ನು ಕಂಡಳು. ಆತ ಕೊಟ್ಟಿಗೆಯ ಗೋಡೆಗೆ ಅವಳನ್ನು ಒತ್ತರಿಸಿ ನಿಲ್ಲಿಸಿ, "ನಿನ್ನ ಅನುಪಮ ಸೌಂದರ್ಯಕ್ಕೆ ನಾನು ಮಾರುಹೋಗಿರುವೆ. ನಿನ್ನ ಮೇಲಿಂದ ಅರೆಕ್ಷಣವೂ ನನ್ ಕಣ್ ಕೀಳಲಾಗುತ್ತಿಲ್ಲ" ಎಂದು ಗೋಗರೆದ. ಅಲ್ಲದೆ, ಈ ವಿಷಯ ಹೊರಗೆ ಬಾಯಿ ಬಿಟ್ಟರೆ ಮನೆಯಿಂದ ಹೊರದಬ್ಬುವೆನೆಂದೆಲ್ಲ ಬೆದರಿಸಿದ. ರೋಹಿಣಿ ಭಯವಿಹ್ವಲಳಾದಳು. ಆದರೆ ಅವನ ಮುನ್ನಡೆಯನ್ನು ತಿರಸ್ಕರಿಸದಾದಳು. ಅವಳಲ್ಲೂ ಆಸೆ ಅಂಕುರಿಸಿತ್ತು. ಈ ಕಳ್ಳಾಟ ಹಲವು ದಿನಗಳವರೆಗೆ ಮುಂದುವರಿಯಿತು. ಅತ್ತೆ ನಿದ್ರೆಗೆ ಜಾರಿದ ಒಡನೇ ಅವಳು ಪ್ರತಿ ರಾತ್ರಿ ಜಾರಲಾರಂಭಿಸಿದಳು. ಆದರೆ ಯಾವಾಗ ಗರ್ಭಿಣಿ ಆದಳೋ ಆಗ ಮೈದುನ ಅವಳನ್ನು ನಿರ್ದಾಕ್ಷಿಣ್ಯವಾಗಿ ಮನೆಯಿಂದ ಹೊರದಬ್ಬಿದ. ಅವಳಿಗೆ ದಾರಿ ತೋಚದಾಯಿತು. ಅನ್ಯಮಾರ್ಗವಿಲ್ಲದೆ ಅತ್ತೆ ಹಾಗೂ ಮೈದುನನ

ಕಾಲಿಗೆ ಬಿದ್ದಳು. ಅವನೀಗ, "ಹೇ !! ಸೂಳೆ, ತೊಲಗಾಚೆ ಮನೆಯಿಂದ. ಬೀದೀಲಿ ಬಿದ್ದು ಸಾಯಿ" ಎಂದು ಬಯ್ಯುತ್ತಾ ಕಾಲಿನಿಂದ ಒದ್ದ ಬುಸುಗುಡುತ್ತಾ. "ನಿನ್ನಿಂದಾಗಿ ನಮ್ಮ ಮನೆತನದ ಮರ್ಯಾದೆ ಬೀದಿ ಪಾಲಾಯ್ತು" ಎಂದ. ಇಷ್ಟೆಲ್ಲ ರಾದ್ಧಾಂತವಾದರೂ ಅಂತೂ ಇಂತೂ ಅತ್ತೆ ಸೊಸೆಯನ್ನು ಅವರ ಜಮೀನಿನ ಒಂದು ಮೂಲೆಯಲ್ಲಿ ಗುಡಿಸಲು ಹಾಕಿಕೊಂಡು ಇರಲು ಅನುಮತಿ ಇತ್ತಳು ತನ್ನ ಮನೆಯಲ್ಲಿ ಇರಗೊಡದೆ ಹೋದರೂ. ಅವಳ ಅತ್ತೆಗೆ ಆ ಜಮೀನು ಅವಳ ತಂದೆಯಿಂದ ಬಳುವಳಿಯಾಗಿ ಬಂದಿತ್ತು. ರೋಹಿಣಿ ನಾಯಿಂದನ ಪತ್ನಿಯ ಸಹಾಯದಿಂದ ಮೈಯಿಳಿಸಿಕೊಂಡು ಗುಡಿಸಲಿಗೆ ಬರಿದಾಗ್ಗೆ ಅವಳ ಅತ್ತೆ ಸೊಸೆಗೆ ಒಂದು ಗಡಿಗೆ ನೀರನ್ನು ಕಳುಹಿಸಿಕೊಟ್ಟಳು. ರೋಹಿಣಿಗೆ ಮೈಯಲ್ಲಿ ಕಸುವು ಕೂಡಿದ ಮೇಲೆ ಹೊಟ್ಟೆಪಾಡಿಗೆ ದುಡಿಮೆಗೆ ಇಳಿದಳು. ಈಗ ಅವಳು ತನ್ನ ಪತಿಯ ಮನೆಯ ಹೊಸ್ತಿಲು ತುಳಿಯಲಿಲ್ಲ. ಆದರೆ ಮನೆಯ ಹೊರಗಡೆಯ ಎಲ್ಲ ಕೆಲಸಗಳನ್ನು, ಅಂದರೆ ಹುಲ್ಲು ಕೊಯ್ಯುವುದು, ಕೊಟ್ಟಿಗೆ ಕಸ ತೆಗೆಯುವುದು, ನೀರು ತುಂಬುವುದು, ಬಟ್ಟೆ ಬರೆ ಒಗೆಯುವುದು, ಇತ್ಯಾದಿಗಳನ್ನು ತಪ್ಪದೆ ಮಾಡುತ್ತಿದ್ದಳು. ಇಷ್ಟೆಲ್ಲ ಆದರೂ ಅವಳ ತಲೆಯ ಮೇಲಿನ ಸೂರು ಕಿತ್ತುಕೊಂಡ ಮೈದುನ, ತಾನು ಗೃಹಸ್ಥನಾಗುವ ಮುನ್ನ, ತನ್ನ ತಾಯಿಯ ಸಾವಿನ ಮುನ್ನ ರೋಹಿಣಿಯನ್ನು ಬೀದಿಗೆ ತಳ್ಳಿದ.

ಈಗ ಹಳ್ಳಿ ಮಂದಿಯ ಆಸೆ-ಆಕಾಂಕ್ಷೆಗಳಿಗೆಲ್ಲ ರೋಹಿಣಿ ಪ್ರತಿಕ್ರಿಯಿಸಿದಳು. ಅವಳಿಗೆ ಕೈತುಂಬ ಕೆಲಸವಿತ್ತು. ಗರ್ಭಿಣಿಯರಿಗೆ, ಹಸುಗೂಸುಗಳಿಗೆ, ಅವಳ ಕೈಗುಣ ಹಾರೈಕೆಯದಾಗಿತ್ತು. ಕರೆದಲ್ಲಿಗೆ ಹಾಜರಾಗುತ್ತಿದ್ದ ಅವಳು ಹಳ್ಳಿಯ ಗರ್ಭಿಣಿಯರು ಹಸು ಕಂದಮ್ಮಗಳ ಶ್ರೀರಕ್ಷೆ ಎನಿಸಿಕೊಂಡಳು. ಅಲ್ಲದೆ, ಅವಳಿಗೆ ಬೇರೆ ಕೆಲಸಕಾರ್ಯಗಳಲ್ಲೂ ಆಸಕ್ತಿ ಇತ್ತು. ಹೀಗಾಗಿ ಪ್ರತಿರಾತ್ರಿ ಕತ್ತಲಿನಲ್ಲಿ ಕರಗಿಹೋಗಿಬಿಡುತ್ತಿದ್ದಳು ತನ್ನಲ್ಲಿನ ಕಾಮನೆಗಳನ್ನು ತಣಿಸಿಕೊಳ್ಳಲು. ಜಗತ್ತು ಅವಳನ್ನು ಕಡೆಗಣಿಸಿತ್ತು. ಹೀಗಾಗಿ ಜಗತ್ತಿಗೆ ಅವಳೇಕೆ ಕ್ಯಾರೆ ಅನ್ನಬೇಕು ?

ಆದರೆ ಹರಿಧನ್ ಕ್ಯೂಲನ ಪ್ರಾಯದ ಪತ್ನಿಯ ಮೇಲೆ ಮಮತೆ ಉಕ್ಕಿತು. ತನ್ನ ಅಜಾತ ಮಗು ಬಾಳಿ ಬದುಕಿದ್ದರೆ ಶಾಂತಳಂತೆಯೇ ಇರುತ್ತಿತ್ತೆಂದು ನೆನಸಿಕೊಂಡು ತನ್ಮಯಳಾದಳು. ತಾನು ಶಾಂತಳ ವಯಸ್ಸಿನವರೆಗೆ ಬದುಕಿರುವೆನೆ ಎಂದೆಲ್ಲ ಯೋಚಿಸಲಾರಂಭಿಸಿದಳು. ಶಾಂತಳ ಮುಖ ದಿಟ್ಟಿಸುತ್ತಿದ್ದಂತೆ, ಅವಳ ದಪ್ಪ ತುರುಬಿನ ಗಂಟನ್ನು, ಎದ್ದುಕಾಣುವ ಅವಳ ಕೆನ್ನೆಯ ಮೂಳೆಗಳನ್ನು ಅವಳ ಅಗಲವಾದ ಕಣ್ಣುಗಳ ದಿವ್ಯ ಸೌಂದರ್ಯವನ್ನು ವೀಕ್ಷಿಸುತ್ತಿದ್ದಂತೆ ತನ್ನ ಗಂಟಲೊಳಗೆ ಗಂಟೊಂದು ಸಿಕ್ಕಿಹಾಕಿಕೊಂಡಂತೆನಿಸಿತು. ಹರಿಧನ್‌ನ ಪ್ರತಿರಾತ್ರಿಯ ಕಟ್ಟಪ್ಪಣೆಯನ್ನು ಈ ಪ್ರಾಯದ ಅಬಲೆ ಹೇಗೆ ನಿಭಾಯಿಸುವಳೆಂದು ಚಿಂತಿಸಿ ಹಿಮ್ಮೆಟ್ಟಿದಳು. ಇದನ್ನೇ ಜನ ಕರ್ತವ್ಯವೆಂದು ಕರೆದಿದ್ದು, ಇದೇ ಆದರೆ ಮುಂದೆ ಸ್ತ್ರೀತ್ವದ ಶ್ರೇಷ್ಠ ಸಾರ್ಥಕತೆ ಎಂದೆಲ್ಲ ಕರೆದದ್ದು. ಆದರೆ ಮುಂದೆ ಮಂದಿಯ ಈ ತರಹದ ಧೋರಣೆಗಳಿಗೆಲ್ಲ ರೋಹಿಣಿ ಮಣೆ ಹಾಕಲಿಲ್ಲ.

ಆದರೆ ಶಾಂತ ಎಂದೂ ತನ್ನ ಬಗ್ಗೆ ಯೋಚಿಸಿದವಳಲ್ಲ. ಈಗವಳು ತನ್ನ ಹೆಣ್ಮಕ್ಕಳ ಬಗ್ಗೆ ಚಿಂತೆಗೀಡಾದಳು. ಅವಳಿಗೆ ಮಗನ ಬಗ್ಗೆ ತಕರಾರು ಏನೂ ಇರಲಿಲ್ಲ. ಅವನು ಈ ಪ್ರಪಂಚದಲ್ಲಿ ಬದುಕುವ ದಾರಿ ಕಂಡುಕೊಳ್ಳುವನೆಂದು ಅವಳಿಗೆ ಗೊತ್ತಿತ್ತು. ಅವರಪ್ಪ, ಆ ಕಡೆ ಗಮನ ಹರಿಸಲಿದ್ದ ಹಾಗೂ ಅವನಿಗೆ ದಾರಿಯೂ ಇತ್ತು. ಆದರೆ ಜಾಮಿನಿ ಮತ್ತು ಕಾಮಿನಿಯರ ಬಗೆಗೆ ? ಅವರ ಮದುವೆ ಆಗಬೇಕು. ದಿಟ, ಎಲ್ಲಿ ? ಇಲ್ಲಿಂದ ಎಷ್ಟು ದೂರಕ್ಕೆ ? ಅವರು ಕೂಡ ಅವರ ಅಮ್ಮನಂತೆಯೇ ತವರುಮನೆಯಿಂದ ಬಹುದೂರಕ್ಕೆ ಹೋಗಬೇಕೆ ? ಈವರೆಗೆ, ಇಪ್ಪತ್ತನಾಲ್ಕು ವರುಷಗಳಲ್ಲಿ, ಅವಳು ತವರುಮನೆ ಮುಖ ನೋಡಿದ್ದು ಒಂದೇ ಒಂದು ಸಲ, ಅದೂ ಅವಳ ಅಪ್ಪ ಸತ್ತಾಗ ! ಅದೂ ಕೇವಲ ಎರಡು ದಿನ ಮಾತ್ರ. ಶಾಂತ ಅಪ್ಪನ ಸಂತಾಪ ಸೂಚನೆಯನ್ನು ಬೇಗ ಮುಗಿಸದಿದ್ದರೆ ಯಾರು ಅವಳ ಮಕ್ಕಳಿಗೆ, ಗಂಡನಿಗೆ, ಬೇಯಿಸಿ ಹಾಕುತ್ತಾರೆ ? ಅವಳ ಗಂಡನ ಇಷ್ಟಾನಿಷ್ಟಗಳನ್ನು ಯಾರು ಪೂರೈಸುತ್ತಾರೆ ? ಆದರೆ ಶಾಂತ ತನ್ನ ಹೆಣ್ಮಕ್ಕಳನ್ನು ಶಾಲೆಗೆ ಹಾಕಲು ನಿರ್ಧರಿಸಿ ಮನೆದೇವರ ಹುಂಡಿಯಲ್ಲಿ ಕಾಸು ಕೂಡಿಡುತ್ತಾ ಬಂದಳು. ಕೊನೇ ಪಕ್ಷ ತನ್ನ ಹೆಣ್ಮಕ್ಕಳು ತನ್ನ ಅಮ್ಮನಿಗಾದರೂ ಪತ್ರ ಬರೆಯುವಂತಾದರೆ ಸಾಕೆಂದು ಆಶಿಸಿದಳು. ಈಗ ಅವಳೂರಲ್ಲಿ ಒಂದು ಪ್ರೈಮರಿ ಶಾಲೆ ಇತ್ತು, ಇಲ್ಲಿಗೆ ನಗರದಿಂದ ಓರ್ವ ಶಿಕ್ಷಕ ಬಸ್ಸಿನಲ್ಲಿ ಬಂದು ಹೋಗುತ್ತಿದ್ದ ನಿತ್ಯ. ಈಗವಳು ಈ ವಿಷಯವನ್ನು ಅವರ ಅಪ್ಪನಿಂದ ಗುಟ್ಟಾಗಿರಿಸಲು ಜಾಗ್ರತಳಾಗಿರಬೇಕಿತ್ತು, ಅವನಿಗೆ ಅವರು






# ಯಾಕೆ ಬೇಕೋ ನಮಗೆ

ಯಾಕೆ ಬೇಕೋ ನಮಗೆ ಆ ದೇವರು
ಯಾಕೆ ಬೇಕೋ ಮನುಜರಿಗೆ ಆ ದೇವರು
ನೀಲಿ ಬಾನಲಿ ತೇಲಿ ತೇಲಿ ಹಾರಾಡುವ ಆ ಹಕ್ಕಿಗೆ
ಯಾವ ಗುಡಿಯೂ ಇಲ್ಲ ಯಾವ ದೇವರೂ ಇಲ್ಲ
ಸಾಗರದಾಳದಲಿ ಮುಳುಗಿ ಮುಳುಗಿ ಈಜಾಡುವ ಆ ಮೀನಿಗೆ
ಯಾವ ಗುಡಿಯೂ ಇಲ್ಲ ಯಾವ ದೇವರೂ ಇಲ್ಲ
ಯಾಕೆ ಬೇಕೋ ನಮಗೆ ಆ ದೇವರು

ಪೂಜೆಯೂ ಇಲ್ಲ ಪುರೋಹಿತರಿಲ್ಲ
ಮಂದಿರ ಮಸೀದಿ ಚರ್ಚುಗಳಿಲ್ಲ
ಬೇವು ಮಾವು ಮಲ್ಲಿಗೆಗೆ
ತೇಗ ತುಳಸಿ ಸಂಪಿಗೆಗೆ
ಯಾಕೆ ಬೇಕೋ ನಮಗೆ ಆ ದೇವರು
ಕೋಟಿ ಕೋಟಿ ವರುಷಗಳಿಂದ
ಅರಳಿ ನಿಂತಿಹ ಜೀವ ಸಂಕುಲ
ಬಾಳಿ ಬೆಳೆದಿದೆ ನೆಮ್ಮದಿಯಿಂದ
ದೇವರಿಲ್ಲದೆ ದೇವರ ಹಂಗೂ ಇಲ್ಲದೆ
ಯಾಕೆ ಬೇಕೋ ನಮಗೆ ಆ ದೇವರು

ಸುತ್ತ ಒಮ್ಮೆ ನೋಡಿದರೂ
ಸಾಕು ಎರಡೂ ಕಣ್ಣು ತೆರೆದು
ಎಷ್ಟು ನಿಚ್ಚಳ ಎಷ್ಟು ಸುಂದರ
ದೇವರಿಲ್ಲದ ಈ ಸತ್ಯ
ಯಾಕೆ ಬೇಕೋ ನಮಗೆ ಆ ದೇವರು
ಯಾಕೆ ಬೇಕೋ ಮನುಜರಿಗೆ ಆ ದೇವರು

**ಸಂಕುಲಜೀವ (ಸಂಜೀವ ಕುಲಕರ್ಣಿ)**
'ನಗೆ ಮಲ್ಲಿಗೆ', ನಂ. ೨೦/೧, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ – ೫೮೦ ೦೦೭

ಶಾಲೆಗೆ ಹೋಗುವುದು ಇಷ್ಟವಿರಲಿಲ್ಲ, ಕೊನೇ ಪಕ್ಷ ಹೊಸದರಲ್ಲಾದರೂ, ಬಳಿಕ ಮಕ್ಕಳು ಶಾಲೆಗೆ ಹೋಗುವ ವಿಷಯ ಗೊತ್ತಾದರೂ ಪ್ರಾಯಶಃ ಅವನು ಅವರನ್ನು ಶಾಲೆ ಬಿಡಿಸಲಾರನೆಂದುಕೊಂಡಳು.

ಒಂದು ದಿನ ದಿಢೀರನೆ ಹರಿಧನ್ ಶಾಂತಳಿಗಿಂತಲೂ ವಯಸ್ಸಾದವನೋರ್ವನೊಡಗೂಡಿ ಮನೆಗೆ ಬಂದ. ಅವರೀರ್ವರೂ ಅಂಕಣದಲ್ಲಿ ಕೂತು ಮಾತುಕತೆಯಲ್ಲಿ ತೊಡಗಿದರು. ಹರಿಧನ್ ಅವನನ್ನು ಪ್ರಸನ್ನಗೊಳಿಸಲು ತುಂಬ ಆದರಣೆ ತೋರಿದ. ಅತಿಥಿಗೆ ತಿನ್ನಲು ಏನಾದರೂ ಕೊಡು ಎಂದು ಶಾಂತಳಿಗೆ ಹೇಳಿದ. ಅತಿಥಿ ತಿಂಡಿ ತಿಂದು ಹೊರಹೋದ ಮೇಲೆ ಕಳೆ ಹೊತ್ತ ಮೊಗದೊಂದಿಗೆ ಒಳಬಂದ ಹರಿಧನ್, "ಜಾಮಿನಿಯ ಮದುವೆ ಮಾಡಲು ನಿರ್ಧರಿಸಿ ಅವಳಿಗೊಂದು ವರ ಗೊತ್ತುಮಾಡಿರುವೆ" ಎಂದು ಹೇಳಿದ.

> ## ನಾನು
>
> ನನಗೀಗ
> ಅರಿವಾಗಿದೆ
> ವಯಸ್ಸಾದಂತೆಲ್ಲಾ
> 'ನಾನು'
> ಬೆಳೆದು
> ಸಣ್ಣವಳಾಗಿದ್ದೇನೆ.
>
> **ಗೀತಾಶಾಸ್ತ್ರಿ**
> ಬೆಂಗಳೂರು – ೨೮

"ಏನು ?"

ತನ್ನ ಮೆದುಳಿನೊಳಗಿನ ಪ್ರಪಂಚ ತತ್ತರಿಸಿ ಅದುರಿದಂತಾಯಿತು, ರಕ್ತ ಕಣ್ಣುಗಳಿಗೆ ಹರಿದಂತಾಯಿತು ಗಂಡನ ಮಾತು ಕೇಳಿ. ಜಾಮಿನಿಗೆ ಇನ್ನೂ ಹನ್ನೊಂದು ಸಹ ತುಂಬಿರಲಿಲ್ಲ.

"ಸಾಕಷ್ಟು ಹೊಲ–ಮನೆ ಇದೆ ಗೊತ್ತಾ. ಯಾವ ಕುಟುಂಬವೂ ಅಜ್ಜಿಯರಿಗೆಂದು ಉಳಿತಾಯ ಮಾಡೊಲ್ಲ. ಅವನು ಬ್ರಹ್ಮಚಾರಿಯಾಗಿರಲು ನಿಶ್ಚಯಿಸಿದ್ದ. ಆದರೆ ನಾನು ಮಕ್ಕಳಿಲ್ಲದೆ ಇದ್ದಮೇಲೆ ಅಷ್ಟೊಂದು ಆಸ್ತಿ ಇಟ್ಟುಕೊಂಡು ಉಪಯೋಗವಾದರೂ ಏನು ? ವಯಸ್ಸಾದ ಮೇಲೆ ಅದೆಲ್ಲ ನಾಯಿಪಾಲಾಗುತ್ತದೆ ಎಂದ ಮೇಲೆ, ಅವನು ನಿನ್ನನ್ನು ನೋಡಿದ ಮೇಲೆ, ನಮ್ಮ ಜಾಮಿನಿ ಸಹ ನಿನ್ನಂತೆಯೇ ರೂಪವತಿ ಎಂದು ಭಾವಿಸಿ ಈ ಮದುವೆಗೆ ಒಪ್ಪಿದ್ದಾನೆ..." ಎಂದೆಲ್ಲಾ ವರದಿ ಒಪ್ಪಿಸಿದ.

ಜಾಮಿನಿ ಅವನ ಪತ್ನಿಯಾಗುತ್ತಾಳೆ ಎಂದು, ಅವಳು ಅವನಿಗೆ ಮಕ್ಕಳನ್ನು ಹಡೆದು ಅವನ ಆಸ್ತಿಪಾಸ್ತಿಗೆ ವಾರಸುದಾರಳಾಗುತ್ತಾಳೆಂದು ಹರಿಧನ್ ಆಗಲೇ ನಿರ್ಧರಿಸಿಯಾಗಿತ್ತು ! ಆಮೇಲೆ 'ಜಾಮಿನಿ ಇನ್ನೂ ಮಗು...' ಶಾಂತಳ ಪತಿ ಈ ವಿಷಯ ಕುರಿತು ಮಾತು ಆಡುತ್ತಲೇ ಇದ್ದ, ಆದರೆ ಅವನ ಮಾತೊಂದನ್ನು ಶಾಂತ ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

"ಈ ಮದುವೆ ಸಾಧ್ಯವಿಲ್ಲ." ಅವಳ ದನಿಯಲ್ಲಿ ಸ್ಪಷ್ಟತೆ ಇತ್ತು. ಚಕಿತನಾಗಿ ಹರಿಧನ್ ಹೆಂಡತಿ ಮುಖ ನೋಡಿದ. ಅವರ ವೈವಾಹಿಕ ಜೀವನದ ಇಷ್ಟು ವರ್ಷಗಳಲ್ಲಿ ಅವನೆಂದೂ ಅವಳು ಇಷ್ಟು ಕಡ್ಡಿ ತುಂಡಾದಂತೆ ಮಾತನಾಡಿದ್ದನ್ನು ಕಂಡಿರಲಿಲ್ಲ.

"ಏಕೆ ? ಏನು ಕೊರತೆ ಕಂಡೆ ಅವನಲ್ಲಿ ?"

"ನಮ್ಮ ಜಾಮಿನಿ ಇನ್ನೂ ಎಳೆಬಾಲೆ. ಮದುವೆಗೆ ಅರ್ಹಳಲ್ಲದ ಹೆಣ್ಣು. ಜಾಮಿನಿ–ಕಾಮಿನಿ ಇಬ್ಬರನ್ನು ನಾನು ಶಾಲೆಗೆ ಕಳುಹಿಸುವೆ, ವಿದ್ಯೆ ಕಲಿಸುವೆ."

ಇಷ್ಟು ಮಾತುಗಳನ್ನಾಲೀ, ಹೀಗೆಲ್ಲ ಮಾತನಾಡುತ್ತೇನೆಂದಾಗಲಿ ಅಥವಾ ಇದೇ ಮಾತುಗಳನ್ನು ಒಂದಾದ ಮೇಲೆ ಒಂದರಂತೆ ಈ ಪರಿ ಧೈರ್ಯವಹಿಸಿ, ಪತಿ ಎದುರು ನಿಂತು ಆಡುವೆನೆಂದಾಗಲೀ ಶಾಂತಳಿಗೆ ಅದುವರೆಗೂ ಅನಿಸಿರಲಿಲ್ಲ. ಹರಿಧನ್ ಅವಳ ಮುಖ ದಿಟ್ಟಿಸಿದ, ಕ್ಷಣ ಹೊತ್ತು, ಆಮೇಲೆ ಎದ್ದವನೇ ಸೀದಾ ದನದ ಕೊಟ್ಟಿಗೆ ಹೊಕ್ಕ. ಶಾಂತ ಈಗ ಮಲಗುವ ಕೊಠಡಿಯೊಳಗೆ ಹೋದಳು. ಕೊಠಡಿಯೊಳಗೆ ಬಂದ ಅವನು ಅವಳ ಬೆನ್ನ ಹಿಂದಿನಿಂದ ಜುಟ್ಟು ಹಿಡಿದು "ಓಹೋ ! ಹೀಗಾ...? ಶಾಲೆಗೆ ಸೇರಿಸ್ತೀಯಾ, ವಿದ್ಯೆ ಕಲಿಸ್ತೀಯಾ ? ಹೇ ಸೂಳೆ ! ನಿನ್ನ ನೀನು ಏನೆಂದು ತಿಳಿದಿರುವೆ, ನನಗೇ ಎದುರುತ್ತರ ಕೊಡುವಿಯಾ ? ಇಗೋ ತಗೋ... ಅದ್ಹೇಗೆ ಸ್ಕೂಲಿಗೆ ಕಳಿಸ್ತೀಯಾ ನಾನೂ ನೋಡುವೆ" ಎನ್ನುತ್ತಾ ಈಗಾಗಲೇ ಮಖಾಡೆ ಬಿದ್ದಿದ್ದ ಶಾಂತಳ ಮೈಮೇಲೆ ಬಾಸುಂಡೆಗಳೇಳುವಂತೆ ವರ್ಜಿ ಹಗ್ಗದಿಂದ ರಪರಪನೆ ಬಾರಿಸಿದ. ಹಗ್ಗ ಹಿಡಿದ ಅವನ ಕೈಗಳು ಸೋಲುವವರೆಗೂ ಎಡಬಿಡದೆ ಬಾರಿಸಿದ. ಬಳಿಕ ಹಗ್ಗ ಎಸೆದು ಕೊಠಡಿಯಿಂದ ಹೊರಬಂದವನು ಕ್ಷಣಹೊತ್ತು ಬಾಗಿಲಲ್ಲಿ ನಿಂತು ಪತ್ನಿಯನ್ನುದ್ದೇಶಿಸಿ,

"ಹೇ ! ಸೂಳೆ ! ಕೇಳಿಸಿಕೋ ಚೆನ್ನಾಗಿ, ನಾನೀಗ ಜಾಮಿನಿ ಒಬ್ಬಳನ್ನೇ ಅಲ್ಲ ಕಾಮಿನಿನೂ ಮದುವೆ ಮಾಡಿಕೊಡುವೆ. ಸ್ಕೂಲಿಗೆ ಸೇರಿಸುವ ನಿನ್ನ ಆಸೆ ಮರೆತುಬಿಡು ! ಕೇಳಿಸ್ತೇನೇ?" ಎಂದ.

ತದನಂತರ ಶಾಂತಳಿಗೆ ತನ್ನ ಮಂಡೆಯೊಳಗೆ ಇದು ಯಾವಾಗ ಹೊಕ್ಕಿತೆಂದು ನೆನಪಿಗೆ ಬರಲಿಲ್ಲ. ತಲೆಶೂಲೆ ಬಂದು ಎರಡು ಹೋಳಾದಂತೆನಿಸಿತು. ಆ ರಾತ್ರಿ ಕೊಡಲಿ ಕೈಗೆತ್ತಿಕೊಂಡಳು. ಅದು ಅವಳ ದಿನನಿತ್ಯದ ಸುಪರಿಚಿತ ಆಯುಧ. ಸೌದೆ ಸೀಳಲು ಬಳಸುತ್ತಿದ್ದ ಅದು ಹಲವು ವರುಷಗಳಿಂದ ಅವಳ ಒಡನಾಡಿ. ಈಗವಳು ಅದನ್ನು ಮೇಲೆತ್ತಿ ಒಂದೇ ಒಂದು ಏಟು, ಬಲವಾದ ಹೊಡೆತ, ಮಲಗಿದ್ದ ಗಂಡನ ತಲೆಯ ಮೇಲಿಂದ ಕೆಳಗಿಳಿದ ಅದು ಪುನಃ ಮತ್ತೊಂದು, ಅಷ್ಟೇ ಬಲವಾದ ಪೆಟ್ಟನ್ನು ಅವನ ಎದೆಯ ಮೇಲೆ ಬೀಸಿತು. ಈ ಕೃತ್ಯ, ಈ ಕರ್ತವ್ಯ, ಮುಗಿದ ಬಳಿಕವೇ ಅವಳ ಮಂಡೆಯಲ್ಲಿ ಭುಗಿಲೆದ್ದ ರೋಷಾವೇಷದ ಚಂಡಮಾರುತ ತಣ್ಣಗಾಗಿದ್ದು. ಶಾಂತ ಸೀದಾ ಕೊಳದೊಳಗೆ ಹೋಗಿ ಒಂದು ಮುಳುಗು ಹಾಕಿ ಹೊರಬಂದು ಬಟ್ಟೆ ಬದಲಿಸಿದಳು. ಹೊಸ ಸೀರೆ ಉಟ್ಟಳು. ಬಳಿಕ ನಿದ್ರೆಯಲ್ಲಿದ್ದ ಮಕ್ಕಳನ್ನು ಎಬ್ಬಿಸಿ, ದಿಗ್ಭ್ರಮೆಗೊಂಡ ಮಕ್ಕಳ ಮುಷ್ಟಿಯೊಳಕ್ಕೆ ತನ್ನ ಚಿನ್ನದ ಸರ–ಬಳೆಗಳನ್ನು ತುರುಕಿ, "ನಾನೆಲ್ಲೋ ಒಂದು ಕಡೆ ಹೋಗಿಬರುವೆ. ನೀವು ಜೊತೆಗೆ ಚೋಟು, ರೋಹಿಣಿ, ಮಾಷಿ ಮನೆಗೆ ಈಗಲೇ ಓಡಿ... ಓಡಿ, ಅವಳ ಕೈಗೆ ಈ ಒಡವೆಗಳನ್ನೆಲ್ಲ ಕೊಡಿ. ನಮ್ಮನ್ನು ಶಾಲೆಗೆ ಸೇರಿಸು ಅಂತ ಹೇಳಿ. ನಾನು ಹಿಂದಿರುಗಿ ಬರೋವರೆಗೂ ಅವಳ ಹತ್ತಿರಾನೇ ಇರಿ. ನಾನು ಬರೋವರ್ಗೂ... ಒಳ್ಳೆಯವರಾಗಿರಿ... ಹೂಂ..." ಎಂದ ಶಾಂತ ತನ್ನ ಹೊಟ್ಟೆಗೆ ಕೊಡಲಿ ಒತ್ತಿ ಹಿಡಿದು ಆ ಕಾರ್ಗತ್ತಲೆಯಲ್ಲಿ ಒಬ್ಬಳೇ ಹೊರಟಳು. ಹೀಗೆ ದಾರಿ ಸವೆಸಿದ ಅವಳು ಮರುದಿನ ಮಧ್ಯಾಹ್ನದ ಹೊತ್ತಿಗೆ ಏಳು ಮೈಲಿಗಳ ದೂರದ ದಾರಿ ಸವೆಸಿ ಪೊಲೀಸ್ ಠಾಣೆಗೆ ಬಂದು ತಲುಪಿದ್ದಳು. ಪೊಲೀಸ್ ಅಧಿಕಾರಿಯ ಟೇಬಲ್ ಮೇಲೆ ಕೊಡಲಿಯನ್ನು ಜಾಗ್ರತೆಯಿಂದ ಇಡುತ್ತಾ "ನೋಡಿ ಸೋಮಿ, ನನ್ನ ಪತಿಯನ್ನು ಇದರಿಂದ ಖೂನಿ ಮಾಡಿರುವೆ. ತಾವೀಗ ಏನು ಮಾಡಬೇಕೋ ಮಾಡಿ."

"ವಿಳಾಸ ?"

ತನ್ನ ಎದುರಿಗಿದ್ದ ವ್ಯಕ್ತಿಯನ್ನು ದಿಟ್ಟಿಸಿ ನೋಡಿದಳು. ಅವನು ತನ್ನ ಪಕ್ಕದಲ್ಲಿ ಕುಳಿತಿದ್ದ ಜೈಲರತ್ತ ಬೊಟ್ಟು ಮಾಡುತ್ತಾ "ಪೋರಾಪಾರಾ, ಮೋದಿನಿಪುರ್" ಎಂದ.

ರೋಹಿಣಿ ಗೆಳತಿಯನ್ನು ಭೇಟಿ ಮಾಡಲು ಒಂದು ದಿನ ನ್ಯಾಯಾಲಯಕ್ಕೆ ಬಂದವಳು, "ನೀನೇಕೆ ಆ ರಾತ್ರಿ ನನ್ನ ಮನೆಗೆ ಬರಲಿಲ್ಲ ? ಇಬ್ಬರೂ ಕೂಡಿ ಆ ಸೂಳೆಮಗನನ್ನು ಹೂತು ಹಾಕಿಬಿಡಬಹುದಿತ್ತು. ಯಾರಿಗೂ ಗೊತ್ತಾಗುತ್ತಿರಲಿಲ್ಲ" ಎಂದಳು ಮನ ಬಿಚ್ಚಿ ಅಳುತ್ತ. ಆದರೆ ಶಾಂತ "ಇಲ್ಲ, ಇಲ್ಲ, ನನ್ನಿಂದ ಸಾಧ್ಯವಿರಲಿಲ್ಲ. ಅದು ಪಾಪಾ ಅಲ್ವಾ ? ದೇವರ ಶಿಶು ಮನುಷ್ಯನನ್ನು ಕೊಲ್ಲುವುದು ? ನನಗೆ ತಕ್ಕನಾದ ಪ್ರಾಯಶ್ಚಿತ್ತ ಆಗಬೇಕು" ಎನ್ನುತ್ತ ತಲೆ ಆಡಿಸಿದಳು.

ಬಳಿಕ ಆಕೆ ಉಗುಳು ನುಂಗುತ್ತಾ "ದೀದಿ, ನನ್ನ ಮಕ್ಕಳ ಗತಿ..."

ಆದರೆ ರೋಹಿಣಿ ಪೊಲೀಸರಿಗೆ ಐದು ರೂ.ಗಳ ಲಂಚ ಕೊಟ್ಟು ಖರೀದಿಸಿದ್ದ ಸಮಯ ಮುಗಿಯುತ್ತ ಬಂದಿತ್ತು. "ಬಾ, ಬಾ ಮೇಲಧಿಕಾರಿಗಳು ನೋಡ್ತಾರೆ..." ಎಂದು ಪೇದೆ ಒತ್ತಾಯಿಸಿದ.

"ಅವರ ಬಗ್ಗೆ ಚಿಂತೆಬಿಡು. ನಾನು ನೋಡಿಕೊಳ್ತೀನಿ ಚೆನ್ನಾಗಿ" ಎಂದ ಅವಳ ಮಾತಿನ ಧ್ವನಿ ಹಿಂದಿನಿಂದ ಅವಳ ಕಿವಿಯ ಮೇಲೆ ಬಿದ್ದಿತು.

ನಿಯಮಾವಳಿಗಳೆಲ್ಲ ಮುಗಿದ ಮೇಲೆ ಟೇಬಲ್ ಬಳಿ ಕುಳಿತಿದ್ದ ಜೈಲರ್ ಅವಳಿಗೆ "ನೋಡಮ್ಮ, ನಿನ್ನ ಗಂಡನ ಮೇಲೆ ಕೇಸಿನಲ್ಲಿ ನಿನಗೆ ಇಪ್ಪತ್ತು ವರುಷ ಶಿಕ್ಷೆ ಆಗಿದೆ. ಶಿಕ್ಷೆಯ ವಿರುದ್ಧ ಉಚ್ಚ ನ್ಯಾಯಾಲಯಕ್ಕೆ ಅಪೀಲು ಹೋಗಲು ಸರ್ಕಾರ ನಿನಗೆ ವಕೀಲರ ನೆರವು ನೀಡುತ್ತದೆ. ಅಪೀಲು ಹೋಗುವ ಇರಾದೆ ಇದ್ದರೆ ಹೇಳು" ಎಂದು ಹೇಳಿದ.

ಶಾಂತಳ ಪಕ್ಕ ನಿಂತಿದ್ದ ಶ್ವೇತಧಾರಿ ವ್ಯವಸ್ಥಾಪಕ "ಬಾ" ಎಂದದ್ದು ಕೇಳಿಸಿತು.

ಕೆಲವೇ ನಿಮಿಷಗಳ ಬಳಿಕ ಬೆಹ್ರಾಂಪುರ ಜೈಲಿನ ಸ್ತ್ರೀಯರ ವಾರ್ಡಿನ ಬಾಗಿಲು ಅವಳ ಹಿಂದೆ 'ದಡ್' ಎಂದು ಮುಚ್ಚಿದ ಶಬ್ದ ಕೇಳಿಸಿತು.

ಬಂಗಾಳಿ ಮೂಲ : **ಜೋಯಾ ಮಿತ್ರ, ಕನ್ನಡಕ್ಕೆ :** ಸೊಂದಲಗೆರೆ ಲಕ್ಷ್ಮೀಪತಿ

ನಂ. ೧೨೭೩, ೭ನೇ ಕ್ರಾಸ್, ಚಂದ್ರಾ ಬಡಾವಣೆ, ವಿಜಯನಗರ ಬೆಂಗಳೂರು – ೫೬೦ ೦೪೦



ಇತ್ತೀಚಿನ ಜನಗಣತಿಯ ಅಂಕಿ-ಅಂಶಗಳ ಪ್ರಕಾರ ಹೈ.ಕ. ಭಾಗದಲ್ಲಿ ಎಸ್.ಸಿ. ಮತ್ತು ಎಸ್.ಟಿ.ಗಳ ಪ್ರಮಾಣ ಶೇ. ೩೫.೦೩ರಷ್ಟಿದೆ. ಈ ಭಾಗದ ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿದರೆ ಶೇ. ೪೦ಕ್ಕಿಂತಲೂ ಹೆಚ್ಚು ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಈ ಭಾಗದಲ್ಲಿ ಬಡತನ ಹಾಸಿಗೆ ಹಾಸಿಕೊಂಡು ಹೊದ್ದು ಮಲಗುವಷ್ಟಿದೆ. ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ...ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಈ ಭಾಗ ಹಿಂದುಳಿದಿದೆ. ಬಡತನ, ದಾರಿದ್ರ್ಯ, ಮೌಢ್ಯ, ಕಂದಾಚರಣೆಗಳಲ್ಲಿ ಮಾತ್ರ ಸದಾ ಮುಂದಿದೆ. ಒಟ್ಟಾರೆ, ಹೈದರಾಬಾದ್ ಕರ್ನಾಟಕ ಹಿಂದುಳಿದ ಹಣೆಪಟ್ಟಿ ಕಳಚಿಕೊಳ್ಳಲು ಇನ್ನಿಲ್ಲದ ಕಸರತ್ತು ನಡೆಸಿದೆ. ಸಂವಿಧಾನದ ೩೭೧ (ಜೆ) ಕಲಂಗೆ ತಿದ್ದುಪಡಿ ತಂದ ಸಂಭ್ರಮ ಮರೆಯಾಗುವ ಮುನ್ನವೇ ಅದರ ಬಗ್ಗೆ ಅಪಸ್ವರಗಳೆದ್ದಿವೆ. ವಿಶೇಷ ಸ್ಥಾನಮಾನ ನಿರೀಕ್ಷಿತ ಫಲ ಕೊಡುತ್ತಿಲ್ಲ ಎಂಬ ದೂರುಗಳು ಕೇಳಬರುತ್ತಿವೆ. ಕಲಂ ೩೭೧ (ಜೆ)ಯನ್ನು ಸಮರ್ಪಕವಾಗಿ ಅನುಷ್ಠಾನಕ್ಕೆ ತರುವಂತೆ ಹೋರಾಟಗಳು ಪ್ರಾರಂಭಗೊಂಡಿವೆ. ಅದರ ಜೊತೆ ಜೊತೆಗೇ ಪ್ರತ್ಯೇಕ ರಾಜ್ಯದ ಕೂಗೂ ಎದ್ದಿದೆ. ಪ್ರತ್ಯೇಕ ರಾಜ್ಯವೊಂದೇ ತಮ್ಮ ಮುಂದಿನ ದಾರಿಯೆಂದು ಕೆಲ ಸಂಘಟನೆಗಳು ಹೋರಾಟ ಪ್ರಾರಂಭಿಸಿವೆ. ಇವೆಲ್ಲಕ್ಕೂ ಪೂರ್ಣ ವಿರಾಮ ಬೀಳಬೇಕೆಂದರೆ ರಾಜ್ಯ ಸರ್ಕಾರ ಇಚ್ಛಾಶಕ್ತಿ ಪ್ರದರ್ಶಿಸಬೇಕಿದೆ. ಈ ಭಾಗದ ಜನಪ್ರತಿನಿಧಿಗಳು ತಮ್ಮ ಬದ್ಧತೆ ತೋರಿಸಬೇಕಿದೆ. ಅದರ ಜೊತೆಗೆ ಕೇಂದ್ರ ಸರ್ಕಾರವೂ ಈ ಭಾಗಕ್ಕೆ ಹೆಚ್ಚಿನ ನೆರವು ನೀಡಿ ಸಹೃದಯತೆ ಮೆರೆಯಬೇಕಿದೆ. ಹಾಗಾದಾಗ ಮಾತ್ರ ವಿಶೇಷ ಸ್ಥಾನಮಾನಕ್ಕೆ ಅರ್ಥ ಬರಲಿದೆ.

# ಕಲಂ ೩೭೧ (ಜೆ) ಎಂಬ ಮಾಯಾಜಿಂಕೆ

**ಕಾ**ಡಿನಲ್ಲಿ ಪ್ರತ್ಯಕ್ಷವಾಗುವ ಜಿಂಕೆಯನ್ನು ಕಂಡ ಸೀತೆ ಅದನ್ನು ಹಿಡಿದುಕೊಡುವಂತೆ ರಾಮನಿಗೆ ಗಂಟುಬೀಳುವುದು, ಸೀತೆ ಪ್ರೀತಿಯಿಂದ ಕೇಳಿದ್ದನ್ನು ಹಿಡಿದುಕೊಡಲು ರಾಮ ಜಿಂಕೆಯ ಬೆನ್ನಟ್ಟುವುದು, ಆದರೆ ಆ ಜಿಂಕೆ ಅಲ್ಲಿ ಜಿಗಿದು... ಇಲ್ಲಿ ಜಿಗಿದು ಕಣ್ಮರೆಯಾಗುವುದು, ಕಣ್ಣಮುಂದೆಯೇ ಕಾಣಿಸಿ ಕೊಂಡಂತೆ ಭಾಸವಾಗುವ ಆ ಜಿಂಕೆ ಕೊನೆಗೂ ರಾಮನ ಕೈಗೆ ಸಿಗದೆ ಮಾಯವಾಗುವುದು – ಇದು ರಾಮಾಯಣದಲ್ಲಿ ಬರುವ ಒಂದು ಪ್ರಸಂಗ. ಅಲ್ಲಿಯ ಕಥೆ ಸತ್ಯವೋ ಸುಳ್ಳೋ, ಆ ಮಾತು ಹಾಗಿರಲಿ. ಆದರೆ ಅಲ್ಲಿ ಬರುವ ಮಾಯಾಜಿಂಕೆಯ ಪ್ರಸಂಗ ಮಾತ್ರ ನಮ್ಮ ಹೈದರಾಬಾದ್ ಕರ್ನಾಟಕದ ಸದ್ಯದ ಸ್ಥಿತಿಯನ್ನೇ ಬಿಂಬಿಸುತ್ತದೆ.

ಹತ್ತಾರು ವರ್ಷಗಳ ಹೋರಾಟದ ಫಲವಾಗಿ ಸಂವಿಧಾನದ ೩೭೧ (ಜೆ) ಕಲಂ ತಿದ್ದುಪಡಿಯೊಂದಿಗೆ ಹೈದರಾಬಾದ್ ಕರ್ನಾಟಕಕ್ಕೆ ವಿಶೇಷ ಸ್ಥಾನಮಾನ ಸಿಕ್ಕ ನಂತರವೂ ಈ ಪ್ರದೇಶ ನಿರೀಕ್ಷಿತ ಅಭಿವೃದ್ಧಿ ಕಂಡಿಲ್ಲ. ಸಂವಿಧಾನದ ತಿದ್ದುಪಡಿಯಾಗುತ್ತಿದ್ದಂತೆಯೇ ಹಿಂದುಳಿದ ಭಾಗದಲ್ಲಿ ಅಭಿವೃದ್ಧಿಯ ಪರ್ವ ಆರಂಭ ಗೊಂಡಿತೆಂದು ಜನ ಕುಣಿದು ಕುಪ್ಪಳಿಸಿದ್ದರು. ಸ್ವರ್ಗವೇ ಕೈಗೆ ಸಿಕ್ಕಂತೆ ಹರ್ಷದ ಹೊನಲಿನಲ್ಲಿ ತೇಲಿದ್ದರು. ಆದರೆ ನಂತರದ ಬೆಳವಣಿಗೆಗಳನ್ನು ನೋಡಿ ಜನತೆ ತೀವ್ರ ನಿರಾಸೆಗೆ ಗುರಿಯಾಗಿದ್ದಾರೆ. ಉದ್ಯೋಗದ ಕನಸು ಹೊತ್ತ ಯುವಕರು ದಿಗ್ಮೂಢರಾಗಿದ್ದಾರೆ. ಶೈಕ್ಷಣಿಕ ಮೀಸಲಾತಿ, ಉದ್ಯೋಗ ಸೃಷ್ಟಿ, ಕೃಷಿ, ಕೈಗಾರಿಕೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿಯೂ ಸೇರಿದಂತೆ ಹೈ.ಕ. ಭಾಗದ ಸಮಗ್ರ ಅಭಿವೃದ್ಧಿಯ ಆಶಾಗೋಪುರ ಮೂರ್ತರೂಪ ಪಡೆಯುವಲ್ಲಿ ವಿಫಲವಾಗುತ್ತಿದೆ. ವಿಶೇಷ ಸ್ಥಾನಮಾನವೆಂಬುದು ಮಾಯಾಜಿಂಕೆಯ ಹಾಗೆ ಕಣ್ಣಿಗೆ ಗೋಚರಿಸಿದಂತೆ ಗೋಚರಿಸಿ ಮಾಯವಾಗುತ್ತಿದೆ.

ಅದೇನೋ, ಹೈದರಾಬಾದ್ ಕರ್ನಾಟಕದ ಜನ ಹುಟ್ಟುಹೋರಾಟಗಾರರೋ ಅಥವಾ ಹೋರಾಟವನ್ನೇ ಬೆನ್ನಿಗೆ ಕಟ್ಟಿಕೊಂಡು ಬಂದವರೋ, ಗೊತ್ತಿಲ್ಲ. ಎಲ್ಲದಕ್ಕೂ ಇಲ್ಲಿ ಹೋರಾಟ ಅನಿವಾರ್ಯ. ದೇಶಾದ್ಯಂತ ಸ್ವಾತಂತ್ರ್ಯ ಪಡೆದ ಸಂಭ್ರಮಾಚರಣೆಯ ಸಂದರ್ಭದಲ್ಲಿ ಹೈದರಾಬಾದ್ ಪ್ರಾಂತ್ಯದ ಪ್ರಜೆಗಳು ವಿಮೋಚನಾ ಹೋರಾಟಕ್ಕೆ ಸಜ್ಜಾಗುತ್ತಿದ್ದರು. ನಿಜಾಮನಿಗೆ ಸೆಡ್ಡು ಹೊಡೆದು ಗಡಿ ಶಿಬಿರಗಳನ್ನು ರಚಿಸಿ, ರಜಾಕಾರರ ಬಂದೂಕಿಗೆ ಎದೆಯೊಡ್ಡಿ, ಪೊಲೀಸ್ ಕಾರ್ಯಾಚರಣೆ ನೆರವಿನೊಂದಿಗೆ ಒಂದು ವರ್ಷ ಒಂದು ತಿಂಗಳು ತಡವಾಗಿ ವಿಮೋಚನೆ ಪಡೆದ ಈ ಭಾಗದ ಜನ ಸಂಭ್ರಮಿಸಿದ್ದೂ ತಡವಾಗಿಯೇ. ಸ್ವಾತಂತ್ರ್ಯ ಪಡೆಯುವಲ್ಲಿ ಹೇಗೆ ಹಿಂದೆ ಬಿದ್ದರೋ ಸ್ವಾತಂತ್ರ್ಯಾನಂತರವೂ ಎಲ್ಲದರಲ್ಲಿಯೂ ಹಿಂದೆ ಬಿದ್ದಿದ್ದಾರೆ. ಈ ಭಾಗದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮೊದಲಾದ ಕ್ಷೇತ್ರದ ಅಂಕಿ-ಅಂಶಗಳನ್ನು ಗಮನಿಸಿದರೆ ಸಾಕು, ಎಷ್ಟರಮಟ್ಟಿಗೆ ಹಿಂದಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಯಾವುದೇ ಸಣ್ಣಪುಟ್ಟ ಬೇಡಿಕೆ ಈಡೇರಬೇಕೆಂದರೂ ಹೋರಾಟ ಅನಿವಾರ್ಯ. ಹಾಗೆಂದೇ ಜನ ನಂಬಿದ್ದಾರೋ ಅಥವಾ ಜನಪ್ರತಿನಿಧಿಗಳು, ಅಧಿಕಾರಿಗಳು ನಂಬಿಸಿದ್ದಾರೋ ಗೊತ್ತಿಲ್ಲ. ಪ್ರತಿಯೊಂದಕ್ಕೂ ಹೋರಾಟ ಮಾಡುವ ಜಾಯಮಾನ ಬೆಳೆದಿದ್ದರೂ ಈ ಭಾಗದ ಪ್ರಗತಿ ಆರಕ್ಕೇರಿಲ್ಲ, ಮೂರಕ್ಕೇ ನಿಂತಿದೆ ಎಂಬುದು ವಿಪರ್ಯಾಸ.

ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದ ಹೈದರಾಬಾದ್ ಸಂಸ್ಥಾನದಲ್ಲಿ ಮೂರು ಪ್ರಾಂತ್ಯಗಳಿದ್ದವು. ಮರಾಠಿ ಭಾಷಿಕರ ಮರಾಠವಾಡ (ವಿದರ್ಭ), ತೆಲುಗು ಮಾತನಾಡುವ ತೆಲಂಗಾಣ ಮತ್ತು ಕರ್ನಾಟಕದ ಕಲಬುರಗಿ, ಬೀದರ್, ರಾಯಚೂರು ಜಿಲ್ಲೆಗಳು ಇದರ ವ್ಯಾಪ್ತಿಯಲ್ಲಿದ್ದವು. ಮರಾಠವಾಡ, ತೆಲಂಗಾಣ ಮತ್ತು ಕರ್ನಾಟಕಕ್ಕೆ ಸೇರ್ಪಡೆಗೊಂಡ ಪ್ರದೇಶ ಸೇರಿ ಒಟ್ಟು ೧೬ ಜಿಲ್ಲೆಗಳನ್ನೊಳಗೊಂಡು ಹೈದರಾಬಾದ್ ಸಂಸ್ಥಾನ ರಚನೆಗೊಂಡಿತ್ತು. ೧೯೪೭ರ ಆಗಸ್ಟ್ ೧೫ರಂದು ಭಾರತ ಸ್ವಾತಂತ್ರ್ಯ ಪಡೆದುಕೊಂಡ ಸಂದರ್ಭದಲ್ಲಿ ಹೈದರಾಬಾದ್ ನಿಜಾಮ ಸ್ವತಂತ್ರವಾಗಿ ಉಳಿಯುವ ನಿರ್ಧಾರ ಪ್ರಕಟಿಸಿದ್ದರಿಂದ ಈ ಪ್ರಾಂತ್ಯದ ಜನಕ್ಕೆ ಮತ್ತೊಂದು ಹೋರಾಟ ಮಾಡುವುದು ಅನಿವಾರ್ಯವಾಯಿತು. ತನ್ನ ಅಸ್ತಿತ್ವ ಉಳಿಸಿಕೊಳ್ಳಲು ನಿಜಾಮ ತನ್ನದೇ ಆದ ರಜಾಕಾರರ ಪಡೆಯನ್ನು ರಚಿಸಿ ಜನರನ್ನು ದಮನಿಸುವ ಕಾರ್ಯವನ್ನು ಕೈಗೊಂಡ. ಈ ವೇಳೆ ರಜಾಕಾರ ಪಡೆಯಿಂದ ಮಕ್ಕಳು, ಮಹಿಳೆಯರು, ವೃದ್ಧರೆನ್ನದೆ ಸಾವಿರಾರು ಜನರ ಮಾರಣಹೋಮ ನಡೆಯಿತು. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕುವ ಪ್ರಯತ್ನಗಳೂ ನಡೆದವು. ನಿಜಾಮನಿಗೆ ಸೆಡ್ಡು ಹೊಡೆಯುವ ರೀತಿಯಲ್ಲಿ ಜನ ಗಡಿಗಳಲ್ಲಿ ಶಿಬಿರಗಳನ್ನು ರಚಿಸಿಕೊಂಡು ಹೋರಾಟ ಪ್ರಾರಂಭಿಸಿದರು. ಅವರಿಗೆ ಬೆಂಬಲವಾಗಿ ಆಗಿನ

**ಡಾ|| ಶಿವರಾಮ ಅಸುಂಡಿ**

ಕೇಂದ್ರ ಸರ್ಕಾರದ ಗೃಹಮಂತ್ರಿ ಸರ್ದಾರ್ ವಲ್ಲಭಭಾಯಿ ಪಟೇಲರ ನೇತೃತ್ವದಲ್ಲಿ ಪೊಲೀಸ್ ಕಾರ್ಯಾಚರಣೆ ನಡೆಯಿತು. ಸಾವಿರಾರು ಹೋರಾಟಗಾರರ ತ್ಯಾಗ-ಬಲಿದಾನದ ಫಲವಾಗಿ ಕೊನೆಗೂ ಈ ಪ್ರಾಂತ್ಯ ೧೯೪೮ರ ಸೆಪ್ಟೆಂಬರ್ ೧೭ರಂದು ಭಾರತದ ಒಕ್ಕೂಟದಲ್ಲಿ ವಿಲೀನ ಗೊಂಡಿತು. ನಂತರದಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದಾಗ ಮರಾಠಿ ಭಾಷಿಕರ ಮರಾಠವಾಡ (ವಿದರ್ಭ) ಮಹಾರಾಷ್ಟ್ರಕ್ಕೆ, ತೆಲುಗು ಭಾಷಿಕರ ತೆಲಂಗಾಣ ಆಂಧ್ರಪ್ರದೇಶಕ್ಕೆ ಮತ್ತು ಕನ್ನಡ ಭಾಷಿಕರ ಹೈದರಾಬಾದ್ ಕರ್ನಾಟಕ ಮೈಸೂರು ರಾಜ್ಯಕ್ಕೆ ಸೇರ್ಪಡೆಗೊಂಡವು. ನಂತರದಲ್ಲಿ ಮೈಸೂರು ರಾಜ್ಯ ಕರ್ನಾಟಕ ರಾಜ್ಯವಾಗಿ ಮಾರ್ಪಟ್ಟದ್ದು ಈಗ ಇತಿಹಾಸ.

ಭಾಷಾ ಬಾಂಧವ್ಯದ ಜೊತೆಗೆ ಮೈಸೂರು ರಾಜ್ಯ ಮುಂದುವರಿದ ಭಾಗವೆಂದು, ಅಲ್ಲಿ ಸೇರ್ಪಡೆ ಗೊಂಡರೆ ತಮ್ಮ ಸಮಗ್ರ ಅಭಿವೃದ್ಧಿಯಾಗುವುದೆಂಬ ಕನಸಿನೊಂದಿಗೆ ಹೈದರಾಬಾದ್ ಪ್ರಾಂತ್ಯದ ಕಲಬುರಗಿ, ಬೀದರ್ ಮತ್ತು ರಾಯಚೂರು ಜಿಲ್ಲೆಗಳ (ಈಗಿನ ಕೊಪ್ಪಳ ಮತ್ತು ಯಾದಗಿರಿ ಜಿಲ್ಲೆಗಳನ್ನೊಳಗೊಂಡಂತೆ) ಜನತೆ ಕರ್ನಾಟಕದ ರಾಜ್ಯಕ್ಕೆ ಬರಲು ಸರ್ವಸಮ್ಮತಿ ನೀಡಿದ್ದರು. ಹೈದರಾಬಾದ್ ಪ್ರಾಂತ್ಯ, ಮುಂಬೈ ಪ್ರಾಂತ್ಯ, ಮದ್ರಾಸ್ ಪ್ರಾಂತ್ಯ ಮೊದಲಾದ ಕನ್ನಡ ಭಾಷಿಕರ ಭಾಗಗಳು ಅಭಿವೃದ್ಧಿಯ ಮುಂಚೂಣಿಯಲ್ಲಿದ್ದ ಮೈಸೂರು ಪ್ರಾಂತ್ಯದಲ್ಲಿ ವಿಲೀನಗೊಳ್ಳುವ ಮೂಲಕ ಕರ್ನಾಟಕ ರಾಜ್ಯ ಉದಯವಾಯಿತು. ಅಖಂಡ ಕರ್ನಾಟಕ ಅಸ್ತಿತ್ವಕ್ಕೆ ಬಂದು ಹಲವು ದಶಕಗಳೇ ಕಳೆದರೂ ಹೈದರಾಬಾದ್ ಕರ್ನಾಟಕದ ಜನರ ಅಭಿವೃದ್ಧಿಯ ಕನಸು ಇನ್ನೂ ಕನಸಾಗಿಯೇ ಉಳಿದಿದೆ.

ಹೈದರಾಬಾದ್ ಸಂಸ್ಥಾನದಿಂದ ಬೇರ್ಪಡೆಯಾದ ತೆಲಂಗಾಣ ಪ್ರಾಂತ್ಯ ಸಂವಿಧಾನದ ೩೭೧ (ಡಿ)ನೇ ಕಲಂ ತಿದ್ದುಪಡಿಯೊಂದಿಗೆ ವಿಶೇಷ ಸ್ಥಾನಮಾನ ಪಡೆದುದಲ್ಲದೆ ಮುಂದೆ ಪ್ರತ್ಯೇಕ ರಾಜ್ಯವಾಗಿಯೂ ರೂಪುಗೊಂಡಿದೆ. ತಿದ್ದುಪಡಿಯ ಸಂದರ್ಭದಲ್ಲಿ ತೆಲಂಗಾಣಕ್ಕೆ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ಕಲ್ಪಿಸಲಾಗಿತ್ತು. ಹಾಗೆಯೇ ವಿದರ್ಭ ಪ್ರಾಂತ್ಯವೂ ಕಲಂ ೩೭೧ರ ತಿದ್ದುಪಡಿಯೊಂದಿಗೆ ಪ್ರದೇಶಾಭಿವೃದ್ಧಿ ಮಂಡಳಿಯನ್ನು ಪಡೆದುಕೊಂಡು ಹಳತಾಗಿದೆ. ಆದರೆ ಅದೇ ಸಂಸ್ಥಾನದಿಂದ ಬೇರ್ಪಡೆಗೊಂಡಿದ್ದ ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಮಾತ್ರ ವಿಶೇಷ ಸ್ಥಾನಮಾನ ಸಿಕ್ಕಿದ್ದು ೨೦೧೨ನೇ ವರ್ಷಾಂತ್ಯದಲ್ಲಿ. ಅದೂ ಸಹ ಕಲಂ ೩೭೧ರ ತಿದ್ದುಪಡಿಯ ಅಂಶಗಳ ವಿರುದ್ಧ ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಗಳಲ್ಲಿ ಧ್ವನಿಯೆದ್ದದ್ದು ತೆಲಂಗಾಣ ಪ್ರತ್ಯೇಕ ರಾಜ್ಯವಾಗುವ ಸಂದರ್ಭದಲ್ಲಿ!

ಸಂವಿಧಾನದ ೩೭೧ನೇ ಕಲಂ ತಿದ್ದುಪಡಿಯಿಂದ ಯಾವುದೇ ಪ್ರಯೋಜನ ವಾಗಿಲ್ಲವೆಂಬ ಅಪಸ್ವರವೆದ್ದು, ತೀವ್ರ ಹೋರಾಟದ ನಂತರ ಇದೀಗ ಪ್ರತ್ಯೇಕ ರಾಜ್ಯವಾಗಿ ರೂಪುಗೊಂಡ ತೆಲಂಗಾಣ ಅಭಿವೃದ್ಧಿಯ ನಿರೀಕ್ಷೆಯಲ್ಲಿದೆ. ಇದೇ ಸಂದರ್ಭದಲ್ಲಿ ಹೈದರಾಬಾದ್ ಕರ್ನಾಟಕದಲ್ಲಿ ವಿಶೇಷ ಸ್ಥಾನಮಾನ ಜಾರಿಗೊಳಿಸುವ ಗಂಭೀರ ಪ್ರಯತ್ನಗಳು ನಡೆದಿವೆ. ಹಾಗೆ ನೋಡಿದರೆ ತೆಲಂಗಾಣ ಮತ್ತು ವಿದರ್ಭಕ್ಕಿಂತಲೂ ಒಂದಿಷ್ಟು ಸುಧಾರಿತ ಅಂಶಗಳು ೩೭೧ (ಜೆ)ಯಲ್ಲಿವೆ. ಅವನ್ನು ಸಮರ್ಪಕವಾಗಿ ಅನುಷ್ಠಾನಕ್ಕೆ ತಂದಲ್ಲಿ ಈ ಭಾಗವನ್ನು ಪ್ರಗತಿಪಥದತ್ತ ಕೊಂಡೊಯ್ಯಬಹುದು. ಆದರೆ ಈ ಪ್ರಯತ್ನಗಳು ಕೇವಲ ತೋರ್ಪಡಿಕೆಗಾಗಿ ಎನ್ನುವ ರೀತಿಯಲ್ಲಿ ನಡೆಯುತ್ತಿದ್ದು ಹಲವಾರು ಸಂದೇಹಗಳಿಗೆ ಎಡೆಮಾಡಿ ಕೊಟ್ಟಿದೆ. ಕಲಂ ೩೭೧ (ಜೆ) ತಿದ್ದುಪಡಿಯಾಗಿ ಮೂರು ವರ್ಷಗಳಾಗುತ್ತಾ ಬಂದರೂ ಈ ಭಾಗದ ಅಭಿವೃದ್ಧಿ ಆರಕ್ಕೇರದಿರುವುದು ಈ ಸಂದೇಹಕ್ಕೆ ಕಾರಣ.

ಯುಪಿಎ ಸರ್ಕಾರ ಅಧಿಕಾರದಲ್ಲಿದ್ದಾಗ ೨೦೧೨ರ ವರ್ಷಾಂತ್ಯದಲ್ಲಿ ಸಂವಿಧಾನದ ೩೭೧ (ಜೆ) ಕಲಂ ಮಸೂದೆ ಲೋಕಸಭೆ ಮತ್ತು ರಾಜ್ಯಸಭೆಗಳಲ್ಲಿ ಸರ್ವಾನುಮತದಿಂದ ಅಂಗೀಕಾರಗೊಂಡಾಗ ಇತಿಹಾಸ ಸೃಷ್ಟಿಯಾಗಿತ್ತು. ಇದಕ್ಕೆ ಕಾರಣರಾದವರು ಅಂದು ಕೇಂದ್ರ ಸಚಿವರಾಗಿದ್ದ ಮಲ್ಲಿಕಾರ್ಜುನ ಖರ್ಗೆ ಅವರು. ಹಿಂದುಳಿದ ಹೈ.ಕ. ಭಾಗಕ್ಕೆ ವಿಶೇಷ ಸ್ಥಾನಮಾನ ನೀಡಬೇಕೆಂದು ಮಾಜಿ ಸಚಿವ ವೈಜನಾಥ ಪಾಟೀಲ ಆರಂಭಿಸಿದ್ದ ಹೋರಾಟಕ್ಕೆ ಫಲ ದೊರಕಿಸಿಕೊಡುವ ಮೂಲಕ ಖರ್ಗೆ ತಮ್ಮನ್ನು ಸತತವಾಗಿ ಗೆಲ್ಲಿಸಿಕೊಂಡು ಬರುತ್ತಿರುವ ಜನರ ಋಣ ತೀರಿಸಿದ್ದರು. ತಿದ್ದುಪಡಿ ಅನ್ವಯ ಹೈದರಾಬಾದ್ ಪ್ರಾಂತ್ಯದ ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು, ಕೊಪ್ಪಳ ಹಾಗೂ ಮದ್ರಾಸ್ ಪ್ರಾಂತ್ಯದಲ್ಲಿದ್ದ ಬಳ್ಳಾರಿ ಜಿಲ್ಲೆಗಳಿಗೆ ವಿಶೇಷ ಸ್ಥಾನಮಾನ ಲಭಿಸಿತು. ಕಲಬುರಗಿ ವಿಭಾಗದಲ್ಲಿದ್ದುದರಿಂದ ತಾಂತ್ರಿಕ ಕಾರಣಕ್ಕೆ ಬಳ್ಳಾರಿ ಜಿಲ್ಲೆಯೂ ಈ ಸೌಲಭ್ಯಕ್ಕೆ ಭಾಜನವಾಯಿತು. ೨೦೧೩ರಲ್ಲಿ ಅಧಿಕಾರಕ್ಕೆ ಬಂದ ಸಿದ್ದರಾಮಯ್ಯ ನೇತೃತ್ವದ ರಾಜ್ಯ ಸರ್ಕಾರ ವಿಶೇಷ ಸ್ಥಾನಮಾನದ ಜಾರಿಯ ನೊಗ ಹೊತ್ತುಕೊಂಡಿತು.




ಸಂವಿಧಾನದ ೩೭೧ (ಜೆ) ತಿದ್ದುಪಡಿ ಅನ್ವಯ ಹಿಂದುಳಿದ ಭಾಗವೆನಿಸಿಕೊಂಡ ಹೈದರಾಬಾದ್ ಕರ್ನಾಟಕ ಪ್ರದೇಶ ಉದ್ಯೋಗ ಮೀಸಲಾತಿ, ಶೈಕ್ಷಣಿಕ ಮೀಸಲಾತಿ, ಕೃಷಿ, ಕೈಗಾರಿಕೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿಯೂ ಸೇರಿದಂತೆ ಸಮಗ್ರ ಅಭಿವೃದ್ಧಿಯ ದೃಷ್ಟಿಯನ್ನು ಹೊಂದಿದೆ. ರಾಜ್ಯ ಸರ್ಕಾರವೂ ಪ್ರತೀ ವರ್ಷ ಬಜೆಟ್‌ನಲ್ಲಿ ಒಂದು ಸಾವಿರ ಕೋಟಿ ರೂಪಾಯಿ ಮೀಸಲಿಡುವುದಾಗಿ ಪ್ರಕಟಿಸಿದ್ದು, ಅದೇ ಪ್ರಕಾರ ಕಾರ್ಯೋನ್ಮುಖವಾಗಿದೆ. ಪ್ರತ್ಯೇಕ ಸಚಿವ ಸಂಪುಟದ ಉಪ ಸಮಿತಿಯನ್ನೂ ರಚಿಸಿ, ವಿಶೇಷ ಗಮನ ಹರಿಸುವ ಪ್ರಯತ್ನಗಳನ್ನು ಮಾಡಲಾಗಿದೆ. ಇವೆಲ್ಲದರ ನಡುವೆಯೂ ನಿರೀಕ್ಷಿತ ಅಭಿವೃದ್ಧಿ ಕಾಣುವ ಲಕ್ಷಣಗಳು ಗೋಚರಿಸುತ್ತಿಲ್ಲ.

ಔದ್ಯೋಗಿಕ ಮೀಸಲಾತಿ ವಿಷಯಕ್ಕೇ ಬರೋಣ. ಸಂವಿಧಾನದ ತಿದ್ದುಪಡಿ ಅನ್ವಯ ಹೈ.ಕ. ಭಾಗದ ಜನರಿಗೆ ಆ ಪ್ರದೇಶದ ನೇಮಕಾತಿಗಳಲ್ಲಿ 'ಬಿ' ಸಮೂಹ ಹುದ್ದೆಗಳಲ್ಲಿ ಶೇ. ೭೫, 'ಸಿ' ಸಮೂಹದ ಹುದ್ದೆಗಳಲ್ಲಿ ಶೇ. ೮೦ ಹಾಗೂ 'ಡಿ' ಸಮೂಹದ ಹುದ್ದೆಗಳಲ್ಲಿ ಶೇ. ೮೫ರಷ್ಟು ಹುದ್ದೆಗಳನ್ನು ಮೀಸಲಿಡಲಾಗಿದೆ. ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಹೊರತುಪಡಿಸಿದಂತೆ, ರಾಜ್ಯದ ಇತರೆ ಭಾಗದಲ್ಲಿ ಶೇ. ೮ರಷ್ಟು ಉದ್ಯೋಗ ಮೀಸಲಾತಿಯನ್ನು ಸಹ ನೀಡಲಾಗಿದೆ. ಸಿದ್ದರಾಮಯ್ಯ ಅಧಿಕಾರಕ್ಕೆ ಬಂದ ನಂತರ ೨೦೧೪ರ ನವೆಂಬರ್‌ನಲ್ಲಿ ಕಲಬುರಗಿಯಲ್ಲಿ ಸಚಿವ ಸಂಪುಟ ಸಭೆ ನಡೆಸಿದಾಗ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ೫೦ ಸಾವಿರ ಹುದ್ದೆಗಳು ಖಾಲಿ ಇದ್ದು, ಡಿಸೆಂಬರ್ ೨೦೧೪ರೊಳಗಾಗಿ ವಿವಿಧ ಇಲಾಖೆಗಳಲ್ಲಿನ ಖಾಲಿ ಹುದ್ದೆಗಳನ್ನು ಗುರುತಿಸಲಾಗುವುದು. ೨೦೧೫ರ ಜೂನ್ ತಿಂಗಳೊಳಗಾಗಿ ಎಲ್ಲ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡುವುದಾಗಿ ಭರವಸೆ ನೀಡಿದ್ದರು. ಆದರೆ ಆದದ್ದೇನು? ಇಲಾಖಾವಾರು ಖಾಲಿ ಇರುವ ಹುದ್ದೆಗಳ ಪಟ್ಟಿ ಸಿದ್ಧಪಡಿಸುವುದೇ ದೊಡ್ಡ ಕೆಲಸವಾಯಿತು. ಪೊಲೀಸ್ ಇಲಾಖೆ, ಸಾರಿಗೆ ಇಲಾಖೆ, ಶಿಕ್ಷಣ ಇಲಾಖೆಯಲ್ಲಿ ಒಂದಿಷ್ಟು ನೇಮಕಾತಿಗಳು ನಡೆದದ್ದು ಬಿಟ್ಟರೆ ಎಲ್ಲ ಖಾಲಿ ಹುದ್ದೆಗಳ ಭರ್ತಿ ನಡೆದೇ ಇಲ್ಲ. ೨೦೧೬ ಜುಲೈ ತಿಂಗಳಲ್ಲಿ ಬೆಂಗಳೂರಿನಲ್ಲಿ ನಡೆದ ಪತ್ರಕರ್ತರ ಸಂವಾದ ಕಾರ್ಯಕ್ರಮದಲ್ಲಿ ಸ್ವತಃ ಮುಖ್ಯಮಂತ್ರಿಗಳು ಇದನ್ನು ಒಪ್ಪಿಕೊಳ್ಳುವ ಜೊತೆಗೆ ಹೈ.ಕ. ಭಾಗದಲ್ಲಿ ೩೦ ಸಾವಿರ ಹುದ್ದೆಗಳು ಖಾಲಿಯಿದ್ದು, ಶೀಘ್ರದಲ್ಲಿಯೇ ನೇಮಕಾತಿ ಮಾಡುವುದಾಗಿ ಭರವಸೆ ನೀಡಿದ್ದಾರೆ. ಅದರರ್ಥ ಈಗಾಗಲೇ ೨೦ ಸಾವಿರ ಹುದ್ದೆಗಳು ಭರ್ತಿಯಾಗಿವೆಯೆಂದಲ್ಲ. ಸುಮಾರು ೧೦ ಸಾವಿರ ಹುದ್ದೆಗಳು ಭರ್ತಿಯಾಗಿದ್ದರೆ ಅದೇ ದೊಡ್ಡ ಮಾತು.

ಸದ್ಯದ ಮಾಹಿತಿ ಪ್ರಕಾರ ಕಂದಾಯ, ಆಹಾರ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯೂ ಸೇರಿದಂತೆ ವಿವಿಧ ಇಲಾಖೆಗಳು ಮತ್ತು ಸ್ಥಳೀಯ

ಸಂಸ್ಥೆಗಳಲ್ಲಿ ೩೦,೧೭೪ ಹುದ್ದೆಗಳು ಖಾಲಿ ಇವೆ. ಈ ಪೈಕಿ ಶಿಕ್ಷಣ ಇಲಾಖೆಯಲ್ಲಿಯೇ ೧೧,೧೫೪ ಹುದ್ದೆಗಳು ಖಾಲಿ ಇವೆ. ಖಾಲಿ ಇರುವ ಶೇ. ೪೦ರಷ್ಟು ಹುದ್ದೆಗಳು ಶಿಕ್ಷಣ ಇಲಾಖೆಗೆ ಸಂಬಂಧಿಸಿದ್ದವುಗಳೇ ಆಗಿದ್ದು, ಇನ್ನು ಈ ಭಾಗದಲ್ಲಿ ಗುಣಮಟ್ಟದ ಶಿಕ್ಷಣವನ್ನು ಹೇಗೆ ತಾನೆ ನಿರೀಕ್ಷೆ ಮಾಡಲಾದೀತು...? ಇದರ ನಂತರದ ಸ್ಥಾನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯದಾಗಿದ್ದು, ೩೧೧೨ ಹುದ್ದೆಗಳು ಖಾಲಿಯಿವೆ. ಶಿಕ್ಷಣ, ಆರೋಗ್ಯದಂತಹ ಅವಿಭಾಜ್ಯ ಅಂಗಗಳಲ್ಲಿಯೇ ಹೆಚ್ಚಿನ ಹುದ್ದೆಗಳು ಖಾಲಿಯಿದ್ದರೂ ತುಂಬುವ ಗಂಭೀರ ಪ್ರಯತ್ನಗಳು ನಡೆದಿಲ್ಲ.

ಇನ್ನು ಹೈದರಾಬಾದ್ ಕರ್ನಾಟಕೇತರ ಪ್ರದೇಶದ ಮೀಸಲಾತಿ ವಿಷಯಕ್ಕೆ ಬಂದರೆ ಅಲ್ಲಿಯೂ ತೊಂದರೆಗಳ ಸರಮಾಲೆಯೇ ಎದುರಾಗಿದೆ. ಹೈ.ಕ.ವನ್ನು ಹೊರತುಪಡಿಸಿದಂತೆ, ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ವಿಭಾಗಗಳಲ್ಲಿ ಶೇ. ೮೦ರಷ್ಟು ಮೀಸಲಾತಿಯನ್ನು ರಾಜ್ಯ ಸರ್ಕಾರ ಕೊಟ್ಟಿದೆ. ಆದರೆ ಈ ಅಂಶ ಸಂವಿಧಾನದ ೩೭೧ (ಜೆ) ತಿದ್ದುಪಡಿಯಲ್ಲಿ ಸೇರ್ಪಡೆಗೊಂಡಿಲ್ಲ ಎಂಬುದು ವಿಶೇಷ ಸಂಗತಿ. ಹೀಗಾಗಿ ಇದನ್ನು ಯಾರು ಬೇಕಾದರೂ ನ್ಯಾಯಾಲಯದಲ್ಲಿ ಪ್ರಶ್ನಿಸಬಹುದಾಗಿದ್ದು, ಈಗಾಗಲೇ ಕೆಲವೊಂದು ಪ್ರಕರಣಗಳಲ್ಲಿ ನ್ಯಾಯಾಲಯ ಶೇ. ೮ ಮೀಸಲಾತಿಗೆ ತಡೆಯಾಜ್ಞೆ ನೀಡಿರುವುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಬಹುತೇಕ ಇಲಾಖೆಗಳಲ್ಲಿ ಶೇ. ೮೦ರಷ್ಟು ಮೀಸಲಾತಿಯನ್ನು ಹೈ.ಕ. ಭಾಗದ ಜನರಿಗೆ ನೀಡಲು ಒಂದಲ್ಲ ಒಂದು ತಕರಾರುಗಳು ನಡೆದೇ ಇವೆ. ರಾಜ್ಯದ ಇತರೆ ಭಾಗದ ಹುದ್ದೆಗಳಿಗಾಗಿ ಒಂದರ್ಥದಲ್ಲಿ ಹೋರಾಟ ಮಾಡುವ ಅನಿವಾರ್ಯತೆ ಸೃಷ್ಟಿಯಾಗಿದೆ.

ವಿಶೇಷ ಸ್ಥಾನಮಾನ ನೀಡುವಾಗ ಸರ್ಕಾರವೇನೋ ಉದ್ಯೋಗ ಮೀಸಲಾತಿ ನೀಡಿದೆ. ಆದರೆ ಈ ಭಾಗದಲ್ಲಿ ಇರುವ ಹುದ್ದೆಗಳೆಷ್ಟು, ಇದ್ದ ಹುದ್ದೆಗಳಲ್ಲಿ ರದ್ದಾಗುತ್ತಿರುವವೆಷ್ಟು, ಹೊಸ ಹುದ್ದೆಗಳ ಸೃಷ್ಟಿ ಎಷ್ಟು ಎಂಬುದು ಯಕ್ಷಪ್ರಶ್ನೆಯಾಗಿಯೇ ಉಳಿದಿದೆ. ಶಿಕ್ಷಣ ಇಲಾಖೆಯನ್ನೇ ಉದಾಹರಣೆಗೆ ತೆಗೆದುಕೊಳ್ಳುವುದಾದರೆ ಅತಿ ಹೆಚ್ಚು ಖಾಲಿ ಹುದ್ದೆಗಳಿರುವುದು ಇಲ್ಲಿಯೇ. ಆದರೆ ವಿದ್ಯಾರ್ಥಿಗಳ ಕೊರತೆ ಇತ್ಯಾದಿಗಳ ಕಾರಣದಿಂದ ಹಲವಾರು ಶಾಲೆಗಳನ್ನು ಬೇರೆ ಶಾಲೆಗಳಿಗೆ ವಿಲೀನ ಮಾಡಲು ಸರ್ಕಾರ ಮುಂದಾಗಿದೆ. ತೀವ್ರ ವಿರೋಧದಿಂದಾಗಿ ರಾಜ್ಯಾದ್ಯಂತ ಶಾಲೆಗಳ ವಿಲೀನ ಪ್ರಕ್ರಿಯೆ ತಾತ್ಕಾಲಿಕವಾಗಿ ಸ್ಥಗಿತಗೊಂಡಿದ್ದರೂ ಎರಡು ಸಾವಿರಕ್ಕೂ ಹೆಚ್ಚು ಶಾಲೆಗಳ ಮೇಲೆ ಮುಚ್ಚುವ ಭೀತಿಯ ತೂಗುಕತ್ತಿ ನೇತಾಡುತ್ತಲೇ ಇದೆ.

೨೦೧೪–೧೫ನೇ ಸಾಲಿನ ಮಾಹಿತಿ ಪ್ರಕಾರ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ೧೦ಕ್ಕಿಂತ ಕಡಿಮೆ ಮಕ್ಕಳಿರುವ ಶಾಲೆಗಳು ೧೩೮, ೧೦ರ ಮೇಲ್ಪಟ್ಟು ೨೦ಕ್ಕಿಂತ ಕಡಿಮೆ ವಿದ್ಯಾರ್ಥಿಗಳಿರುವ ಶಾಲೆಗಳು ೪೬೯. ಪ್ರೌಢಶಾಲಾ ವಿಭಾಗದಲ್ಲಿ ೧೦ಕ್ಕಿಂತ ಕಡಿಮೆ ಇರುವ ಶಾಲೆಗಳು ೨೯ ಮತ್ತು ೧೦ರ ಮೇಲ್ಪಟ್ಟು ೨೦ರೊಳಗಿರುವ ಶಾಲೆಗಳ ಸಂಖ್ಯೆ ೪೨ ಇವೆ. ಇವೆಲ್ಲ ಶಾಲೆಗಳನ್ನೂ ಬೇರೆ ಶಾಲೆಗಳೊಡನೆ ವಿಲೀನ ಮಾಡಿದಲ್ಲಿ ಅಲ್ಲಿನ ಶಿಕ್ಷಕರನ್ನು ಬೇರೆಡೆಗೆ ವರ್ಗಾಯಿಸಬೇಕು ಅಥವಾ ನೌಕರಿಯಿಂದ ತೆಗೆಯಬೇಕು. ಪರಿಸ್ಥಿತಿ ಹೀಗಿರುವಾಗ ಹೈ.ಕ. ವಿಶೇಷ ಸ್ಥಾನಮಾನದ ಅನ್ವಯ ನೇಮಕಾತಿ ಮಾಡುವ ಪ್ರಶ್ನೆ ಎಲ್ಲಿಂದ ತಾನೆ ಬರುತ್ತದೆ?

ಈ ಭಾಗದ ಬಹುತೇಕ ಸರ್ಕಾರಿ ಕಛೇರಿಗಳು, ಇಲಾಖೆಗಳು ಮತ್ತು ಸ್ಥಳೀಯ ಸಂಸ್ಥೆಗಳ ಹೆಚ್ಚಿನ ಹುದ್ದೆಗಳನ್ನು ಗುತ್ತಿಗೆ ನೌಕರರು, ದಿನಗೂಲಿ ನೌಕರರು ನಿರ್ವಹಿಸುತ್ತಿದ್ದಾರೆ. ಇವರಲ್ಲಿ ಎಷ್ಟೋ ಜನ ತಮ್ಮ ಸೇವೆ ಖಾಯಂಗೊಳ್ಳದೆ ನಿವೃತ್ತಿ ಹೊಂದಿದವರೂ ಇದ್ದಾರೆ. ಸರ್ಕಾರಿ ನೌಕರಿಯ ಕಥೆ ಹೀಗಿರಬೇಕಾದರೆ ಇಲ್ಲಿಯೂ ಖಾಸಗೀಕರಣದ ಬಿರುಗಾಳಿ ಎದ್ದಿದ್ದು, ಎಲ್ಲವೂ ಖಾಸಗೀಮಯವಾಗಲಾರಂಭಿಸಿವೆ. ಖಾಸಗೀ ವಲಯದಲ್ಲಿ ಮೀಸಲಾತಿ ಕನ್ನಡಿಯೊಳಗಣ ಗಂಟಾಗಿರುವ ಸಂದರ್ಭದಲ್ಲಿ ಹೈದರಾಬಾದ್ ಕರ್ನಾಟಕದ ಜನತೆಗೆ ಪ್ರತ್ಯೇಕ ಉದ್ಯೋಗ ಮೀಸಲಾತಿ ಸಿಗುವುದಾದರೂ ಎಲ್ಲಿಂದ? ದಕ್ಷಿಣ ಏಷ್ಯಾದಲ್ಲಿಯೇ ಅತಿದೊಡ್ಡ ಸಿಮೆಂಟ್ ಯೂನಿಟ್ ಎನಿಸಿಕೊಂಡ ಎಸಿಸಿ ಕಾರ್ಖಾನೆ, ಜಿಂದಾಲ್‌ನಂತಹ ಬೃಹತ್ ಸ್ಟೀಲ್ ಪ್ಲ್ಯಾಂಟ್, ಹತ್ತು ಹಲವು ಕಾರ್ಖಾನೆಗಳು ಈ ಭಾಗದಲ್ಲಿದ್ದರೂ ಅವುಗಳಲ್ಲಿ ನೌಕರಿ ಪಡೆದ ಸ್ಥಳೀಯರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು. ಅವೂ ಸಹ ಚಪರಾಸಿ ಕೆಲಸಗಳು. ಅಲ್ಲಿಯ ಜನರಿಗೆ ಸಣ್ಣಪುಟ್ಟ ಕೂಲಿ ಕೆಲಸಕ್ಕೂ ಪುಣೆ, ಮುಂಬೈ, ಬೆಂಗಳೂರು ಮೊದಲಾದ ನಗರಗಳಿಗೆ ಗುಳೇ ಹೋಗುವ ಅನಿವಾರ್ಯತೆ ಇರುವುದು ಅದಕ್ಕೆ ಸಾಕ್ಷಿ.

ಸಂವಿಧಾನದ ೩೭೧ (ಜೆ) ಕಲಂ ತಿದ್ದುಪಡಿಯಿಂದಾಗಿ ಹೈದರಾಬಾದ್ ಕರ್ನಾಟಕದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಮೀಸಲಾತಿ ಸಿಕ್ಕಿದೆ. ವೈದ್ಯಕೀಯ, ದಂತವೈದ್ಯಕೀಯ, ಎಂಜಿನಿಯರಿಂಗ್ ಮೊದಲಾದ ಕೋರ್ಸ್‌ಗಳಿಗೆ ಮೀಸಲಾತಿ ಸಿಕ್ಕಿರುವುದು ತುಸು ನೆಮ್ಮದಿ ತಂದಿದೆಯಾದರೂ ಇಲ್ಲಿಯೂ ಹಲವಾರು ತೊಡಕುಗಳನ್ನು ಎದುರಿಸುವಂತಾಗಿದೆ. ಹೈ.ಕ. ಭಾಗದಲ್ಲಿನ ಬಹುತೇಕ ವೈದ್ಯಕೀಯ, ದಂತವೈದ್ಯಕೀಯ ಮತ್ತು ಎಂಜಿನಿಯರಿಂಗ್ ಕಾಲೇಜುಗಳು ಖಾಸಗಿ ಸಂಸ್ಥೆಗಳಿಗೆ ಸೇರಿವೆ. ಸರ್ಕಾರಿ ವೈದ್ಯಕೀಯ, ಎಂಜಿನಿಯರಿಂಗ್ ಕಾಲೇಜುಗಳನ್ನು ದುರ್ಬೀನು ಹಾಕಿ ಹುಡುಕುವ ಸ್ಥಿತಿ ಉಂಟಾಗಿದೆ. ಹೀಗಿರುವಾಗ ಶೈಕ್ಷಣಿಕ ಮೀಸಲಾತಿ ಕೇಳಲು ಯಾರ ಬಳಿ ಹೋಗಬೇಕು? ಕೇಂದ್ರ ಸರ್ಕಾರದ ಒಡೆತನದಲ್ಲಿರುವ ಕಲಬುರಗಿಯ ಇ.ಎಸ್.ಐ. ವೈದ್ಯಕೀಯ ಕಾಲೇಜನ್ನು ರಾಜ್ಯವ್ಯಾಪಿ ಕಾಲೇಜುಗಳ ಪಟ್ಟಿಯಲ್ಲಿ ಸೇರಿಸಿರುವುದರಿಂದ ಹಿಂದುಳಿದ ಭಾಗದ ವಿದ್ಯಾರ್ಥಿಗಳ ಪ್ರವೇಶಕ್ಕೆ ಆದ್ಯತೆ ಸಿಗುತ್ತಿರುವುದು ಅಷ್ಟಕ್ಕಷ್ಟೆ. ಇನ್ನು ಹೈ.ಕ.ದ ಭಾಗದಲ್ಲಿ ಒಟ್ಟು ಐದು ವಿಶ್ವವಿದ್ಯಾಲಯಗಳಿದ್ದು, ಅವುಗಳ ಪೈಕಿ ಗುಲಬರ್ಗಾ ವಿ.ವಿ., ಶ್ರೀ ಕೃಷ್ಣದೇವರಾಯ ವಿ.ವಿ.ಗಳು ಮಾತ್ರ ಸ್ಥಳೀಯ ವಿ.ವಿ.ಗಳ ಪಟ್ಟಿಯಲ್ಲಿವೆ. ಉಳಿದಂತೆ ಹಂಪಿ ಕನ್ನಡ ವಿ.ವಿ., ಪಶು ವೈದ್ಯಕೀಯ ವಿ.ವಿ. ಹಾಗೂ ಕರ್ನಾಟಕ ಕೇಂದ್ರೀಯ ವಿ.ವಿ.ಗಳನ್ನು ರಾಜ್ಯವ್ಯಾಪಿ ವಿ.ವಿ.ಗಳ ಪಟ್ಟಿಗೆ ಸೇರಿಸಲಾಗಿದೆ. ಈ ಭಾಗದಲ್ಲಿಯೇ ಇದ್ದರೂ ಈ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ಪಡೆಯಲು ರಾಜ್ಯವ್ಯಾಪಿ ವಿದ್ಯಾರ್ಥಿಗಳ ಜೊತೆ ಪೈಪೋಟಿ ನಡೆಸಬೇಕು. ಸ್ಥಳೀಯ ವಿದ್ಯಾರ್ಥಿಗಳಿಗೆ ನೀಡಿರುವ ಮೀಸಲಾತಿಗೇ ತೃಪ್ತಿಪಟ್ಟುಕೊಳ್ಳಬೇಕು. ಇವು ಶೈಕ್ಷಣಿಕ ಮೀಸಲಾತಿಗೆ ಸಂಬಂಧಿಸಿದ ಸಂಕಷ್ಟಗಳ ಕೆಲ ಸ್ಯಾಂಪಲ್‌ಗಳು, ಅಷ್ಟೆ.

ಸಂವಿಧಾನಕ್ಕೆ ತಿದ್ದುಪಡಿ ತಂದ ನಂತರ ಹೆಚ್ಚಿನ ಅನುದಾನ ನೀಡುವ ಮೂಲಕ ಹೈದರಾಬಾದ್ ಕರ್ನಾಟಕವನ್ನು ಇತರೆ ಭಾಗದ ಅಭಿವೃದ್ಧಿಯ ಮಟ್ಟಕ್ಕೆ ಕೊಂಡೊಯ್ಯಬೇಕೆಂಬುದು ಸರ್ಕಾರದ ಗುರಿ. ನಂಜುಂಡಪ್ಪ ವರದಿ ಅನ್ವಯ ಹೈ.ಕ. ಭಾಗದ ೩೧ ತಾಲೂಕುಗಳ ಪೈಕಿ ಒಂದಿಷ್ಟು ಅಭಿವೃದ್ಧಿಹೊಂದಿದ ತಾಲೂಕುಗಳು ಕೇವಲ ಮೂರು. ಉಳಿದವು ಹಿಂದುಳಿದ, ಅತಿ ಹಿಂದುಳಿದ ಮತ್ತು ಅತ್ಯಂತ ಹಿಂದುಳಿದ ತಾಲೂಕುಗಳ ಪಟ್ಟಿಗೆ ಸೇರಿವೆ. ಅದರಲ್ಲಿಯೂ ೨೧ ತಾಲೂಕುಗಳು ಅತ್ಯಂತ ಹಿಂದುಳಿದ ಪಟ್ಟಿಗೆ ಸೇರಿವೆ. ಹೀಗಾಗಿ ಸಂವಿಧಾನಕ್ಕೆ ತಿದ್ದುಪಡಿಯಾದ ನಂತರ ಈ ಭಾಗದ ಅಭಿವೃದ್ಧಿಗೆ ವಿಶೇಷ ಅನುದಾನ ನೀಡಲು ರಾಜ್ಯ ಸರ್ಕಾರ ಮುಂದಾಗಿದೆ. ಈ ಭಾಗದ ಕೃಷಿ, ನೀರಾವರಿ, ಕೈಗಾರಿಕೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ಶೈಕ್ಷಣಿಕ ಪ್ರಗತಿ ಇತ್ಯಾದಿಗಳ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡುವ ಸಂಕಲ್ಪ ಕೈಗೊಂಡಿದೆ. ಪ್ರತಿ ವರ್ಷ ಒಂದು ಸಾವಿರ ಕೋಟಿ ರೂಪಾಯಿ ವಿಶೇಷ ಅನುದಾನ ನೀಡುವುದಾಗಿ ರಾಜ್ಯ ಸರ್ಕಾರ ಪ್ರಕಟಿಸಿದೆ.

ವಿಶೇಷ ಸ್ಥಾನಮಾನ ಸಿಕ್ಕಿದ ನಂತರ ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ (ಎಚ್.ಕೆ.ಡಿ.ಬಿ.) ಈಗ ಹೈದರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಎಚ್.ಕೆ.ಆರ್.ಡಿ.ಬಿ)ಯಾಗಿ ಮಾರ್ಪಟ್ಟಿದೆ. ಅನುದಾನದ ಪ್ರಮಾಣದಲ್ಲಿಯೂ ಹೆಚ್ಚಳವಾಗಿದೆ. ೨೦೧೩–೧೪ನೇ ಸಾಲಿನಿಂದ ೨೦೧೬–೧೭ನೇ ಸಾಲಿನವರೆಗೆ ಮಂಡಳಿಗೆ ೩೦೧೨ ಕೋಟಿ ರೂಪಾಯಿ ಅನುದಾನ ನಿಗದಿಪಡಿಸಲಾಗಿದೆ. ಈ ಪೈಕಿ ೨೦೧೬ರ ಜುಲೈ ಮಾಸಾಂತ್ಯದವರೆಗೆ ೧೩೩೦ ಕೋಟಿ

## ಮೈಲಿಗಲ್ಲು

ಬಹಳ ದಿನಗಳ ಹಿಂದೆ
ಆ ಪಟ್ಟಣ
ಇಷ್ಟು ದೂರ ಇದೆ
ಎಂದು
ಎದೆಯ ಮೇಲೆ ಬರೆದುಕೊಂಡು ಹೇಳುತ್ತಿದ್ದೆ
ಈಗ
ಪಟ್ಟಣ ನನ್ನ ಬೆನ್ನು ದೂಡುತ್ತಿದೆ
ಎದೆಯ ಮೇಲಿನ ಅಂಕಿ ಬದಲಾಗಿಲ್ಲ...!

**ಮಹಾಲಿಂಗ ಪೋಳ**
ಕನ್ನಡ ಉಪನ್ಯಾಸಕರು, ಬಾಗಲಕೋಟ ಜಿ॥

## ಹೈದರಾಬಾದ್ ಕರ್ನಾಟಕದ ಸ್ಥಿತಿಗತಿ : ಅಂಕಿ-ಅಂಶಗಳು

೧. ಹೈದರಾಬಾದ್ ಕರ್ನಾಟಕದಲ್ಲಿ ಖಾಲಿ ಇರುವ ಹುದ್ದೆಗಳ ಜಿಲ್ಲಾವಾರು ಮಾಹಿತಿ...

| ಜಿಲ್ಲೆ | ಖಾಲಿ ಇರುವ ಹುದ್ದೆಗಳು |
|---|---|
| ಬೀದರ್ | ೩೯೦೪ |
| ಕಲಬುರಗಿ | ೬೭೯೮ |
| ಯಾದಗಿರಿ | ೩೯೫೦ |
| ರಾಯಚೂರು | ೬೫೫೮ |
| ಕೊಪ್ಪಳ | ೪೦೩೮ |
| ಬಳ್ಳಾರಿ | ೪೯೫೪ |
| **ಒಟ್ಟು** | **೩೦,೧೭೪** |

೨. ಕಲಂ ೩೭೧ (ಜೆ) ತಿದ್ದುಪಡಿ ನಂತರ ಹೈ. ಕ. ಪ್ರದೇಶಾಭಿವೃದ್ಧಿ ಮಂಡಳಿಗೆ (೨೦೧೬ರ ಜುಲೈ ಅಂತ್ಯದವರೆಗೆ) ಬಿಡುಗಡೆಯಾದ ಅನುದಾನ (ಕೋಟಿ ರೂಪಾಯಿಗಳಲ್ಲಿ)

| ಆರ್ಥಿಕ ವರ್ಷ | ನಿಗದಿಯಾದ ಅನುದಾನ | ಬಿಡುಗಡೆ | ಖರ್ಚು |
|---|---|---|---|
| ೨೦೧೩-೧೪ | ೧೫೦ | ೩೦ | ೦೦೦ |
| ೨೦೧೪-೧೫ | ೮೬೨ | ೩೦೦ | ೧೨೩.೩೫ |
| ೨೦೧೫-೧೬ | ೧೦೦೦ | ೭೫೦ | ೩೮೮.೮೦ |
| ೨೦೧೬-೧೭ | ೧೦೦೦ | ೨೫೦ | ೬೮.೧೩ |
| **ಒಟ್ಟು** | **೩೦೧೨** | **೧೩೩೦** | **೫೮೦.೨೮** |

೩. ಹೈದರಾಬಾದ್ ಕರ್ನಾಟಕದ ಸಾಕ್ಷರತೆ ಪ್ರಮಾಣ :

| | ೨೦೦೧ರಲ್ಲಿ | ೨೦೧೧ರಲ್ಲಿ |
|---|---|---|
| ಕರ್ನಾಟಕ | ಶೇ. ೬೬.೬೪ | ಶೇ. ೭೫.೩೬ |
| ಹೈ.ಕರ್ನಾಟಕ | ಶೇ. ೫೩.೬೪ | ಶೇ. ೬೪.೫೮ |

೪. ಶಾಲೆಯಿಂದ ಹೊರಗುಳಿದ ಮಕ್ಕಳ ಶೇಕಡಾವಾರು ಪ್ರಮಾಣ...
(೨೦೦೪-೦೫ರಿಂದ ೨೦೦೯-೧೦ರಲ್ಲಿನ ೧ನೇ ತರಗತಿಯಿಂದ ೧೦ನೇ ತರಗತಿವರೆಗಿನ ಅಂಕಿ ಅಂಶಗಳು)
ಕರ್ನಾಟಕ ಶೇ. ೩೪.೨೪ (೩೮೮೫೨೫)
ಹೈದರಾಬಾದ್ ಕರ್ನಾಟಕ ಶೇ. ೫೨.೫೯ (೧೨೬೯೪೮)

೫. ಹೈದರಾಬಾದ್ ಕರ್ನಾಟಕದಲ್ಲಿ ಮುಚ್ಚುವ ಭೀತಿಯಲ್ಲಿರುವ ಶಾಲೆಗಳ ವಿವರ...
೧೦ಕ್ಕಿಂತ ಕಡಿಮೆ ಮಕ್ಕಳಿರುವ ಪ್ರಾಥಮಿಕ ಶಾಲೆಗಳು - ೧೩೮.
೧೦ಕ್ಕೂ ಮೇಲ್ಪಟ್ಟು ೨೦ಕ್ಕಿಂತ ಕಡಿಮೆ ಮಕ್ಕಳಿರುವ ಪ್ರಾಥಮಿಕ ಶಾಲೆಗಳು - ೪೬೯.
೧೦ಕ್ಕಿಂತ ಕಡಿಮೆ ಮಕ್ಕಳಿರುವ ಪ್ರೌಢಶಾಲೆಗಳು - ೨೯
೧೦ಕ್ಕೂ ಮೇಲ್ಪಟ್ಟು ೨೦ಕ್ಕಿಂತ ಕಡಿಮೆ ಮಕ್ಕಳಿರುವ ಪ್ರೌಢಶಾಲೆಗಳು - ೪೨.

ರೂಪಾಯಿ ಬಿಡುಗಡೆಗೊಂಡಿದೆ. ಆದರೆ ಖರ್ಚಾದ ಹಣ ಮಾತ್ರ ಕೇವಲ ೫೮೦ ಕೋಟಿ ರೂಪಾಯಿಗಳು. ಸರ್ಕಾರ ಬಜೆಟ್‌ನಲ್ಲಿ ನಿಗದಿಗೊಳಿಸಿದ ಮೊತ್ತದಲ್ಲಿ ಅರ್ಧದಷ್ಟು ದುಡ್ಡನ್ನೂ ಬಿಡುಗಡೆ ಮಾಡಿಲ್ಲ. ಇನ್ನು ಆ ಹಣದಲ್ಲಿ ಅರ್ಧದಷ್ಟು ಹಣವನ್ನೂ ಖರ್ಚು ಮಾಡಲಾಗದೆ ಬಾಕಿ ಉಳಿಸಿಕೊಂಡಿರುವುದು ದುರಂತವೇ ಸರಿ. ಮಂಡಳಿಗೆಂದು ಬಜೆಟ್‌ನಲ್ಲಿ ನಿಗದಿಗೊಳಿಸಿದ ಹಣ ಲ್ಯಾಪ್ಸ್ ಆಗುವುದಿಲ್ಲ, ಕ್ಯಾರಿಫಾರ್ವರ್ಡ್ ಆಗುತ್ತದೆಂದು ರಾಜ್ಯ ಸರ್ಕಾರ ಹೇಳುತ್ತಿದೆಯಾದರೂ ಯೋಜನೆ ಅನುಷ್ಠಾನದಲ್ಲಿ ವಿಳಂಬವಾದಷ್ಟೂ ಅಂದಾಜು ವೆಚ್ಚ ಏರುತ್ತಲೇ ಸಾಗುತ್ತದೆಂಬುದು ಸುಸ್ಪಷ್ಟ.

ಮಂಡಳಿಗೆ ಬಿಡುಗಡೆಗೊಂಡ ಹಣ ಖರ್ಚಾಗದಿರಲು ಮುಖ್ಯ ಕಾರಣ ಈ ಭಾಗದ ಶಾಸಕರು ಪ್ರಸ್ತಾವನೆಗಳನ್ನು ಸಲ್ಲಿಸುವಲ್ಲಿ ವಿಳಂಬ ಮಾಡುತ್ತಿದ್ದಾರೆಂಬುದು ಒಂದೆಡೆಯಾದರೆ, ಹೈ.ಕ. ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿನ ಸಿಬ್ಬಂದಿ ಕೊರತೆ ಮತ್ತೊಂದೆಡೆ. ದೀಪದ ಕೆಳಗೆ ಕತ್ತಲು ಎನ್ನುವಂತೆ ಹಿಂದುಳಿದ ಭಾಗದ ಸಮಗ್ರ ಅಭಿವೃದ್ಧಿಯ ನೊಗ ಹೊತ್ತ ಮಂಡಳಿಯೇ ಸಿಬ್ಬಂದಿ ಕೊರತೆಯಿಂದ ನಲುಗುತ್ತಿದೆ. ಮಂಡಳಿಯಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ೮೩. ಈ ಪೈಕಿ ೩೮ ಹುದ್ದೆಗಳು ಖಾಲಿ ಇವೆ. ಸದ್ಯ ಭರ್ತಿಯಾದ ೪೫ ಹುದ್ದೆಗಳ ಪೈಕಿ ೧೨ ಚಾಲಕರು ಸೇರಿದಂತೆ 'ಡಿ' ಗ್ರೂಪ್ ನೌಕರರ ಸಂಖ್ಯೆ ಸುಮಾರು ೩೦. ಪ್ರಮುಖ ಹುದ್ದೆಗಳಾದ ಹಣಕಾಸು ನಿಯಂತ್ರಕರು, ಅಧೀಕ್ಷಕ ಅಭಿಯಂತರರು, ಕಾರ್ಯನಿರ್ವಾಹಕ ಅಭಿಯಂತರರ ಹುದ್ದೆಯೂ ಸೇರಿದಂತೆ ಪ್ರಮುಖ ಹುದ್ದೆಗಳೇ ಖಾಲಿ ಇವೆ. ಮಂಡಳಿಯಲ್ಲಿ ಇರುವುದು ಓರ್ವ ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು ಮಾತ್ರ ಎಂದರೆ ಅಚ್ಚರಿಯಾಗುತ್ತದಲ್ಲವೆ ? ಸಾವಿರಾರು ಕೋಟಿ ರೂಪಾಯಿಗಳ ಅನುದಾನ ಬಂದರೂ ಅದಕ್ಕೆ ತಕ್ಕಂತೆ ಯೋಜನೆ ರೂಪಿಸಿ ಅನುಷ್ಠಾನಕ್ಕೆ ತರಬೇಕಾದ ಪ್ರಮುಖ ಹುದ್ದೆಗಳೇ ಖಾಲಿ ಇರಬೇಕಾದರೆ ಅಭಿವೃದ್ಧಿ ಆಗುವುದಾದರೂ ಹೇಗೆ ?

೨೦೧೧ರ ಗಣತಿಯ ಪ್ರಕಾರ ರಾಜ್ಯದ ಸಾಕ್ಷರತೆ ಪ್ರಮಾಣ ಶೇ. ೭೫.೩೬ ಇದ್ದರೆ, ಹೈದರಾಬಾದ್ ಕರ್ನಾಟಕದ ಪ್ರಮಾಣ ಶೇ. ೬೪.೫೮ರಷ್ಟಿದೆ. ಅಂದರೆ, ೨೦೦೧ರಲ್ಲಿ ರಾಜ್ಯದ ಸಾಕ್ಷರತೆ ಪ್ರಮಾಣದ (ಶೇ. ೬೬.೬೪ರಷ್ಟು) ಸರಾಸರಿಗೆ ತಲುಪುವಲ್ಲಿಯೂ ಹೈ.ಕ. ಭಾಗ ವಿಫಲವಾಗಿದೆ. ಶಿಕ್ಷಕರ ಕೊರತೆಯ ಜೊತೆಗೆ ಶಾಲೆಯಿಂದ ಹೊರಗುಳಿಯುವ ಮಕ್ಕಳ ಸಂಖ್ಯೆ ಹೆಚ್ಚಳವೂ ಇದಕ್ಕೆ ಮುಖ್ಯ ಕಾರಣ. ಹೈ.ಕ. ಭಾಗದಲ್ಲಿ ೨೦೦೪-೦೫ರಿಂದ ೨೦೦೯-೧೦ನೇ ಸಾಲಿನವರೆಗೆ ಒಂದರಿಂದ ೧೦ನೇ ತರಗತಿಯೊಳಗೆ ಶಾಲೆಯಿಂದ ಹೊರಗುಳಿದ ಮಕ್ಕಳ ಪ್ರಮಾಣ ಶೇ. ೫೨.೫೯ರಷ್ಟು. ಎಷ್ಟೇ ಸರ್ಕಸ್ ಮಾಡಿದರೂ ಶೈಕ್ಷಣಿಕವಾಗಿ ಈ ಭಾಗ ನಿರೀಕ್ಷಿತ ಗುರಿ ಸಾಧಿಸುತ್ತಿಲ್ಲ. ಎಸ್.ಎಸ್.ಎಲ್.ಸಿ. ಮತ್ತು ಪಿಯುಸಿ ಫಲಿತಾಂಶಗಳು ಪ್ರಕಟಗೊಂಡಾಗ ಈ ಭಾಗದ ಜಿಲ್ಲೆಗಳೇ ಕೊನೆಯ ಸ್ಥಾನಗಳನ್ನು ಅಲಂಕರಿಸಿರುತ್ತವೆ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿಯೂ ಹೈ.ಕ. ಭಾಗ ಕೊನೆಯ ಸ್ಥಾನದಲ್ಲಿದೆ.

ಇತ್ತೀಚಿನ ಜನಗಣತಿಯ ಅಂಕಿ-ಅಂಶಗಳ ಪ್ರಕಾರ ಹೈ.ಕ. ಭಾಗದಲ್ಲಿ ಎಸ್.ಸಿ. ಮತ್ತು ಎಸ್.ಟಿ.ಗಳ ಪ್ರಮಾಣ ಶೇ. ೩೫.೦೩ರಷ್ಟಿದೆ. ಈ ಭಾಗದ ಬಳ್ಳಾರಿ ಜಿಲ್ಲೆಯನ್ನು ಹೊರತುಪಡಿಸಿದರೆ ಶೇ. ೪೦ಕ್ಕಿಂತಲೂ ಹೆಚ್ಚು ಜನ ಬಡತನ ರೇಖೆಗಿಂತ ಕೆಳಗಿದ್ದಾರೆ. ಈ ಭಾಗದಲ್ಲಿ ಬಡತನ ಹಾಸಿಗೆ ಹಾಸಿಕೊಂಡು ಹೊದ್ದು ಮಲಗುವಷ್ಟಿದೆ. ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ...ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಈ ಭಾಗ ಹಿಂದುಳಿದಿದೆ. ಬಡತನ, ದಾರಿದ್ರ್ಯ, ಮೌಢ್ಯ, ಕಂದಾಚರಣೆಗಳಲ್ಲಿ ಮಾತ್ರ ಸದಾ ಮುಂದಿದೆ.

ಒಟ್ಟಾರೆ, ಹೈದರಾಬಾದ್ ಕರ್ನಾಟಕ ಹಿಂದುಳಿದ ಹಣೆಪಟ್ಟಿ ಕಳಚಿಕೊಳ್ಳಲು ಇನ್ನಿಲ್ಲದ ಕಸರತ್ತು ನಡೆಸಿದೆ. ಸಂವಿಧಾನದ ೩೭೧ (ಜೆ) ಕಲಂಗೆ ತಿದ್ದುಪಡಿ ತಂದ ಸಂಭ್ರಮ ಮರೆಯಾಗುವ ಮುನ್ನವೇ ಅದರ ಬಗ್ಗೆ ಅಪಸ್ವರಗಳೆದ್ದಿವೆ. ವಿಶೇಷ ಸ್ಥಾನಮಾನ ನಿರೀಕ್ಷಿತ ಫಲ ಕೊಡುತ್ತಿಲ್ಲ ಎಂಬ ದೂರುಗಳು ಕೇಳಿಬರುತ್ತಿವೆ. ಕಲಂ ೩೭೧ (ಜೆ)ಯನ್ನು ಸಮರ್ಪಕವಾಗಿ ಅನುಷ್ಠಾನಕ್ಕೆ ತರುವಂತೆ ಹೋರಾಟಗಳು ಪ್ರಾರಂಭಗೊಂಡಿವೆ. ಅದರ ಜೊತೆ ಜೊತೆಗೇ ಪ್ರತ್ಯೇಕ ರಾಜ್ಯದ ಕೂಗೂ ಎದ್ದಿದೆ. ಪ್ರತ್ಯೇಕ ರಾಜ್ಯವೊಂದೇ ತಮ್ಮ ಮುಂದಿನ ದಾರಿಯೆಂದು ಕೆಲ ಸಂಘಟನೆಗಳು ಹೋರಾಟ ಪ್ರಾರಂಭಿಸಿವೆ. ಇವೆಲ್ಲಕ್ಕೂ ಪೂರ್ಣ ವಿರಾಮ ಬೀಳಬೇಕೆಂದರೆ ರಾಜ್ಯ ಸರ್ಕಾರ ಇಚ್ಛಾ ಶಕ್ತಿ ಪ್ರದರ್ಶಿಸಬೇಕಿದೆ. ಈ ಭಾಗದ ಜನಪ್ರತಿನಿಧಿಗಳು ತಮ್ಮ ಬದ್ಧತೆ ತೋರಿಸಬೇಕಿದೆ. ಅದರ ಜೊತೆಗೆ ಕೇಂದ್ರ ಸರ್ಕಾರವೂ ಈ ಭಾಗಕ್ಕೆ ಹೆಚ್ಚಿನ ನೆರವು ನೀಡಿ ಸಹೃದಯತೆ ಮೆರೆಯಬೇಕಿದೆ. ಹಾಗಾದಾಗ ಮಾತ್ರ ವಿಶೇಷ ಸ್ಥಾನಮಾನಕ್ಕೆ ಅರ್ಥ ಬರಲಿದೆ.

**ಡಾ॥ ಶಿವರಾಮ ಅಸುಂಡಿ**
'ಶ್ರೀನಿಕೇತನ', ಹನುಮಾನ ಮಂದಿರದ ಎದುರು
ವಿಠಲ ನಗರ, ಕಲಬುರಗಿ - ೫೮೫ ೧೦೩

# ಮೆಲ್ಬರ್ನ್ ಚೆಲುವೆಯರು

ಒಂದು ಮಾತನ್ನು ಮೊದಲೇ ಹೇಳಿಬಿಡುತ್ತೇನೆ. ಮೆಲ್ಬರ್ನಿನ ಬಹುತೇಕ ಮಹಿಳೆಯರು ಬಲು ಚೆಲುವೆಯರು. ಅವರೆಲ್ಲರೂ ಬಹಳ ಬೆಳ್ಳಗಿದ್ದಾರೆಂದು ನಾನು ಹೀಗೆ ಹೇಳುತ್ತಿದ್ದೇನೆಂದು ಯಾರೂ ಭಾವಿಸಬಾರದು. ಬಿಳುಪು ಎಂಬುದು ಸೌಂದರ್ಯ ಅಲ್ಲ. ಸೌಂದರ್ಯವೇ ಬೇರೆ. ಮುಖದ ಕಳೆ, ಶರೀರ ವಿನ್ಯಾಸ, ಕಣ್ಣಗಳ ಕಾಂತಿ – ಇವೆಲ್ಲವುಗಳ ಒಂದು ಒಟ್ಟಂದ ಅದು. ಇದನ್ನವರು ಸಹಜವಾಗಿ ಪಡೆದುಕೊಂಡಿದ್ದಾರೆ.

ಇವೆಲ್ಲ ದೈಹಿಕ ಸೌಂದರ್ಯದ ಮಾತಾಯಿತು. ನಮ್ಮ ಚೆಲುವೆಂಬುದು ಪರಿಪೂರ್ಣವಾಗಬೇಕಾದರೆ, ಅಲ್ಲೊಂದು ಆಂತರಂಗಿಕ ಸೌಂದರ್ಯವೂ ಇರಲೇಬೇಕು. ಜೀವನೋತ್ಸಾಹ, ಕ್ರಿಯಾಶೀಲತೆ, ಸ್ನೇಹಪರತೆ – ಮುಂತಾದುವು ಮಹಿಳೆಯೊಬ್ಬಳ ಅಂತರಂಗ ಸೌಂದರ್ಯ. ಇದನ್ನು ಕೂಡ ಮೆಲ್ಬರ್ನ್ ರಮಣಿಯರು ಯಥೇಚ್ಛವಾಗಿಯೇ ಹೊಂದಿದ್ದಾರೆ.

ಆಸ್ಟ್ರೇಲಿಯನ್ ತರುಣಿಯರು ಬಲು ದೃಢಕಾಯರು, ಧೈರ್ಯಶಾಲಿಗಳು ಮತ್ತು ಸಾಹಸಿಗಳು. ಕೃತ್ರಿಮ ಇವರಲ್ಲಿ ಕಂಡುಬರುವುದಿಲ್ಲ. ಮೆಲ್ಬರ್ನಿನಲ್ಲಿ ಹವಾಮಾನ ವೈಪರೀತ್ಯ ಹೆಚ್ಚು. ಆದರೆ ಇಲ್ಲಿನ ಚಳಿ ಮಳೆ ಬಿಸಿಲು ಗಾಳಿಗಳಿಗೆ ಇವರಾರೂ ಹೆದರುವುದಿಲ್ಲ. ಉಲ್ಲಸಿತರಾಗಿ ನಗರದ ತುಂಬ ಸುತ್ತಾಡುತ್ತಾ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ. ಕೆಲವೊಮ್ಮೆ ಐದಾರು ದಿನ ಮೋಡ ಮುಸುಕಿದ್ದು, ಸೂರ್ಯನ ದರ್ಶನವೇ ಇರುವುದಿಲ್ಲ. ಒಂದೊಮ್ಮೆ ಸೂರ್ಯ ಹೊಳೆದು ಬಿಸಿಲಿನ ಮುಖ ಕಾಣುತ್ತಿದ್ದಂತೆ, ತಲೆ ಮೇಲೆ ದೋಣಿ ಕವುಚಿಕೊಂಡು ಸಮುದ್ರತೀರಕ್ಕೆ ಓಡುತ್ತಾರೆ. ನದೀ ತೀರದಲ್ಲಿ, ಪಾರ್ಕುಗಳಲ್ಲಿ, ರಸ್ತೆಗಳಲ್ಲಿ ಓಡುತ್ತಾರೆ. ಓಡುತ್ತಲೇ ಇರುತ್ತಾರೆ. ಅದನ್ನು ನೋಡುವುದೇ ಒಂದು ಸಂತೋಷ. ಹಾಗೆಯೇ ಸೈಕ್ಲಿಂಗ್–ಸ್ಕೇಟಿಂಗ್‌ಗಳಲ್ಲೂ ಅತ್ಯುತ್ಸಾಹದಿಂದ ತೊಡಗಿಕೊಳ್ಳುತ್ತಾರೆ. ಈಜುವುದೂ ಹಾಗೆಯೇ... ಅವರಿಗೊಂದು ಸಂಭ್ರಮದ ಕಾಯಕ. ಹಾಗೆ ನೋಡಿದರೆ ಇಲ್ಲಿ ಪುಟ್ಟ ಮಕ್ಕಳಿಗೆ ಈಜು ಕಲಿಸುವವರು ಅಮ್ಮಂದಿರಿಗಿಂತ ಹೆಚ್ಚಾಗಿ ಅಜ್ಜಿಯರೇ ! ತರುಣಿಯರದೇ ಉತ್ಸಾಹ ಅವರದೂ ಕೂಡ.

ಈ ನಗರ ತುಂಬ ಸುಂದರವಾಗಿದೆ ಮತ್ತು ಅಷ್ಟೇ ಸ್ವಚ್ಛವಾಗಿದೆ. ಯಾರು ಎಲ್ಲಿ ಬೇಕಾದರೂ ಸಂತೋಷವಾಗಿ ಕೂತುಕೊಳ್ಳಬಹುದು. ಹಾಗಾಗಿ ಸಾಲು ಮರಗಳ ಕಿರು ನೆರಳಿನಲ್ಲಿಯೋ, ಹುಲ್ಲುಗಾವಲಿನ ಮಧ್ಯದ ಸುಂದರ ಬಂಡೆಗಳಿಗೆ ಒರಗಿಯೋ, ಪ್ರಾಯದ ಹೆಂಗಳೆಯರು ಕಾಲುಚಾಚಿ ಕೂತು ತಲೆ ಬಾಚಿಕೊಳ್ಳುತ್ತಿರುವುದೋ, ಮುಖಾಲಂಕಾರ ಮಾಡಿಕೊಳ್ಳುತ್ತಿರುವುದೋ... ಸಾಮಾನ್ಯ ದೃಶ್ಯ. ನಗರದ ಹೃದಯ ಭಾಗಗಳಲ್ಲೂ ಹುಡುಗಿಯರು ಹೀಗೆ ಅಲಂಕಾರ ಮಗ್ನರಾಗಿರುವುದನ್ನು ನಾನು ಕಂಡೆ. ಯಾರೂ ಅವರನ್ನು ದಿಟ್ಟಿಸುವುದಿಲ್ಲ. ಅವರವರ ಪಾಡಿಗೆ ಅವರವರು ಅಷ್ಟೆ. ಇದೆಲ್ಲ ಹೋಗಲಿ, ಸ್ವಾನ್‌ಸ್ಟನ್ ರಸ್ತೆಯ ಫುಟ್‌ಪಾತಿನಲ್ಲಿ ಅಲ್ಲಲ್ಲೇ ಕಾಲು ಚಾಚಿ ಕೂತು ಮೋಜಾಗಿ ಸಿಗರೇಟು ಸೇದುವ ಷೋಕಿ ಮುದುಕಿಯರನ್ನೂ ನಾನು ಕಂಡೆನಪ್ಪ !

ಈ ಹೆಣ್ಣುಮಕ್ಕಳು ಸಹಜವಾಗಿ ಸರಸಿಗಳು ಮತ್ತು ಸ್ನೇಹಪರರು ಎಂದು ಹೇಳಿದೆನಲ್ಲ ! ಇಲ್ಲಿ ಕೇಳಿ ಒಂದು ಉದಾಹರಣೆ. ವುಲ್‌ವರ್ತ್ಸ್ ಎಂಬುದು ಊರತುಂಬ ಅಲ್ಲಲ್ಲೆ ಕಂಡುಬರುವ ಪ್ರತಿಷ್ಠಿತ ಮಳಿಗೆ. ಹೂವು ಹಣ್ಣು ದಿನಸಿ ತರಕಾರಿ – ಎಲ್ಲವೂ ಇಲ್ಲಿ ಚೊಕ್ಕವಾಗಿ ಲಭ್ಯ. ನಾನೊಮ್ಮೆ ಆ ಒಪ್ಪ–ಓರಣಗಳನ್ನು ಫೋಟೋ ತೆಗೆಯುತ್ತಿದ್ದೆ. ನೀಲಿಬಣ್ಣದ ಸ್ಕರ್ಟ್–ಕೋಟುಗಳನ್ನು ಧರಿಸಿದ್ದ, ಒಪ್ಪವಾದ ದಟ್ಟಗೂದಲಿನ ಒಬ್ಬಾಕೆ ಅಲ್ಲಿಗೆ ಓಡಿಬಂದಳು. "ಯಾಕೆ ಫೋಟೋ ತೆಗೆಯುತ್ತಿದ್ದೀ ?" ಅಂತ ಕೇಳಿದಳು. ನಾನು ಅನ್ಯಥಾ ಭಾವಿಸಬಾರದೆಂದು "ನಾನು ಇಲ್ಲಿನ ಮ್ಯಾನೇಜರ್" ಅಂತಲೂ ಸೇರಿಸಿದಳು. ನಾನು ಹೀಗೆ ಹೀಗೆ ಕಣಮ್ಮ ನಿಮ್ಮೂರಿನ ಬಗ್ಗೆ ಒಂದು ಪುಸ್ತಕ ಬರೀತಾ ಇದೀನಿ ಅದರಲ್ಲಿ ಒಳ್ಳೊಳ್ಳೆ ಫೋಟೋ ಹಾಕೋಣ ಅಂತ ಅಷ್ಟೇ" ಎಂದೆಲ್ಲ ವಿವರಿಸಿದೆ. ಆನಂದದಿಂದ ಅವಳ ಮೊಗ

ಹಣ್ಣು ಹಣ್ಣು ವೃದ್ಧೆಯರು ಪ್ಯಾಂಟು–ಅಂಗಿ ಮಡಿಸಿಕೊಂಡು ಮನೆಮುಂದೆ ಏಣಿ ಮೇಲೆ ನಿಂತು ರಿಪೇರಿ ಕೆಲಸ ಮಾಡುವುದನ್ನೋ, ಅಂಗಳದ ತೋಟದಲ್ಲಿ ಯಂತ್ರದಿಂದ ಹುಲ್ಲು ಕತ್ತರಿಸುವುದನ್ನೋ ನೋಡುವುದು ಆಹ್ಲಾದಕರ ದೃಶ್ಯ. ವಯಸ್ಸಾಗುವುದು ದೌರ್ಬಲ್ಯವೂ ಅಲ್ಲ, ಹೀನಾಯವೂ ಅಲ್ಲ ಎಂಬಂತೆ ಇವರ ನಿಲುವು. ಯಾಕೆ ಬದುಕಬೇಕೆಂದು ಚಿಂತಿಸುವುದಿಲ್ಲ. ಹೇಗೆ ಬದುಕಬೇಕೆಂದು ಶ್ರಮಿಸುತ್ತಾರೆ. ಮುಖದ ಮೇಲೆ ಅಸಹಾಯಕತೆ ಪ್ರದರ್ಶಿಸುವುದಿಲ್ಲ. ಬದಲಿಗೆ ಅಲ್ಲಿರುವುದು ಅಸೀಮ ಆತ್ಮವಿಶ್ವಾಸ.

ಮೊರದಗಲವಾಯ್ತು. ಶುಭಾಶಯ ಹೇಳಿದಳು. ಆಮೇಲೆ ತುಂಟತನದಿಂದ ನಕ್ಕು "ನನ್ನ ಫೋಟೋ ಎಷ್ಟು ಬೇಕಾದ್ರೂ ತೆಗೆದುಕೋ... ಆದ್ರೆ ಹುಶಾರು, ಗಂಡಸರ ಫೋಟೋ ಮಾತ್ರ ತೆಗೀಬೇಡ" ಎನ್ನುತ್ತ ಕಣ್ಣು ಮಿಟುಕಿಸಿ ನಕ್ಕಳು. ಮಧ್ಯವಯಸ್ಕಳು ಆಕೆ. ಬಲು ಮುದ್ದಾಗಿದ್ದಳು.

ನೀವೇನೇ ಹೇಳಿ... ಬಲು ಲಾವಣ್ಯವತಿಯರಪ್ಪ ಈ ಮೆಲ್ಬರ್ನ್ ಬೆಡಗಿಯರು. ಸೊಗಸಾದ ಉಡುಪು ಧರಿಸಿ ಸಿಂಗಾರವಾಗಿ ನಗುತ್ತಾ ಹಿಂದೋಳ-ಮೋಹನ ರಾಗಗಳಲ್ಲಿ ಇಂಗ್ಲಿಷ್ ಪಾಡುತ್ತಾ, ಶರೀರವನ್ನು ಸಭ್ಯನೃತ್ಯ ಭಂಗಿಗಳಲ್ಲಿ ತೊನೆದಾಡಿಸುತ್ತಾ, ಸೌಂದರ್ಯದ ಸಮಗ್ರದರ್ಶನವನ್ನು ಮಾಡಿಸುತ್ತಾ ಇದ್ದರೆ, ಮಹಿಳೆಯಾದ ನನಗೇ ಇಷ್ಟೊಂದು ಆನಂದವಾಗುತ್ತಾ ಇದೆಯಲ್ಲ... ಇನ್ನು ಪುರುಷರ ಪಾಡೇನು ಅಂತ ವಿಸ್ಮಯವಾಯ್ತು. ಬಹುಶಃ ಅವರುಗಳ ಹೃದಯಗಳಲ್ಲಿ ವಿಶ್ವಾಮಿತ್ರ ತಲ್ಲಣಗಳೇ ಏರ್ಪಟ್ಟುಬಿಡಬಹುದು.

ಈ ನಾಡಿನಲ್ಲಿ ಭಿಕ್ಷುಕರಿಲ್ಲ. ಬಾಡಿಗೆ ಮಗುವನ್ನು ಕಂಕುಳಲ್ಲಿ ಇರುಕಿಕೊಂಡು ದುಡ್ಡಿಗಾಗಿ ಪೀಡಿಸುವ ಮಹಿಳೆಯರು, ರಸ್ತೆಬದಿಗಳಲ್ಲಿ ಬಗೆಬಗೆಯಾಗಿ ಕೈಚಾಚುವ, ಅಂಗಲಾಚುವ ವೃದ್ಧೆಯರು ಇಂಥವರನ್ನು ನಾನೆಲ್ಲೂ ನೋಡಲೇ ಇಲ್ಲ. ಕಾರಣ, ಅಲ್ಲಿನ ಆಡಳಿತ ಸುವ್ಯವಸ್ಥೆ. ಬಡಜನರೆಂದು ಪರಿಗಣಿತರಾದವರಿಗೆ ಸರ್ಕಾರವೇ ಎಲ್ಲ ಬಗೆಯ ಸಹಾಯ ಮಾಡುತ್ತದೆ. ಆದರೆ, ಜನರ ಗುಂಪು ಇರುವಲ್ಲಿ ತಮ್ಮಲ್ಲಿರುವ ಕಲೆಯನ್ನು ಪ್ರದರ್ಶಿಸಿ ಹಣ ಗಳಿಸುವ ಕಲಾವಿದರನ್ನು ಅಲ್ಲಲ್ಲೇ ಕಂಡೆ. ನನ್ನನ್ನು ತುಂಬ ಆಕರ್ಷಿಸಿದ ಒಂದು ಅಪೂರ್ವ ದೃಶ್ಯ ಹೀಗಿದೆ:

ಒಮ್ಮೆ ನಾವು ಯಾರಾ ನದಿಯ ಸೇತುವೆಯ ಬಳಿಗೆ ಹೋಗಲೆಂದು ಫ್ಲಿಂಡರ್ಸ್ ಸ್ಟ್ರೀಟ್ ಸ್ಟೇಶನ್ನನ್ನು ಹಾದುಹೋಗುವಾಗ, ಅಲ್ಲಿ ಯುವತಿಯೊಬ್ಬಳು ಕೂತು ವಯೋಲಾ ನುಡಿಸುತ್ತಿದ್ದಳು. ಆ ಹುಡುಗಿಯ ವರ್ಚಸ್ಸಿಗೆ, ಅನುಪಮ ಲಾವಣ್ಯಕ್ಕೆ ನಾನು ಬೆರಗಾಗಿಹೋದೆ. ಏನವಳ ಶುಭ್ರ ಚೆಲುವು, ಏನವಳ ಕಲಾವಂತಿಕೆಯ ಗತ್ತು! ಜಗತ್ತಿನ ಎಲ್ಲ ಶ್ವೇತಕನ್ಯೆಯರ ಬಿಳುಪನ್ನು ಮತ್ತು ಎಲ್ಲ ಅಪ್ಸರೆಯರ ಅಸದೃಶ ಸೌಂದರ್ಯವನ್ನು ಒಟ್ಟಿಗೆ ಒಂದೆಡೆ ಸುರಿದು ನಿರ್ಮಿಸಿದ ಅತ್ಯಮೋಘ ರೂಪರಾಶಿ! ಹಿಮಬಣ್ಣದ್ದೇ ಸುಂದರ ಬಟ್ಟೆಗಳನ್ನು ಮುದ್ದಾಗಿ ಧರಿಸಿ, ಶೀವಿಯಿಂದ ಕೂತು ವಾದ್ಯ ನುಡಿಸುತ್ತಿದ್ದಳು. ನಮ್ಮ ಶಿವರಂಜನಿಯನ್ನು ಹೋಲುವ ಯಾವುದೋ ಮಾರ್ದವ ರಾಗ. ಸ್ವಲ್ಪಹೊತ್ತು ಅಲ್ಲಿಯೇ ನಿಂತು ಆ ನಾದಸುಧೆಯನ್ನು ಆಲಿಸಿದೆವು. ಆಕೆಯ ಮುಂದಿದ್ದ ಡಬ್ಬಿಯಲ್ಲಿ ನನ್ನ ಮಗಳು ಚೆನ್ನು ಡಾಲರು ನಾಣ್ಯ ಹಾಕಿದಳು. ನುಡಿಸುತ್ತಿದ್ದ ಚೆಲುವೆ ಅಂತೆಯೇ ಬಿಂಕದಿಂದ ಮೆಲ್ಲಗೊಮ್ಮೆ ಕತ್ತೆತ್ತಿ 'ಥ್ಯಾಂಕ್ಯೂ' ಅಂದಳು. ಮತ್ತೆ ವಿನಿತೆಯಲ್ಲಿ ಮಗ್ನಳಾದಳು. ಅಲ್ಲಿ ತೋರಿದ್ದು ಕೂಡ ಆತ್ಮಾಭಿಮಾನವೇ! ದೈನ್ಯ ಇನಿತಿಲ್ಲ.

ಎಲ್ಲದರಲ್ಲಿಯೂ ಸರ್ವಸಮಾನತೆಯನ್ನು ಸಾಧಿಸಿರುವ ಈ ಆಸ್ಟ್ರೇಲಿಯನ್ ಲಲನೆಯರು ಕುಡಿತದಲ್ಲಿಯೂ ಪುರುಷರಿಗಿಂತ ಹಿಂದೆ ಬಿದ್ದಿಲ್ಲ.



ಸಾಯಂಕಾಲವಾಗುತ್ತಿದ್ದಂತೆ ನೋಡಬೇಕು ಈ ಸೋಮರಸ ವೈಭವವನ್ನು! ಕುಡಿಕುಡಿದು ತೂರಾಡುತ್ತಾರೆ. ಅಮಲು ಮಿತಿಮೀರಿದಾಗ ರಸ್ತೆಗಳನ್ನೇ ಮನೆಯೆಂದು ಭಾವಿಸಿ ಎದ್ದುಬಿದ್ದು ಉರುಳಾಡುತ್ತಾರೆ. ಪೊಲೀಸಿನವರಿಗೀಗ ಹೆಚ್ಚಿನ ಕೆಲಸ. ಮತ್ತೇರಿದ ವನಿತೆಯರನ್ನು ಸ್ಟೇಶನ್ನಿಗೆ ಕರೆದೊಯ್ದು ಕೂರಿಸುತ್ತಾರೆ. ಮುಖಕ್ಕೆ ನೀರು ಸಿಂಪಡಿಸಿ ಈ ಶೈತ್ಯೋಪಚಾರದಿಂದ ಅವರುಗಳಿಗೆ ಎಚ್ಚರಿಕೆ ಬಂದಮೇಲೆ ಜೋಪಾನವಾಗಿ ಅವರವರ ಮನೆಗಳಿಗೆ ಕಳಿಸುತ್ತಾರೆ.

ಎಲ್ಲ ಸರಿ. ಈ ಗೊಂಬೆಯಂಥ ಮುದ್ದುಹುಡುಗಿಯರು ಇಂಥದೊಂದು ಕಡುಚಳಿಯ ವಾತಾವರಣದಲ್ಲೂ ಇಡೀ ತೊಡೆ ಇಣುಕುವಂಥ ಅತಿ ಚಿಕ್ಕ ಚಡ್ಡಿಗಳನ್ನು ಧರಿಸುವುದೇಕೋ ನನಗಂತೂ ತಿಳಿಯಲಿಲ್ಲ. ಮಗಳನ್ನು ಕೇಳಿದರೆ "ಅಯ್ಯೋ, ಇಲ್ಲಿ ಯಾರೂ ಅದನ್ನೆಲ್ಲ ಗಮನಿಸಲ್ಲ ಅಮ್ಮ. ಎಲ್ಲ ಅವರವರ ಇಷ್ಟ" ಅಂದಳವಳು. ಇನ್ನು ನನ್ನ ಮಾತೇನಿದೆ?

ಕುಡಿತವನ್ನು ಕೂಡ ಪುರುಷರಂತೆ ಲೀಲಾಜಾಲವಾಗಿ ನಿರ್ವಹಿಸುವಂತೆಯೇ ಇಲ್ಲಿನ ಲಲನೆಯರು ಚುಂಬನ ಕಾರ್ಯಕ್ರಮಗಳನ್ನು ಕೂಡ ಮುಕ್ತವಾಗಿ ಆಗಾಗ ಅಲ್ಲಲ್ಲೇ ನೆರವೇರಿಸಿಬಿಡುತ್ತಾರೆ. ನನ್ನನ್ನು ನಂಬಿ; ಕಣ್ಣಾರೆ ಕಂಡದ್ದನ್ನೇ ಯಥಾವತ್ತಾಗಿ ಬಿತ್ತರಿಸುತ್ತೇನೆ. 'ಸೀ ಲೈಫ್' ಎಂಬ ಬೃಹತ್ ಮತ್ಸ್ಯಾಲಯದಲ್ಲಿ ಅತಿ ವಿಶಾಲವಾದ ಗಾಜಿನ ಹಜಾರದಲ್ಲಿ ಹಿಮರಾಶಿಯ ನಡುವೆ ಮುದ್ದು ಪೆಂಗ್ವಿನ್‌ಗಳ ನಲಿದಾಟವನ್ನು ಕಂಡು ಹಿಗ್ಗುತ್ತಿರುವಾಗಲೇ, ಅಲ್ಲೇ ಪಕ್ಕದಲ್ಲಿ ಪ್ರೇಮದೃಶ್ಯವೊಂದು ಕಣ್ಣಿಗೆ ಬಿತ್ತು. ಒಬ್ಬ ಹುಡುಗ ಒಬ್ಬ ಹುಡುಗಿ ಇಬ್ಬರೂ ಮೈಮರೆತು ಎದುರುಬದುರು ನಿಂತಿದ್ದರು. ಸುತ್ತಲ ಪ್ರಪಂಚವನ್ನೇ ಸಂಪೂರ್ಣವಾಗಿ ನಿರ್ಲಕ್ಷಿಸಿ ಪರಸ್ಪರರನ್ನು ದಿಟ್ಟಿಸಿ ಅಲುಗದೆ ನಿಟ್ಟಿಸುತ್ತಿದ್ದರು. ಇದ್ದಕ್ಕಿದ್ದಂತೆ ಈಕೆ ಅವನ ತುಟಿಗೆ ಲೊಚಕ್ಕನೆ ಮುದ್ದು ಕೊಟ್ಟಳು. ಕೂಡಲೇ ಅವ ಅದನ್ನು ಇವಳಿಗೆ ಹಿಂತಿರುಗಿಸಿದ ಅಷ್ಟೇ ರಭಸವಾಗಿ! ಅಷ್ಟಕ್ಕೆ ಮುಗಿಯಲಿಲ್ಲ ವಹಿವಾಟು. ಮತ್ತೆ ಇವಳು ಅವನಿಗೆ; ಅವನು ಇವಳಿಗೆ ನಿಲುಗಡೆಯಿಲ್ಲದೆ ನಡೆಯುತ್ತಲೇ ಇತ್ತು. ನೋಟಕರಿಗೇ ಜಿಗುಪ್ಸೆಯಾಗಿ ದಿಟ್ಟಿ ಬದಲಿಸಬೇಕು. ಆಮೇಲೆ ಕೂಡ ಅಲ್ಲಲ್ಲೇ ಈ ರೀತಿಯ ಸಾರ್ವಜನಿಕ ಶೃಂಗಾರ ಪ್ರದರ್ಶನಗಳನ್ನು ಬೇಕಾದಷ್ಟೇ ಕಾಣಬೇಕಾಯ್ತು! ಇದಾವ ಬಗೆಯ ನಾಗರಿಕತೆಯೋ ನನಗಂತೂ ತಿಳಿಯಲಿಲ್ಲ.

ಇಲ್ಲಿನ ಕೆಲವು ಬಿಳಿ ಹುಡುಗಿಯರಿಗೆ ಭಾರತದ ನಾರಿಯರ ಹಾಗೆ ರೇಶಿಮೆ ಸೀರೆ ಉಟ್ಟು ಸಿಂಗಾರ ಮಾಡಿಕೊಳ್ಳುವುದು ಒಂದು ಸೊಬಗಿನ ವಿಚಾರ. ಒಮ್ಮೆ ನಾವು ದೇವಾಲಯವೊಂದಕ್ಕೆ ಹೋಗುತ್ತಿರುವಾಗ, ಆ ಚೆಲುವಿ ಕಾಲುದಾರಿಯಲ್ಲಿ ಭರ್ಜರಿ ರೇಷ್ಮೆ ಸೀರೆ ಉಟ್ಟು, ಚಂದದ ಆಭರಣಗಳನ್ನು ಧರಿಸಿ ಹೂ ಮುಡಿದ ಬಿಳಿ ಗೌರಿಯಂತಹ ಹೆಣ್ಣೊಬ್ಬಳು ಉಲ್ಲಾಸದಿಂದ ನಡೆದುಹೋಗುತ್ತಿದ್ದಳು. ಜತೆಯಲ್ಲಿ ಖುಷಿಯ ಹಾಗಿದ್ದ ಆಕೆಯ ತಂದೆಯೂ ಇದ್ದರು. ನನ್ನನ್ನು ನೋಡಿ ಮುಗುಳ್ನಕ್ಕರು. ಇಲ್ಲಿ ಎಲ್ಲರೂ ಹಾಗೆಯೇ ಎದುರಾದಾಗ ಸ್ನೇಹಪೂರ್ವಕವಾಗಿ ಮೆಲುನಗು ಬೀರುತ್ತಾರೆ. 'ಹಲೋ!' ಎಂದುಲಿಯುತ್ತಾರೆ. "ಆಕೆ ನಮ್ಮ ಉಡುಪಿನಲ್ಲಿ ತುಂಬ ಮುದ್ದಾಗಿ ಕಾಣುತ್ತಾಳೆ" ಆತನಿಗೆ ನಾನು ಹೇಳಿದೆ. ತುಂಬ ಸಂತೋಷವಾಯ್ತು ಅವರಿಗೆ. "ಈ ವಿಷಯ ಬಲು ಸಂಭ್ರಮವಾಗಿಬಿಟ್ಟಿದೆ ಅವಳಿಗೆ..." ಹೆಮ್ಮೆಯಿಂದ ಹೇಳಿದರು. ಅಷ್ಟರಲ್ಲಿ ಆ ಹೆಣ್ಣುಮಗಳು ನನ್ನತ್ತ ತಿರುಗಿ ನೋಡಿದಳು. "ಸೊಗಸಾಗಿ ಕಾಣುತ್ತೀಯಮ್ಮ" ಅಂದೆ. ಮೈಯೆಲ್ಲ ಸಡಗರವಾದಳು. ಮುದ್ದಾಗಿ 'ಥ್ಯಾಂಕ್ಸ್' ಉಲಿದಳು. ಮತ್ತಷ್ಟು ವೈಯ್ಯಾರದಿಂದ ತುಂಬುನಿರಿಗೆಗಳನ್ನು ಚಿಮ್ಮಿಸುತ್ತಾ ದೇಗುಲದೊಳಗೆ ನಡೆದುಹೋದಳು.

ಅಲ್ಲಿನ ಶಿಕ್ಷಣ ಪದ್ಧತಿಯನ್ನು ಗಮನಿಸುವ ಸಲುವಾಗಿ ನಾನೊಂದು ಸಾರಿ ನನ್ನ ಮೊಮ್ಮಗಳು ನಿಯತಿ ಓದುತ್ತಿರುವ ಶಾಲೆಗೆ ಹೋದೆ. ವಿಶಾಲವಾದ ತೋಟದ ಮಧ್ಯೆ ಇದೆ ಈ ಚಂದದ ಶಾಲೆ. ದೊಡ್ಡ ದೊಡ್ಡ ತರಗತಿಗಳು. ಸುತ್ತಲೂ ಮಕ್ಕಳಿಗೆ ಕೃಷಿ ಕಲಿಕೆಗಾಗಿ ಪುಟ್ಟ ಪುಟ್ಟ ಹೊಲಗದ್ದೆಗಳು. ಮಕ್ಕಳೆಲ್ಲ ಹಾರಾಡುವ ಹಕ್ಕಿಗಳು. ಜತೆಗೆ ಹೋಂವರ್ಕ್ ಇಲ್ಲವೇ ಇಲ್ಲ. ನಿಯಾ ತನ್ನ ಕ್ಲಾಸ್ ಟೀಚರನ್ನು ನನಗೆ ಪರಿಚಯಿಸಿದಳು. ಆಕೆಯನ್ನು 'ಮಿಸ್ ಬ್ಯಾಟನ್' ಅಂತಲೇ ಕರೆಯುತ್ತಾಳೆ. ಆ ರಾಗವೂ ಸ್ನೇಹದ ರಾಗವೇ. ಈ ಮಿಸ್ ಬ್ಯಾಟನ್ ಬಲು ಚೆಲುವೆ. ಬಂಗಾರಗೂದಲಿನ ಬೆಡಗಿ. ಜತೆಗೆ ಎತ್ತರದ ನಿಲುವು, ಹೊನ್ನ ಮೈಬಣ್ಣ, ಜೇನುಗಣ್ಣು. ಈ ತರುಣಿ ನನ್ನನ್ನು ಆತ್ಮೀಯವಾಗಿ ಮಾತನಾಡಿಸಿದಳು. ಇಷ್ಟವಾದಳು. ಅಷ್ಟರಲ್ಲಿ "ಮಿಸ್ ಬ್ಯಾಟನ್, ನನ್ನ ಅಜ್ಜಿ ನನ್ನ ಬಗ್ಗೆ ಒಂದು ಕತೆ

ಬರೆದಿದ್ದಾರೆ" ಜಂಭ ಕೊಚ್ಚಿಕೊಂಡಿತು ನಿಯತಿ "ಓ, ನಿಯಾಥಿ... ನೀನದನ್ನು ನಂಗೆ ಕೊಡಲೇ ಇಲ್ಲವಲ್ಲ ಮತ್ತೆ?" ಮಿಸ್ ಬ್ಯಾಟನ್ ಉದ್ಗರಿಸಿದಳು. "ಅವಳದನ್ನು ಇಂಗ್ಲಿಷ್‌ಗೆ ಭಾಷಾಂತರಿಸಿ ಕೊಡಬೇಕು" ನಾನಂದೆ ನಗುತ್ತ. "ಬೇಗ ಆ ಕೆಲಸಾನ ಮಾಡು ಮತ್ತೆ..." ಬ್ಯಾಟನ್ ನಕ್ಕು ನಿಯತಿಯ ಕೆನ್ನೆ ಸವರಿದಳು. ಈಕೆಯದು ಬಹಳ ಸಿಹಿಯಾದ ಮಾತು. ಹಿತಮಿತ ದೇಹ ಭಾಷೆ. ಬಹುಮಟ್ಟಿಗೆ ಅದು ನರ್ತನ ಗತಿಯೇ. ಅದು ಎಷ್ಟೊಂದು ಆಕರ್ಷಕವೂ ಪ್ರಭಾವಶಾಲಿಯೂ ಆಗಿತ್ತೆಂದರೆ ಆ ಚೆಲುವೆಯೊಡನೆ ಮಾತನಾಡುತ್ತಾ ಆಡುತ್ತಾ ಕಡೆ ಕಡೆಯಲ್ಲಿ ನಾನೂ ಒಂದಿಷ್ಟು ತೂಗಾಡಿಬಿಟ್ಟೆನೇನೋ ಎಂದು ಸ್ವತಃ ನನಗೇ ಭಾಸವಾಯಿತು. ಸ್ವಲ್ಪ ನಾಚಿಕೆಯೂ ಆಯಿತೆನ್ನಿ. ಇರಲಿ, "ಆಸ್ಟ್ರೇಲಿಯಾದಲ್ಲಿ ಇರುವಾಗ ಆಸ್ಟ್ರೇಲಿಯನ್ ಆಗಿರು" ಅಲ್ಲವೇ ?

ನಮ್ಮ ಚೆನ್ನು ನನಗೊಂದು ಜಿಪಿಎ (ಜನರಲ್ ಪವರ್ ಆಫ್ ಅಟಾರ್ನಿ) ಕೊಡಬೇಕಾಗಿತ್ತು. ಇದೀಗ ಅವಳು ಆಸ್ಟ್ರೇಲಿಯಾದ ಖಾಯಂ ನಿವಾಸಿ. ಆದ್ದರಿಂದ ಈ ಜಿಪಿಎಗೆ ಅಲ್ಲಿನ ಕಾನೂನು ತಜ್ಞರ ಒಪ್ಪಿಗೆ ರುಜು ಬೇಕಿತ್ತು. ವಿಚಾರಿಸಲಾಗಿ ಜಸ್ಟೀಸ್ ಆಫ್ ಪೀಸ್ ವಾರಕ್ಕೆರಡು ಬಾರಿ ಕಾರ್ನಿಗಿಯ (ಚೆನ್ನು ವಾಸಿಸುವ ಬಡಾವಣೆ) ಪೊಲೀಸ್ ಸ್ಟೇಶನ್ನಿಗೆ ಬರುತ್ತಾರೆಂದೂ, ಅಗತ್ಯ ದಾಖಲೆಗಳನ್ನು ತೋರಿಸಿ ಅವರ ರುಜು ಪಡೆಯಬಹುದೆಂದೂ ತಿಳಿಯಿತು. ಆಮೇಲೊಂದು ದಿನ ಕಾರ್ನಿಗಿ ಆರಕ್ಷಕ ಠಾಣೆಯ ಅಧಿಕಾರಿ ಚೆನ್ನುಗೆ ಫೋನ್ ಮಾಡಿ ಆ ಸಂಜೆ ೬.೫೦ಕ್ಕೆ ಸಮಯ ನಿಗದಿಯಾಗಿದೆಯೆಂದು ತಿಳಿಸಿದಳು. ನಾನೂ ಚೆನ್ನು ಜತೆ ಅಲ್ಲಿಗೆ ಹೋದೆ. ನಾವಲ್ಲಿ ತಲುಪಿದಾಗ ೬.೪೫ ಆಗಲೇ ಸೊಗಸಾದ ಕಾರೊಂದು ಅಲ್ಲಿ ಬಂದು ನಿಂತಿತು. ಕಪ್ಪನೆಯ ಸ್ಕರ್ಟು-ಕೋಟು ಧರಿಸಿದ್ದ, ಒಪ್ಪವಾದ ಕೇಶ ವಿನ್ಯಾಸದ ಮಧ್ಯೆ ವಯಸ್ಕ ಮಹಿಳೆಯೊಬ್ಬರು ಆತುರಾತುರವಾಗಿ ಕಾರಿಂದ ಇಳಿದು ಆ ಚಳಿಚಳಿ ತುಂತುರು ಮಳೆಯಲ್ಲಿ ತೋಯುತ್ತಾ ಠಾಣೆಯೆಡೆಗೆ ಗುಡುಗುಡು ಓಡಿದರು. ನಮಗಿಂತ ಮುನ್ನ ಇನ್ನೊಬ್ಬರಿಗೆ ಭೇಟಿ ನಿಗದಿಯಾದ್ದರಿಂದ ಐದು ನಿಮಿಷದ ಬಳಿಕ ನಮ್ಮನ್ನು ಕರೆದರು. ಈ ಜಸ್ಟೀಸ್ ಆಫ್ ಪೀಸ್ ಬಹಳ ಕಳೆಯಾದ ಲವಲವಿಕೆಯ ಸಭ್ಯ ಮಹಿಳೆ. ನಗುನಗುತ್ತ ಚೆನ್ನು ತೋರಿಸಿದ ದಾಖಲೆಗಳನ್ನು ಪರಿಶೀಲಿಸಿದರು. ರುಜು ಮಾಡಿದರು. ಕೈಕುಲುಕಿ ಶುಭಾಶಯ ಹೇಳಿ ಬೀಳ್ಕೊಟ್ಟರು. ಇಷ್ಟಕ್ಕೆಲ್ಲ ಹಿಡಿದ ಸಮಯವೆಂದರೆ ೩-೪ ನಿಮಿಷವಷ್ಟೆ. ಈ ಜಸ್ಟೀಸ್ ಆಫ್ ಪೀಸ್ ಕರ್ತವ್ಯವನ್ನು ನಿರ್ವಹಿಸುವವರು ಈ ರೀತಿಯ ಸಾರ್ವಜನಿಕ ಕೆಲಸಗಳನ್ನು ಉಚಿತವಾಗಿ ಮಾಡಿಕೊಡುತ್ತಾರಂತೆ. ಹಾಗೆಂದು ಪದವಿ ತೆಗೆದುಕೊಂಡಾಗ ಪ್ರಮಾಣವಚನ ಸ್ವೀಕರಿಸಿರುತ್ತಾರಂತೆ. ಇನ್ನೊಂದು ಮಾತು. ಜಿಪಿಎ ಸಾಮಾನ್ಯವಾಗಿ ನಮ್ಮಲ್ಲಿ ಕನಿಷ್ಠ ಒಂದು ಪುಟ ಇರುತ್ತದೆ. ಇಲ್ಲಿ ಚೆನ್ನು ಕೊಟ್ಟ ಜಿಪಿಎ ಒಂದೇ ವಾಕ್ಯ! "ಈ ಸಂಬಂಧವಾಗಿ ನಾನು ನನ್ನ ತಾಯಿಗೆ ಏನೆಲ್ಲ ಹಕ್ಕುಗಳನ್ನು ನೀಡಬಹುದೋ ಅದೆಲ್ಲವನ್ನು ನೀಡಿರುತ್ತೇನೆ."

ಇನ್ನು, ಈ ದೇಶದ ವೃದ್ಧೆಯರ ಬಗ್ಗೆ ವಿಶೇಷವಾಗಿ ಹೇಳಬೇಕು. ತಮಗೆ ತಾವೇ ಆಸರೆ ಎಂಬುದನ್ನು ಚೆನ್ನಾಗಿ ಬಲ್ಲ ಈ ಮಹಿಳೆಯರು ತಮ್ಮ ಆರೋಗ್ಯವನ್ನೂ, ಸೌಂದರ್ಯವನ್ನೂ ಬಹಳ ಚೆನ್ನಾಗಿ ಕಾಪಾಡಿಕೊಳ್ಳುತ್ತಾರೆ. ೭೫-೮೦ ವಯಸ್ಸಿನ ವೃದ್ಧ ತರುಣಿಯರು ಬ್ಯೂಟಿಪಾರ್ಲರುಗಳಲ್ಲಿ ತುಂಬಿರುತ್ತಾರೆ. ಅಂದರೆ, ಆ ಉತ್ಸಾಹವನ್ನು ಊಹಿಸಿ. ಅವರ ನಿಲುವು – ಇರಸರಿಕೆಗಳೂ ಹಾಗೆಯೇ... ಚಂದವಾದ ಬಟ್ಟೆ ಬರೆ ಹಿತಮಿತ ಅಲಂಕಾರಗಳಲ್ಲಿ ಊರ ತುಂಬ ಪುಟು ಪುಟು ಓಡಾಡುತ್ತಾರೆ. ಮನೆಗಳಲ್ಲೂ ತಮ್ಮೆಲ್ಲ ಕೆಲಸಗಳನ್ನು ತಾವೇ ಮಾಡಿಕೊಳ್ಳುತ್ತಾರೆ. ಹಣ್ಣು ಹಣ್ಣು ವೃದ್ಧೆಯರು ಪ್ಯಾಂಟು-ಅಂಗಿ ಮಡಿಸಿಕೊಂಡು ಮನೆಯ ಮುಂದೆ ಏಣಿ ಮೇಲೆ ನಿಂತು ರಿಪೇರಿ ಕೆಲಸ ಮಾಡುವುದನ್ನೋ, ಅಂಗಳದ ತೋಟದಲ್ಲಿ ಯಂತ್ರದಿಂದ ಹುಲ್ಲು ಕತ್ತರಿಸುವುದನ್ನೋ ನೋಡುವುದು ಆಹ್ಲಾದಕರ ದೃಶ್ಯ. ವಯಸ್ಸಾಗುವುದು ದೌರ್ಬಲ್ಯವೂ ಅಲ್ಲ, ಹೀನಾಯವೂ ಅಲ್ಲ ಎಂಬಂತೆ ಇವರ ನಿಲುವು. ಯಾಕೆ ಬದುಕಬೇಕೆಂದು ಚಿಂತಿಸುವುದಿಲ್ಲ. ಹೇಗೆ ಬದುಕಬೇಕೆಂದು ಶ್ರಮಿಸುತ್ತಾರೆ. ಮುಖದ ಮೇಲೆ ಅಸಹಾಯಕತೆ ಪ್ರದರ್ಶಿಸುವುದಿಲ್ಲ. ಬದಲಿಗೆ, ಅಲ್ಲಿರುವುದು ಅಸೀಮ ಆತ್ಮವಿಶ್ವಾಸ. ನಾನು ಎಂ.ಸಿ.ಜಿ.ಗೆ (ಮೆಲ್ಬರ್ನ್ ಕ್ರಿಕೆಟ್ ಗ್ರೌಂಡ್) ಹೋಗಿದ್ದಾಗ ನೋಡಿದೆ. ಟಿಕೇಟು ಕೊಡುವವರು, ಗೈಡ್‌ಗಳು, ಮಾಹಿತಿ ನೀಡುವವರು, ಎಲ್ಲರೂ ಹಣ್ಣು ಹಣ್ಣು ವೃದ್ಧ-ವೃದ್ಧೆಯರೇ! ನನಗೆ ಬಹಳ ಇಷ್ಟವಾದ ಮತ್ತೊಂದು ದೃಶ್ಯ ಅಂದರೆ, ಬಹಳ ವಯಸ್ಸಾಗಿರುವ ವೃದ್ಧ ದಂಪತಿಗಳು ಪರಸ್ಪರ ಆಸರೆಯಾಗಿ ಪ್ರೇಮ ತುಂಬಿದ ಕಣ್ಣುಗಳಿಂದ ಕೈ ಕೈ ಹಿಡಿದು ಸಂಚರಿಸುವ ಹೃದಯಸ್ಪರ್ಶಿ ನೋಟ.




ಒಟ್ಟಾರೆ ಹೇಳುವುದಾದರೆ, ಮನುಷ್ಯ ಮನಸ್ಸು ಮಾಡಿದರೆ, ಎಷ್ಟೊಂದು ಸೊಗಸಾದ ಜೀವನವನ್ನು ನಡೆಸಬಹುದೆಂಬುದಕ್ಕೆ ಮೆಲ್ಬರ್ನ್ ಜನಜೀವನವೇ ಸಾಕ್ಷಿ. ಇಲ್ಲಿ ಯಾವುದೇ ತಾಣಕ್ಕೆ ಹೋದರೂ ಸಮೃದ್ಧಿ, ನೆಮ್ಮದಿ, ಸಹನೆ. ನಾನಲ್ಲಿ ಕಂಡದ್ದು ಒಂದು ಸುಂದರ ಆರೋಗ್ಯಕರ ಜೀವನ. "ನೀನೂ ಬದುಕು; ಇತರರನ್ನೂ ಬದುಕಗೊಡು" ಅನ್ನುವುದು ಇಲ್ಲಿನ ಕಠಿಣ ಶಾಸನ. ಅದನ್ನವರು ಸಂತೋಷದಿಂದ ಪಾಲಿಸುತ್ತಾರೆ. ಸುಖವಾಗಿದ್ದಾರೆ.

ಈ ನನ್ನ ಲೇಖನದಲ್ಲಿ ವಿದೇಶೀ ಮಹಿಳೆಯರನ್ನು ಬಣ್ಣನೆ ಮಾಡಿಬಿಟ್ಟಿದ್ದೇನೆಂದು ಅನ್ಯಥಾ ಭಾವಿಸಬಾರದು. ಅವರದಕ್ಕೆ ಅರ್ಹರು, ಮೇಲಾಗಿ "ಗುಣಕ್ಕೆ ಮೆಚ್ಚರಮಿಲ್ಲ?" ಅಲ್ಲವೇ ? ಹಾಗೆ ನೋಡಿದರೆ ಜೀವನೋತ್ಸಾಹ – ಕ್ರಿಯಾಶೀಲತೆಗಳಲ್ಲಿ ಭಾರತೀಯರು ನಾವು ಅವರಿಗೆ ಸರಿಸಮರಾಗಿದ್ದೇವೆ. ಹಿಂತಿರುಗಿ ನೋಡಿದರೆ ವೇದಯುಗದಲ್ಲಿ ಮಹಿಳೆಯರು ಹೇಗೆ ಮಾನ್ಯರಾಗಿದ್ದರು ? ಅವರಿಗೆ ಯಜ್ಞ-ಯಾಗಾದಿಗಳಲ್ಲಿ ಪುರುಷನಷ್ಟೇ ಅಧಿಕಾರವಿತ್ತು. ಅಷ್ಟೇಕೆ ಪತಿಯ ಅನುಪಸ್ಥಿತಿಯಲ್ಲಿ ಪತ್ನಿಯೇ ಯಜ್ಞ ಕಾರ್ಯಗಳನ್ನು ಪೂರೈಸುತ್ತಿದ್ದಳು. ಕೃಷಿಯಲ್ಲಿ, ಬಿಲ್ಲು-ಬಾಣ ತಯಾರಿಕೆಗಳಲ್ಲಿ ಬಲು ಸಮರ್ಥವಾಗಿದ್ದಳು. ಹೆಣ್ಣುಮಗುವಿನ ಜನನಕ್ಕಾಗಿ ಯಜ್ಞಗಳನ್ನು ಮಾಡುತ್ತಿದ್ದ ಉಲ್ಲೇಖಗಳಿವೆ. ಇನ್ನು ವಚನಯುಗವೂ ಹಾಗೆಯೇ. ಸ್ತ್ರೀ-ಪುರುಷ ಪ್ರಭೇದಗಳನ್ನು ಮೀರಿದ ಆತ್ಮಜಾಗೃತಿಯ ಸುವರ್ಣಕಾಲ ಅದು.

ಆದರೆ ಒಂದೊಮ್ಮೆ ನಾವು ಹಾಗಿದ್ದೆವು – ಹೀಗಿದ್ದೆವು ಎಂಬ ಹೆಗ್ಗಳಿಕೆಗಳಿಗೆ ನಮ್ಮ ನಿಲುವುಗಳು ಸೀಮಿತವಾಗಬಾರದು. ಅಂದಿನ ಆತ್ಮಚೈತನ್ಯವನ್ನು ಇಡೀ ಮಹಿಳಾಸಂಕುಲ ಮತ್ತೆ ಗಳಿಸಿಕೊಳ್ಳಬೇಕು. ಆಸ್ಟ್ರೇಲಿಯಾದ, ಅಮೆರಿಕದ, ಜಪಾನಿನ ಮಹಿಳೆಯರಿಗೆ ಸಾಧ್ಯವಾಗುವಂಥದ್ದು ನಮಗೂ ಸಾಧ್ಯವಾಗುತ್ತದೆ. ಎಲ್ಲ ಬಗೆಯ ಸಹಕಾರ ಇದಕ್ಕೆ ಅತ್ಯಗತ್ಯ.

**ಭಾರತೀ ಕಾಸರಗೋಡು**

ಫ್ಲಾಟ್ ನಂ. ಎಫ್‌ಎಫ್ ೧, ಬಿಲ್ಡಿಂಗ್ ನಂ. ೨೨೯, 'ಅಪೂರ್ವ'
೮ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಪೂರ್ಣಪ್ರಜ್ಞಾ ಬಡಾವಣೆ ಬೆಂಗಳೂರು – ೫೬೦ ೦೬೧

# ೩೪೪ ಆತಂಕಕಾರಿ ಔಷಧಿಗಳ ನಿಷೇಧ

ವರ್ಷಾನುಗಟ್ಟಲೆ ಪತ್ರಿಕೆಗಳಲ್ಲಿ, ರೇಡಿಯೋದಲ್ಲಿ, ಟಿವಿಯಲ್ಲಿ ರಾಜಾರೋಷವಾಗಿ ಪ್ರಕಟವಾಗುತ್ತಿದ್ದ ಕೆಲವು ಔಷಧಿಗಳ ಜಾಹೀರಾತುಗಳನ್ನು ನೆನಪು ಮಾಡಿಕೊಳ್ಳಿ : (i) ವಿಕ್ಸ್–ಆ್ಯಕ್ಷನ್ ೫೦೦–ಎಕ್ಸ್ ಟ್ರಾ, ಕ್ರೋಸಿನ್ – ಕೋಲ್ಡ್ ಆಂಡ್ ಫ್ಲೂ – ಇವು ಶೀತ ಮತ್ತು ಫ್ಲೂ (ಜ್ವರ) ಗುಣಪಡಿಸಲು ಪರಿಣಾಮಕಾರಿ (ii) ಸಾರಿಡಾನ್ ? ತಲೆನೋವಿಗೆ ಪರಿಹಾರ, (iii) ಗ್ಲೈಕೊಡಿನ್, ಕೊರೆಕ್ಸ್, ಅಲೆಕ್ಸ್, ಬೆನಡ್ರಿಲ್, ಫೆನ್ಸೆಡೈಲ್ ? ಈ ಕಾಫ್ ಸಿರಪುಗಳು ಕೆಮ್ಮಿಗೆ ರಾಮಬಾಣ.

ಇನ್ನು ಈ ಜಾಹೀರಾತುಗಳೆಲ್ಲ ಬಂದ್ ! ಯಾಕೆಂದರೆ, ಕೇಂದ್ರ ಸರಕಾರದ ಆರೋಗ್ಯ ಮಂತ್ರಾಲಯ ಇವನ್ನೆಲ್ಲ ನಿಷೇಧಿಸಿದೆ. ಇಂತಹ ೩೪೪ ಫಿಕ್ಸೆಡ್ ಡೋಸ್ ಕಾಂಬಿನೇಷನ್ (ಎಫ್.ಡಿ.ಸಿ.) ಔಷಧಿಗಳ ಮೇಲೆ ನಿಷೇಧ ಹೇರಲಾಗಿದೆ.

ಎಫ್.ಡಿ.ಸಿ. ಎಂದರೆ ಎರಡು ಅಥವಾ ಜಾಸ್ತಿ ಔಷಧಿಗಳು ನಿಶ್ಚಿತ ಅನುಪಾತದಲ್ಲಿರುವ ಸಂಯುಕ್ತ ಔಷಧಿ. ಉದಾಹರಣೆಗೆ ಪಿರಾಮಲ್ ಹೆಲ್ತ್ ಕೇರ್ ಕಂಪೆನಿಯ "ಸಾರಿಡಾನ್" ಎಂಬುದು ಪಾರಸಿಟಮೋಲ್, ಕೆಫೇನ್ ಮತ್ತು ಪ್ರೊಪಿಫಿನಜೋನ್ ? ಈ ಮೂರೂ ಸೇರಿರುವ ಸಂಯುಕ್ತ ಔಷಧಿ. ಇಂತಹ ಎಫ್.ಡಿ.ಸಿ.ಗಳನ್ನು ತಮ್ಮ ಅನಾರೋಗ್ಯ ಗುಣಪಡಿಸಿಕೊಳ್ಳಲಿಕ್ಕಾಗಿ ಸೇವಿಸುತ್ತಿದ್ದವರು ಲಕ್ಷಗಟ್ಟಲೆ ಜನರು. ಅವರೆಲ್ಲರೂ ಈಗ ಬೆಚ್ಚಿಬಿದ್ದಿದ್ದಾರೆ.

ಹಾಗೆಯೇ ಕಾಫ್ ಸಿರಪುಗಳನ್ನು ಸೇವಿಸುತ್ತಿದ್ದವರು ಸಾವಿರಾರು ಜನರು. ಅವರೆಲ್ಲರಿಗೂ ಕಾಫ್ ಸಿರಪ್ ಕುಡಿದ ನಂತರ ಅಮಲು ಅನಿಸುತ್ತಿತ್ತು. ಆದರೂ ಗಂಟಲಿಗೆ ಸೋಂಕು ತಗಲಿದಾಗೆಲ್ಲ ಕಾಫ್ ಸಿರಪ್ ಸೇವಿಸುತ್ತಿದ್ದರು. ಈಗ ಇಂಥವರು ಕೇಳುವ ಪ್ರಶ್ನೆ : "ಈ ಔಷಧಿಗಳು ಸುರಕ್ಷಿತವಲ್ಲ ಎಂದಾದರೆ ಅವನ್ನು ಮಾರಾಟ ಮಾಡಲು ಸರಕಾರ ಪರವಾನಗಿ ಕೊಟ್ಟದ್ದು ಯಾಕೆ ?"

ಕೇಂದ್ರ ಸರಕಾರದ ಆರೋಗ್ಯ ಮಂತ್ರಾಲಯವು ಔಷಧಿಗಳಿಗೆ ಪರವಾನಗಿ ಕೊಡುವ ಪ್ರಕ್ರಿಯೆ, ಹಲವು ಹಂತಗಳ ಕ್ಲಿನಿಕಲ್ ಟ್ರಯಲು (ಪರೀಕ್ಷೆ)ಗಳಿರುವ ಕಠಿಣ ಪ್ರಕ್ರಿಯೆ. ಆದರೆ ಕೆಲವು ಔಷಧಿ ಉತ್ಪಾದಕರು ರಾಜ್ಯ ಸರಕಾರದ ಔಷಧಿ ನಿಯಂತ್ರಣ ಅಧಿಕಾರಿಗಳಿಂದ ಪರವಾನಗಿ ಪಡೆಯುವ ಮೂಲಕ ಆ ಕಠಿಣ ಪ್ರಕ್ರಿಯೆಗಳಿಂದ ನುಣುಚಿಕೊಳ್ಳುತ್ತಿದ್ದಾರೆ.

ಇಷ್ಟು ವರುಷ ಇವೆಲ್ಲ ಪ್ರಮಾದಗಳನ್ನು ನಿರ್ಲಕ್ಷಿಸಿದ ಕೇಂದ್ರ ಸರಕಾರ ಈಗ ಹೀಗೆನ್ನುತ್ತಿದೆ : "ಎಫ್.ಡಿ.ಸಿ. ಔಷಧಿಗಳಿಂದ ಬಳಕೆದಾರರಿಗೆ ರಿಸ್ಕ್ (ಅಪಾಯ ಸಂಭವ) ಇದೆ. ಅಲ್ಲದೆ, ಇವುಗಳಿಗೆ ಬದಲಿಯಾಗಿ ಸುರಕ್ಷಿತ ಔಷಧಿಗಳಿವೆ."

ಫೈಜ಼ರ್ ಕಂಪೆನಿಯ ಕೊರೆಕ್ಸ್ ಕಾಫ್ ಸಿರಪ್, ಪ್ರಾಕ್ಟರ್ ಆ್ಯಂಡ್ ಗ್ಯಾಂಬಲ್ ಕಂಪೆನಿಯ ವಿಕ್ಸ್–ಆ್ಯಕ್ಷನ್–೫೦೦–ಎಕ್ಸ್‌ಟ್ರಾ, ಗ್ಲ್ಯಾಕ್ಸೋ ಕಂಪೆನಿಯ ಪಿರಿಟೋನ್ ಎಕ್ಸ್‌ಪೆಕ್ಟೊರೆಂಟ್, ರೆಕಿಟ್ ಕಂಪೆನಿಯ ಡಿ'ಕೋಲ್ಡ್, ಗ್ಲೆನ್ ಮಾರ್ಕ್ ಕಂಪೆನಿಯ ಅಸ್ಕೊರಿಲ್ ಮತ್ತು ಅಲೆಕ್ಸ್ ಕಾಫ್ ಸಿರಪ್, ಅಬ್ಬೊಟ್ ಕಂಪೆನಿಯ ಪೆನ್–ಸೆಡೈಲ್ ಕಾಫ್ ಸಿರಪ್ ಮತ್ತು ಅಲೆಂಬಿಕ್ ಕಂಪೆನಿಯ ಗ್ಲೈಕೊಡಿನ್ ಕಾಫ್ ಸಿರಪ್ – ಇವು ಈಗ ನಿಷೇಧಿಸಲ್ಪಟ್ಟ ಜನಪ್ರಿಯ ಎಫ್.ಡಿ.ಸಿ.ಗಳು.




ಇದೆಲ್ಲ ಶುರುವಾದದ್ದು ೨೦೧೨ರಲ್ಲಿ. ಸಂಸತ್ತಿನ ಸಮಿತಿಯೊಂದರ ವರದಿಯು, ಸರಿಯಾದ ಕ್ಲಿನಿಕಲ್ ಟ್ರಯಲು (ಪರೀಕ್ಷೆ)ಗಳನ್ನು ನಡೆಸದೆ ಅನೇಕ ಔಷಧಿಗಳಿಗೆ ಪರವಾನಗಿ ನೀಡಲಾಗುತ್ತಿದೆ ಎಂಬುದನ್ನು ಬೊಟ್ಟು ಮಾಡಿ ತೋರಿಸಿತು. ಅನಂತರ, ಪ್ರೊ॥ ರಣಜಿತ್ ರಾಯ್ ಚೌಧರಿ ಅವರು ಮುಖ್ಯಸ್ಥರಾಗಿದ್ದ ಪರಿಣತರ ಸಮಿತಿಯೊಂದನ್ನು ಮಹಾ ಔಷಧಿ ನಿಯಂತ್ರಕರು ನೇಮಿಸಿದರು ? ಔಷಧಿಗಳ ನಿಯಂತ್ರಣಾ ವ್ಯವಸ್ಥೆಯಲ್ಲಿ ಸುಧಾರಣೆಗಳನ್ನು ಸೂಚಿಸಲಿಕ್ಕಾಗಿ ಆ ಸಮಿತಿಯು ೨೦೧೩ರಲ್ಲಿ ೧೦೦ ಪುಟಗಳ ವರದಿಯನ್ನು ಸಲ್ಲಿಸಿತು. ಸುಮಾರು ೮೫,೦೦೦ ಔಷಧಿಗಳ ಮರುಮೌಲ್ಯಮಾಪನ ಅಗತ್ಯವೆಂದು ಆ ವರದಿ ಸೂಚಿಸಿತು. ಸಮುದಾಯ ಅಭಿವೃದ್ಧಿ ವೈದ್ಯಕೀಯ ಘಟಕ ಮತ್ತು ಹೆಲ್ತ್ ಆ್ಯಕ್ಷನ್ ಇಂಟರ್ ನ್ಯಾಷನಲ್ ಎಂಬ ಸರಕಾರೇತರ ಸಂಸ್ಥೆಯ ೨೦೧೦ರ ಅಧ್ಯಯನವೂ ಇದೇ ರೀತಿಯ ಸೂಚನೆ ನೀಡಿತ್ತು : ೪,೫೯ ಬ್ರ್ಯಾಂಡ್ ಹೆಸರುಗಳಲ್ಲಿ ೧,೩೫೬ ಅತಾರ್ಕಿಕ ಎಫ್.ಡಿ.ಸಿ.ಗಳನ್ನು ಭಾರತದಲ್ಲಿ ಮಾರಾಟ ಮಾಡುತ್ತಿರುವುದು ಆತಂಕಕಾರಿ ಸಂಗತಿ.

ಎಂತಹ "ವಿಪರೀತ ಔಷಧಿ"ಗಳನ್ನು ನಮ್ಮ ದೇಶದಲ್ಲಿ ಮಾರಾಟ ಮಾಡಲು ಪರವಾನಗಿ ನೀಡಲಾಗಿದೆ ಎಂಬುದಕ್ಕೆ ಒಂದು ಉದಾಹರಣೆ ಇಲ್ಲಿದೆ. ಇದು ದೆಹಲಿಯ ಬಿ.ಎಲ್.ಕೆ. ಆಸ್ಪತ್ರೆಯ ಆಂತರಿಕ ಔಷಧಿ ವಿಭಾಗದ ಚೇರ್ಮನ್ ಡಾ॥ ಆರ್. ಕೆ. ಸಿಂಘಾಲ್ ನೀಡಿದ ಉದಾಹರಣೆ : ನಿಮೆಸುಲೈಡ್ (ಒಂದು ಆ್ಯನ್ಯಾಲ್‌ಜಿಸಿಕ್) ಮತ್ತು ಸೆರ್ರಾಟಿಯೊ ಪೆಪ್ಟಿಡೇಸ್ (ಒಂದು ಕಿಣ್ವ) ಇವುಗಳ ಸಂಯುಕ್ತ ಔಷಧಿ ಅಸಂಬದ್ಧ. ಯಾಕೆಂದರೆ, ಆ ಕಿಣ್ವವನ್ನು ಆಹಾರ ಸೇವಿಸುವ ೩೦ ನಿಮಿಷಗಳ ಮುಂಚೆ ಮತ್ತು ಆ್ಯನ್ಯಾಲ್‌ಜಿಸಿಕನ್ನು ಆಹಾರ ಸೇವಿಸಿದ ೩೦ ನಿಮಿಷಗಳ ನಂತರ ಸೇವಿಸತಕ್ಕದ್ದು. ಇವೆರಡನ್ನೂ ಒಟ್ಟಾಗಿ ಸೇವಿಸುವುದಕ್ಕೆ ಅರ್ಥವಿದೆಯೇ ?

ಬಹುಪಾಲು ವೈದ್ಯರು ಈ ನಿಷೇಧವನ್ನು ಸ್ವಾಗತಿಸಿದ್ದಾರೆ. ಯಾಕೆಂದರೆ, ಒಂದೇ ಔಷಧಿಯಲ್ಲಿ ಎರಡು ರಾಸಾಯನಿಕಗಳಿದ್ದಾಗ, ಒಂದರ ಪರಿಣಾಮದಲ್ಲಿ ಇನ್ನೊಂದು ಮಧ್ಯಪ್ರವೇಶ ಮಾಡಬಹುದು. ಇದರಿಂದಾಗಿ ದೇಹದಲ್ಲಿ ವಿಷಕಾರಿ ವಸ್ತುಗಳು ಉಂಟಾಗಬಹುದು ಅಥವಾ ಒಂದು ರಾಸಾಯನಿಕ ಸಕ್ರಿಯವಾಗದಂತೆ ಇನ್ನೊಂದು ರಾಸಾಯನಿಕ ಅಡ್ಡಿಯಾದೀತು. ಎಫ್.ಡಿ.ಸಿ.ಗಳಿಂದ ಇತರ ತೊಂದರೆಗಳೂ ಉಂಟಾಗಲು ಸಾಧ್ಯ. ಉದಾಹರಣೆಗೆ, ಆ್ಯಂಟಿಬಯಾಟಿಕ್‌ಗಳನ್ನು ಅಸಮರ್ಪಕವಾಗಿ ಮಿಶ್ರ ಮಾಡಿದರೆ, ರೋಗಿಗಳಲ್ಲಿ ಆ್ಯಂಟಿಬಯಾಟಿಕ್ ಪ್ರತಿರೋಧ ಮೂಡಿಬಂದೀತು. ಹಾಗೆಯೇ, ಒಂದು ಎಫ್.ಡಿ.ಸಿ.ಯಲ್ಲಿರುವ ಔಷಧಿಗಳಲ್ಲಿ ಪ್ರತಿಯೊಂದರ ಅಡ್ಡಪರಿಣಾಮಗಳನ್ನು ಗುರುತಿಸುವುದು ವೈದ್ಯರಿಗೆ ಕಷ್ಟಸಾಧ್ಯ. ಒಂದು ವಿಷಯವಂತೂ ಸ್ಪಷ್ಟ : ಮಾರಾಟವಾಗುವ ಪ್ರತಿಯೊಂದು ಎಫ್.ಡಿ.ಸಿ.ಯನ್ನು ಪರೀಕ್ಷಿಸುವುದು ವೈದ್ಯರ ಕೆಲಸವಲ್ಲ. ಅದು ಔಷಧಿ ನಿಯಂತ್ರಣ ಇಲಾಖೆಯ ಕರ್ತವ್ಯ.

ಔಷಧಿ ಉತ್ಪಾದಕ ಕಂಪೆನಿಗಳಿಗೆ ಈ ಅನಿರೀಕ್ಷಿತ ನಿಷೇಧದಿಂದಾಗಿ ತಮ್ಮ ಲಾಭ ಕಡಿಮೆಯಾಗುವುದೆಂಬ ಚಿಂತೆ. ಯಾಕೆಂದರೆ, ಈಗ ನಿಷೇಧಿಸಲ್ಪಟ್ಟ (೨,೫೦೦ ಬ್ರಾಂಡ್ ಹೆಸರಿನ) ೩೪೪ ಎಫ್.ಡಿ.ಸಿ.ಗಳ ಉತ್ಪಾದನೆ ಮತ್ತು ಮಾರಾಟ ಮೌಲ್ಯ ಸುಮಾರು ರೂ. ೫,೦೦೦ ಕೋಟಿ.

ಇವೆಲ್ಲದರ ನಡುವೆ ಗ್ರಾಹಕರಿಗೆ ಸಮಾಧಾನ ತರಬಲ್ಲ ಇನ್ನೊಂದು ಸುದ್ದಿ : ಕೇಂದ್ರ ಪರಿಣತರ ಸಮಿತಿಯು ಇನ್ನೂ ೫೦೦ ಎಫ್.ಡಿ.ಸಿ.ಗಳನ್ನು ಪರಿಶೀಲಿಸುತ್ತಿದೆ. ಆದ್ದರಿಂದ ಇನ್ನಷ್ಟು ಸಂಖ್ಯೆಯ ಅಪಾಯಕಾರಿ ಔಷಧಿಗಳ ನಿಷೇಧ ಜಾರಿಗೆ ಬರಬಹುದೆಂದು ನಿರೀಕ್ಷಿಸೋಣ.

**ಅಡ್ಡೂರು ಕೃಷ್ಣ ರಾವ್**
'ಸುಮ', ೫ನೇ ಅಡ್ಡರಸ್ತೆ, ಬಿಜೈ ಹೊಸ ರಸ್ತೆ, ಮಂಗಳೂರು – ೫೭೫ ೦೦೪




ನಾನು ಓದಿದ ಪುಸ್ತಕ

ಲೇಖಕರು
**ವಿ. ಸೋಮಸುಂದರಿ**
ಪುಟಗಳು : **ಸುಮಾರು ೩೯೩ + XXV** ಬೆಲೆ : **ರೂ. ೩೫೦/–**
ಪ್ರಕಾಶಕರು
**ಸದ್ಭಾವನ ಪ್ರಕಾಶನ**
ಅಖಿಲ ಕರ್ನಾಟಕ ಸದ್ಭಾವನಾ ಶಿಕ್ಷಕರ ಪರಿಷತ್ (ರಿ.), ನಂ. ೮೪
ಲಾಲ್‌ಬಾಗ್ ೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ , ಮೈಸ್ಕೂಲ್ ರಸ್ತೆ
ಕೆಂಗಲ್ ಹನುಮಂತಯ್ಯ ರಸ್ತೆಯ ಎದುರು ರಸ್ತೆ, ಬೆಂಗಳೂರು – ೫೬೦ ೦೨೭

# ಕರ್ನಾಟಕ ಸಾಹಿತ್ಯ ಲೋಕದ ಚಿರಸ್ಮರಣೀಯರು

ಶಿಕ್ಷಣ ಕ್ಷೇತ್ರದಲ್ಲಾಗಲಿ, ಸಾಹಿತ್ಯ ಕ್ಷೇತ್ರದಲ್ಲಾಗಲಿ ಎಳ್ಳಷ್ಟೂ ಪ್ರಸಿದ್ಧಿ ಇಲ್ಲದ ಪ್ರಾಥಮಿಕ ಶಿಕ್ಷಣ ಉಪಾಧ್ಯಾಯಿನಿ ಶ್ರೀಮತಿ ವಿ. ಸೋಮಸುಂದರಿ ಅವರು ತಮ್ಮ ಚೊಚ್ಚಲ ಕೃತಿ ಎಂದು ವಾಡಿಕೆಯಲ್ಲಿ ಕರೆಯುವ ಅವರ ಪ್ರಥಮ ಸಾಹಿತ್ಯ ಕೃತಿ ನಾನಿಲ್ಲಿ ಪರಿಚಯಿಸಲಿರುವ ಗ್ರಂಥ.

'ಕರ್ನಾಟಕ ಸಾಹಿತ್ಯ ಲೋಕದ ಚಿರಸ್ಮರಣೀಯರು' ಕ್ರಿ. ಶ. ೫೦೦ರಿಂದ ಕ್ರಿ. ಶ. ೧೯೦೦ರವರೆಗಿನ ಕನ್ನಡ ಸಾಹಿತಿಗಳಲ್ಲಿ, ಅವರ ದೃಷ್ಟಿಯಲ್ಲಿ, ಚಿರಸ್ಮರಣೀಯರಾದ ೪೮೬ ಸಾಹಿತಿಗಳ ಉತ್ತಮ ಕೃತಿಗಳ ಸುಮಾರು ೪೦೦ ಪುಟಗಳ ಪರಿಚಯ ಗ್ರಂಥ; ಒಂದರ್ಥದಲ್ಲಿ 'ಕವಿಚರಿತೆ'.

ಈ ಪುಸ್ತಕವನ್ನು ಕೈಗೆತ್ತಿಕೊಂಡಾಗ ಆಕರ್ಷಿಸಿ, ನನ್ನನ್ನು ಆಲೋಚನೆಗೆ ಹಚ್ಚಿದ್ದು ಪುಸ್ತಕದ ಶೀರ್ಷಿಕೆ. 'ಕರ್ನಾಟಕ' ಎಂಬ ಶಬ್ದ ಸಾಧಾರಣವಾಗಿ ಕನ್ನಡ ಮಾತನಾಡುವ ಜನರಿರುವ ಪ್ರದೇಶ. ಈ ಪುಸ್ತಕ ಕೇವಲ ಸಾಹಿತಿಗಳನ್ನೇ ಕುರಿತಾಗಿದ್ದರೆ, ಕರ್ನಾಟಕ ಎಂಬ ಪ್ರಾದೇಶಿಕ ಹೆಸರು ಬಹು ವಿಸ್ತಾರವಾದುದು. ಅದು ಬರೀ ಸಾಹಿತಿಗಳದ್ದೇ ಕುರಿತಾಗಿರಬೇಕಾಗಿಲ್ಲ. ಆದರೆ 'ಕರ್ನಾಟಕ' ಎಂಬ ಶಬ್ದವನ್ನು ಗ್ರಂಥಕರ್ತರು ಉದ್ದೇಶಪೂರ್ವಕವಾಗಿಯೋ, ಅನುದ್ದೇಶಪೂರ್ವಕ ವಾಗಿಯೋ, ಆ ಶಬ್ದ ಸೇರಿಸಿರಲಿಕ್ಕಿಲ್ಲ. ಇದರಲ್ಲಿ 'ಸಾಹಿತ್ಯ ಲೋಕದ' ಎಂಬ ಶಬ್ದ ಇರುವುದರಿಂದ ನಾವು ಸಾಧಾರಣವಾಗಿ ತಿಳಿಯುವ ಗದ್ಯ, ಪದ್ಯ, ಕವಿತೆ, ನಾಟಕ ಇತ್ಯಾದಿ ಸಾಹಿತಿಗಳನ್ನು ಕುರಿತಿದ್ದಲ್ಲ ಎಂಬುದನ್ನು ಸೂಚಿಸಲಿಕ್ಕಾಗಿಯೋ ? ಒಟ್ಟು ಸಾಹಿತ್ಯ ಲೋಕದ ಎಂಬ ಹೆಸರನ್ನಿಟ್ಟಿರಬಹುದು. ಏಕೆಂದರೆ, ಈ ಪುಸ್ತಕವನ್ನು ಓದಿದಾಗ ಸಾಧಾರಣವಾಗಿ ಸಾಹಿತ್ಯ ಎಂದರೆ ಕಾವ್ಯಮೀಮಾಂಸೆಯ ಲಕ್ಷಣಗಳಿಗೆ ಅನುಗುಣವಾದ ಬರಹ ಎಂದಾಗುತ್ತಿತ್ತು. ಆದರೆ ಈ ಗ್ರಂಥಾವಲೋಕನ ಮಾಡಿದಾಗ ಸಾಧಾರಣವಾಗಿ ಸಾಹಿತ್ಯ ಎಂದು ನಾವು ಭಾವಿಸಿರುವ ಬರಹಗಳಿಗಿಂತ ಬೇರೆಯಾದ ಬರಹದ ಕೃತಿಕಾರರನ್ನು ಕುರಿತು ಬರೆದಿದ್ದಾರೆ. ಇದು ಅಂಥವರಲ್ಲಿ ಚಿರಸ್ಮರಣೀಯ ರಾದವರ ಪರಿಚಯ ಗ್ರಂಥ.

ಈ ಕೃತಿಯ ಇನ್ನೊಂದು ವೈಶಿಷ್ಟ್ಯವೆಂದರೆ ಇದುವರೆಗೂ ಯಾವ ಕವಿಚರಿತೆಕಾರನೂ ಮಾಡದಿದ್ದ ಅಥವಾ ಮಾಡಿಲ್ಲದ ನೂತನ ಪರಿಚಯ ಗ್ರಂಥ. ಈ ಗ್ರಂಥದ ೪೮೬ ಸಾಹಿತಿಗಳ ಬಗ್ಗೆ ಅವರಿದ್ದ ಕಾಲಾನುಸಾರವಾಗಿ ಮಾಡದೆ ಅವರ ಹೆಸರಿನ 'ಅ'ಕಾರಾದಿಯಾಗಿ ಪ್ರಸ್ತಾಪಿಸಲಾಗಿದೆ. ಈ ಗ್ರಂಥದ

## ಕೋ. ಚೆನ್ನಬಸಪ್ಪ

ಮೊದಲನೆಯ ಸಾಹಿತಿ ಅಂಬಿಗರ ಚೌಡಯ್ಯ. ಅವನಿದ್ದ ಕಾಲ ೧೨ನೆಯ ಶತಮಾನ. ಸಾಧಾರಣವಾಗಿ ಕರ್ನಾಟಕ ಕವಿಚರಿತೆ ಬರಹಗಾರರು ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ ಎಂಬ ಮೂವರು ಜೈನ ಕವಿಗಳಿಂದ ಪ್ರಾರಂಭಿಸುತ್ತಾರೆ. ಅಲ್ಲಿಂದ ಮುಂದಕ್ಕೆ ಸಹಸ್ರಾರು ಕನ್ನಡ ಸಾಹಿತಿಗಳ ಪಟ್ಟಿ ಮಾಡುತ್ತಾ ಹೋಗುತ್ತಾರೆ. ಆದರೆ ಪ್ರಸ್ತುತ ಗ್ರಂಥ ಕನ್ನಡ ಸಾಹಿತ್ಯದ ಚಿರಸ್ಮರಣೀಯರ ಸಾಲಿನಲ್ಲಿ ೧೨ನೆಯ ಶತಮಾನದ ಅಂಬಿಗರ ಚೌಡಯ್ಯನಿಂದ ಪ್ರಾರಂಭವಾಗುತ್ತದೆ. ಕ್ರಿ. ಶ. ೧೯೦೦ರವರೆಗೆ ಚಿರಸ್ಮರಣೀಯರಾದ ೪೮೬ ಕವಿಗಳನ್ನು ಮಾತ್ರ ಇಲ್ಲಿ ಹೆಸರಿಸಿದ್ದಾರೆ. ಅಂದರೆ ಈ ಗ್ರಂಥಕರ್ತರ ದೃಷ್ಟಿಯಲ್ಲಿ ೧೫೦೦ ವರ್ಷಗಳಲ್ಲಿ ಸದಾ ನೆನಪಿಟ್ಟುಕೊಳ್ಳಬಹುದಾದ ಸಾಹಿತಿಗಳು ಎಂದರೆ ೪೮೬ ಮಾತ್ರ. ಇನ್ನುಳಿದ ಎಷ್ಟೋ ಸಹಸ್ರಾರು ಬರಹಗಾರರು, ಕವಿಗಳು, ಇತ್ಯಾದಿ... ಬರೆದರು. ಅಂಥವರನ್ನು ಜನರೂ ಮರೆತುಹೋದರು. ಹಾಗೆ ಮರೆತುಹೋದ ಬರಹಗಾರರ ಹುಟ್ಟು, ಕಾಲ, ಕೃತಿ ರಚನೆ ಇತ್ಯಾದಿಗಳು ಯಾರಿಗೂ, ಯಾವ ಪ್ರಯೋಜನಕ್ಕೂ ಬಾರದವು. ಆದರೆ ಈ ಕೃತಿಯಲ್ಲಿ ಇಂಥ ಅನವಶ್ಯಕವಾದ ಬರಹಗಾರರನ್ನು ಬಿಟ್ಟುಬಿಟ್ಟಿರುವುದು ಗ್ರಂಥಕರ್ತರು ಓದುಗರಿಗೆ ಮಾಡಿದ ಉಪಕಾರ. ಅವರು ಅನುಸರಿಸಿದ ಈ ತಾಂತ್ರಿಕತೆ ಎಂದರೆ ಬರಿ ಚರಿತ್ರೆಯ ಸಹಸ್ರ ನಾಮಾವಳಿಯನ್ನು ಪಠಿಸುವುದರಿಂದ ಆಗುವ ತಲೆನೋವನ್ನು ನಿವಾರಿಸಿದ್ದಾರೆ. ಅವರು ಅನುಸರಿಸಿದ ಈ ಕ್ರಮದಿಂದ ಅವರ ಗ್ರಂಥದ ಎರಡನೆಯ ಕವಿ ಕ್ರಿ. ಶ. ೧೬೦೦ರಲ್ಲಿದ್ದ ಅಂಬುಲಿಗೆ ಚೆನ್ನಮಲ್ಲೇಶ. ಈಗ ಓದುಗರು ಈ ಸಾಹಿತಿಯ ಸಂಗತಿಯನ್ನು ಓದುವಾಗ ೧೮ನೆಯ ಶತಮಾನಕ್ಕೆ ಬರುತ್ತಾರೆ. ಅಂದರೆ ಬೇರೆ ಬೇರೆ ಕಾಲದಲ್ಲಿ ಕವಿಯ ವೃತ್ತಿ, ಆತನ ಜೀವನ, ಜೀವನೋದ್ದೇಶ, ಕಾವ್ಯೋದ್ದೇಶ, ಆಗಿನ ಕಾಲದ ವೈಶಿಷ್ಟ್ಯ, ಸಾಂಸ್ಕೃತಿಕ ಸಂಗತಿಗಳನ್ನು ಸಂಕ್ಷಿಪ್ತವಾಗಿ ಕಾಣಿಸುತ್ತಾರೆ. ಹೀಗೆ 'ಅ'ಕಾರಾದಿಯಾಗಿ ಕೂಡಿಸುವುದರಿಂದ ಆಯಾ ಕವಿಗಳ ಕಾಲ, ದೇಶ, ಕಾವ್ಯೋದ್ದೇಶ, ಜೀವನ ಪದ್ಧತಿ, ಸಾಮಾಜಿಕ ವ್ಯವಸ್ಥೆ, ಧಾರ್ಮಿಕ ನಂಬಿಕೆ, ಆಯಾ ಕಾಲದಲ್ಲಿ ಸಮಾಜದಲ್ಲಿ ಆದ ಧಾರ್ಮಿಕ–ಸಾಂಸ್ಕೃತಿಕ ಸ್ಥಿತ್ಯಂತರಗಳು, ಕನ್ನಡ ಸಾಹಿತ್ಯದಲ್ಲಾದ ಬೆಳವಣಿಗೆ, ಮಾರ್ಪಾಟು, ಮಹತ್ವದ ಸಾಹಿತ್ಯದಲ್ಲಿ ಆದ ಕ್ರಾಂತಿ, ಇತ್ಯಾದಿಯಾಗಿ ಕಾಣಿಸುತ್ತಾರೆ. ಈ ದೃಷ್ಟಿಯಿಂದ ಈ ಪುಸ್ತಕವನ್ನು ಓದುತ್ತಾ ಹೋದರೆ ಸಮಗ್ರ ಕರ್ನಾಟಕದ ಪರಿಚಯ ನಮಗಾಗುತ್ತದೆ. ಇಡೀ ಗ್ರಂಥವನ್ನು ಓದಿ ಮುಗಿಸಿದಾಗ ಒಂದರ್ಥದಲ್ಲಿ ಈ ಗ್ರಂಥ ಕರ್ನಾಟಕದ ಸಾಹಿತ್ಯಿಕ, ಸಾಂಸ್ಕೃತಿಕ, ಧಾರ್ಮಿಕ, ಒಮ್ಮೊಮ್ಮೆ ಭೌಗೋಳಿಕ ವರ್ಣನೆ, ಇತಿಹಾಸ, ಕರ್ನಾಟಕದ ವೈವಿಧ್ಯಮಯ ಪ್ರಕೃತಿ ಸೌಂದರ್ಯ, ಜನರ ನಡವಳಿಕೆ – ಇವುಗಳ ಸೂಕ್ಷ್ಮ ಪರಿಚಯವಾಗುತ್ತದೆ. ಈ ಗ್ರಂಥವನ್ನು ಬರೆಯುವುದರಲ್ಲಿ ಅನುಸರಿಸಿದ ಪದ್ಧತಿಯಿಂದ ಓದುಗರಿಗೆ ಯಾವ ಬರಹಗಾರನ ವಿಚಾರವಾಗಿ ತಿಳಿಯಬೇಕೆನಿಸುತ್ತದೆಯೋ ಅಂಥವರ ಹೆಸರನ್ನು ತಕ್ಷಣವೇ ಗುರುತಿಸಿ, ಆ ಸಾಹಿತಿಗೆ ಸಂಬಂಧ ಪಟ್ಟಿದ್ದನ್ನೇ ಓದಬಹುದು. ಪ್ರಸಿದ್ಧ ಕವಿಗಳಾದ ಪಂಪ,

ರನ್ನ, ಪೊನ್ನ, ಹರಿಹರ, ರಾಘವಾಂಕ, ಚಾಮರಸ, ನಾರಾಯಣಪ್ಪ (ಕುಮಾರವ್ಯಾಸ), ರತ್ನಾಕರವರ್ಣಿ, ಕುಮಾರ ವಾಲ್ಮೀಕಿ, ಚಾಟುವಿಠ್ಠಲ... ೧೯ನೆಯ ಶತಮಾನದಲ್ಲಿದ್ದ ಮುದ್ದಣ ಮುಂತಾದವರ ಪರಿಚಯವನ್ನು ಮಾಡಿಕೊಳ್ಳಬಹುದು.

ಈ ಚಿರಸ್ಮರಣೀಯರಲ್ಲಿ ಈ ಗ್ರಂಥಕರ್ತೆ ವಚನಕಾರರಲ್ಲಿ, ದಾಸವರೇಣ್ಯರಲ್ಲಿ ಚಿರಸ್ಮರಣೀಯರಾದ ಹೆಸರುಗಳನ್ನು ಸಾಕಷ್ಟು ಖಚಿತವಾಗಿ ನಿರೂಪಿಸಿದ್ದಾರೆ. ಹೀಗೆ ಸಾಹಿತಿಗಳನ್ನು ವಿಂಗಡಿಸುವಾಗ ಹಿಂದಿನ ಕವಿಗಳು, ಚರಿತ್ರೆಕಾರರು ಮಾಡುತ್ತಿದ್ದಂತೆ ಜಾತಿ ಸೂಚಕ ವಿಂಗಡಣೆ ಮಾಡದೆ, ಅವರು ಅನುಸರಿಸಿದ ಕೃತಿ ರಚನಾ ಪದ್ಧತಿಯನ್ನು ಅವಲಂಬಿಸಿರುವುದು ಶ್ಲಾಘನೀಯ. ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗ ಎಂದು ಕನ್ನಡ ಕವಿಗಳನ್ನು ವಿಂಗಡಿಸುವುದಕ್ಕಿಂತ ಇವರು ಮಾಡಿದಂತೆ ಚಂಪೂ ಯುಗ, ವಚನಕ್ರಾಂತಿ ಯುಗ, ದಾಸಪಂಥ ಯುಗ, ಇತ್ಯಾದಿ... ಗುಂಪುಗಳನ್ನಾಗಿ ವಿಂಗಡಿಸಿರುವುದು ಈ ಕಾಲಕ್ಕೆ ಅನುಗುಣವಾದ ಪದ್ಧತಿ.

ಈ ಕೃತಿ ರಚನೆಕಾರರ ಆಳವಾದ ಅಭ್ಯಾಸ, ಅಪಾರ ಪರಿಶ್ರಮ, ಅಗಾಧವಾದ ಸ್ಮರಣೆ ಇವು ಮೆಚ್ಚಿ ತಲೆದೂಗುವಂಥವು. 'ಅ'ಕಾರಾದಿಯಾಗಿ ಹೆಸರನ್ನು ಜೋಡಿಸುವಾಗ ಗ್ರಂಥಕರ್ತೆ ೧೫೦೦ ವರ್ಷಗಳಲ್ಲಿ ಆಗಿರಬಹುದಾದ ಸಹಸ್ರಾರು ಬರಹಗಾರರ ಹೆಸರುಗಳನ್ನು, ಅವರು ಬರೆದ ಕೃತಿಗಳನ್ನು ತಕ್ಕಮಟ್ಟಿಗಾದರೂ ಅಭ್ಯಸಿಸಿರಲೇಬೇಕು.

ಕೊನೆಯದಾಗಿ, ಮುನ್ನುಡಿ ಬರೆದ ಡಾ॥ ಚಿದಾನಂದಮೂರ್ತಿಯವರು ಈ ಲೇಖಕಿಯ ಪ್ರಯತ್ನವನ್ನು ಪ್ರಶಂಸಿಸಿ 'ಇವರು ಇನ್ನೂ ಅಭ್ಯಾಸ ಮಾಡಿ ಪಿಎಚ್.ಡಿ. ಸ್ನಾತಕೋತ್ತರ ಪದವಿ ಪಡೆಯಲೆಂದು' ಹಾರೈಸಿದ್ದಾರೆ. ಅವರ ಆ ಶುಭಾಶಯ, ಸೂಚನೆ ಚೊಚ್ಚಲ ಕೃತಿ ಲೇಖಕಿಗೆ ನೀಡುವ ಪ್ರೋತ್ಸಾಹ. ಆದರೆ ನಾನು ಹೇಳುತ್ತೇನೆ : "ತಾಯಿ, ಈ ಪಿಎಚ್.ಡಿ., ಗಿಎಚ್‌ಡಿಗಳನ್ನು ನಿರೀಕ್ಷಿಸದೆ, ಬಯಸದೆ ನೀವು ಈಗ ಯಾರಿಗೂ ಗೊತ್ತಾಗದಂತೆ, ಯಾವ ಪ್ರಸಿದ್ಧಿಯನ್ನೂ ಬಯಸದೆ ಈ ಉತ್ಕೃಷ್ಟ ಗ್ರಂಥ ರಚನೆ ಮಾಡಿದ್ದೀರಲ್ಲಾ, ಅದೊಂದು ನಿಮ್ಮ ಶಕ್ತಿಯ ಶಾಶ್ವತ ನಿಧಿ. ಆದಾಗಿ ಯಾವುದೋ ವಿಶ್ವವಿದ್ಯಾನಿಲಯ ಈ ಗ್ರಂಥವನ್ನು ಅವಲೋಕಿಸಿ ಪಿಎಚ್.ಡಿ. ಸ್ನಾತಕೋತ್ತರ ಪದವಿ ಕೊಡುವುದಾದರೆ ಅದನ್ನು ನೀವು ವಿನಯದಿಂದ ಸ್ವೀಕರಿಸಿ, ಇದಕ್ಕಿಂತ ಹೆಚ್ಚಾಗಿ ಇನ್ನೇನು ಹೇಳಲಿಕ್ಕಾಗುವುದಿಲ್ಲ."

ಇದರಲ್ಲಿ ದಾಖಲಿಸಿರುವ ಚಿರಸ್ಮರಣೀಯರಲ್ಲಿ ಯಾರೊಬ್ಬರೂ ಯಾವ ವಿಶ್ವವಿದ್ಯಾನಿಲಯದಲ್ಲಿಯೂ, ಯಾವುದೇ ಪದವಿಯನ್ನಾಗಲಿ, ಪುರಸ್ಕಾರವನ್ನಾಗಲಿ, ಪ್ರಶಸ್ತಿಯನ್ನಾಗಲಿ ಎಂದೂ ಪಡೆದಿರಲಿಕ್ಕಿಲ್ಲ. ಉದಾಹರಣೆಗೆ, ಅಕ್ಕಮಹಾದೇವಿಯಾಗಲಿ, ಸಂಚಿಯ ಹೊನ್ನಮ್ಮನಾಗಲಿ ಯಾವ ಶಾಲೆಗೂ ಹೋಗಿರಲಿಕ್ಕಿಲ್ಲ. ಆದರೆ ಅವರು ಚಿರಸ್ಮರಣೀಯರಾಗಿ ಕನ್ನಡ ಸಾಹಿತ್ಯ ಲೋಕದಲ್ಲಿ ಉಳಿದಿದ್ದಾರೆ.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ, ಬೆಂಗಳೂರು – ೫೬೦ ೦೮೬

# ಋಗ್ವೇದ ಪ್ರವೇಶಿಕೆ–ಐತಿಹ್ಯ ಮತ್ತು ವಾಸ್ತವ

***ಋಗ್ವೇದ ಪ್ರವೇಶಿಕೆ–ಐತಿಹ್ಯ ಮತ್ತು ವಾಸ್ತವ*** *ಡಾ॥ ಜಿ. ರಾಮಕೃಷ್ಣ*
***ಪುಟ : ೨೯೨*** ***ಬೆಲೆ : ರೂ. ೨೦೦***
***ನವಕರ್ನಾಟಕ ಪ್ರಕಾಶನ,*** *ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು–೫೬೦ ೦೦೧*




**ಮು**ಂಬಯಿ (೨೦೧೫) ಮತ್ತು ಮೈಸೂರಿನಲ್ಲಿ (೨೦೧೬) ನಡೆದ ಇಂಡಿಯನ್ ಸೈನ್ಸ್ ಕಾಂಗ್ರೆಸ್ ಸಮಾವೇಶಗಳಲ್ಲಿ 'ಅಭಿವೃದ್ಧಿಗಾಗಿ ವಿಜ್ಞಾನ–ತಂತ್ರಜ್ಞಾನ'ವೇ ಮುಖ್ಯ ಪ್ರಮೇಯವಾಗಿತ್ತು. ಅಲ್ಲಿ ನಡೆದ ಉಪ ಅಧಿವೇಶನಗಳಲ್ಲಿ ವಿಮಾನ ರಚನೆ, ಹವಾಮಾನ ವ್ಯತಿರಿಕ್ತತೆಯಂಥ ವಿಷಯಗಳನ್ನು ವೇದ–ಪುರಾಣಗಳಿಗೆ ತಳುಕಿಸಿ ನಡೆಸಿದ ಚರ್ಚೆಗಳು, ಜಗತ್ತಿನ ವಿವಿಧೆಡೆಯಿಂದ ಬಂದ ವಿಜ್ಞಾನಿಗಳಿಗೆ ಹಾಸ್ಯಾಸ್ಪದವಾಗಿ ಕಂಡವು. ಅವರಿಗಷ್ಟೇ ಅಲ್ಲ, ಭಾರತದಲ್ಲಿದ್ದುಕೊಂಡೇ ಸತ್ಯಾಸತ್ಯಗಳನ್ನು ಪರಾಮರ್ಶಿಸುವವರಿಗೂ ಅವು ವಿಚಿತ್ರ ಎನಿಸಿದುವು. ಪ್ರಾಚೀನತೆಯಲ್ಲಿ ಆಧುನಿಕ ಜ್ಞಾನ ಮತ್ತು ಮಾಹಿತಿಗಳೆಲ್ಲವನ್ನೂ ಬಯಸಿ ಕಾಣಲು ಹೊರಡುವವರು ತಮಗಾಗಲೀ ಇತರರಿಗಾಗಲೀ ಖಚಿತ ದಾರಿಯನ್ನು ತೋರಿಸುವುದಿಲ್ಲ. ಅವರು ತಮ್ಮ ಗೊಂದಲದಲ್ಲಿ ಇತರರನ್ನೂ ಸಿಲುಕಿಸುತ್ತಾರೆ, ಅಷ್ಟೆ. ಕಡೇಪಕ್ಷ, ಯಾವುದು ಕತೆ ಅಥವಾ ಕಲ್ಪನೆ, ಯಾವುದು ಊಹನೆ ಅಥವಾ ವಾಸ್ತವ ಎಂಬುದನ್ನು ತಿಳಿಯುವ ಮನೋವೃತ್ತಿಯಾದರೂ ಬೇಕು. ಅದಿಲ್ಲವಾದರೆ ಪ್ರಗತಿ, ಪರಿವರ್ತನೆಗಳಿಗೆ ಅರ್ಥವಿಲ್ಲ.

ಈ ಹಿನ್ನೆಲೆಯಲ್ಲಿ ಮನುಷ್ಯನ ಸೃಜನಶೀಲತೆಯ ಹಲವು ಮಗ್ಗುಲುಗಳಿಂದ ಋಗ್ವೇದದಲ್ಲಿ ಕಾಣುವ ಸನ್ನಿವೇಶಗಳನ್ನು 'ಋಗ್ವೇದ ಪ್ರವೇಶಿಕೆ' ಸರಳವಾಗಿ ವಿವರಿಸುತ್ತದೆ. 'ಸೂಕ್ತ' ಎಂದರೆ ಕವನ, 'ಮಂತ್ರ' ಎಂದರೆ ಕವನದ ಸಾಲು ಎಂಬ ಸುಲಭವಾದ ನಿರೂಪಣೆಯಿಂದ ಮೊದಲುಗೊಂಡು ಎಲ್ಲ ಪದ್ಯಗಳೂ ಹೇಗೆ ಮಂತ್ರಗಳಾಗುವುದಿಲ್ಲ, ಎಲ್ಲ ಮಂತ್ರಗಳಿಗೂ ಗೂಢಾರ್ಥ ಇದ್ದೇ ಇದೆ ಎಂದು ಭಾವಿಸದೆ ಮುಂದುವರಿಯುವುದು ಹೇಗೆ ಲೇಸು ಎಂದು ತಿಳಿಯಹೇಳಿ ಮಂತ್ರದ ಮೂಲ ಮತ್ತು ಅರ್ಥಗಳನ್ನು ನೀಡುತ್ತಾ ಲೇಖಕರು ದೃಷ್ಟಾಂತಗಳೊಂದಿಗೆ ವಿವರಿಸುತ್ತಾರೆ.

ಅಗ್ನಿ–ಊರ್ವಶಿ, ಯಮ–ಯಮಿ, ಅಶ್ವಿನೀ ದೇವತೆಗಳು, ಸೂರ್ಯಾನ ಮದುವೆ ಸಂಭ್ರಮ – ಇವುಗಳಂತೆ ಕತೆಯ ಹೊಳವಿರುವಂಥವು; ಕಾವ್ಯಸೃಷ್ಟಿ, ಋತದ ಪರಿಕಲ್ಪನೆ, ಜೂಜುಗಾರನ ಅಳಲು, ಶಿವನಲ್ಲದ 'ರುದ್ರ' ಓಷಧಿಗಳು, ದಸ್ಯುಗಳು–ಪಣಿಗಳು, ಕುದುರೆ ಮಾಂಸದ ಸವಿ, ನಾಸದೀಯ ಸೂಕ್ತ, ಪುರುಷ ಸೂಕ್ತ, ಅಸ್ಯವಾಮಸ್ಯ ಸೂಕ್ತ, ಋಗ್ವೇದ ಕಾಲನಿರ್ಣಯ, ಅಥರ್ವವೇದದ ಕಿರುನೋಟ, ಪೃಥ್ವೀ ಸೂಕ್ತದಂತೆ ನಿಶ್ಚಿತ ವಿಷಯಗಳಿರುವಂಥವು – ಈ ರೀತಿ ೨೩ ಅಧ್ಯಾಯಗಳಲ್ಲಿ ನಿರೂಪಣೆ ಸಾಗಿದೆ. ಅಲ್ಲಲ್ಲಿ ಹೆಕ್ಕಿ ಓದುವುದಕ್ಕಿಂತ ಸಾತತ್ಯಕ್ಕೆ ಧಕ್ಕೆಯಿಲ್ಲದಂತೆ ಓದಿದಾಗ, ಲೇಖಕರ ಮುಖ್ಯ ಆಶಯದೊಂದಿಗೆ ಅದನ್ನು ಪ್ರಕಟಿಸುವುದಕ್ಕಾಗಿ ಬಳಸಿದ ಸಮತೋಲನದ ವಸ್ತುನಿಷ್ಠ ಶೈಲಿಯನ್ನೂ ವರ್ತಮಾನ ಕಾಲದಿಂದ ಆರಿಸಿದ ದೃಷ್ಟಾಂತಗಳನ್ನೂ ಸವಿಯಬಹುದು : 'ಪ್ರಾಚೀನವಾದ ಯಾವುದೋ ಆಚರಣೆಯೊಂದಿದ್ದರೆ ಅದನ್ನು ಅಪಥ್ಯವೆಂದು ನಾವು ಇಂದು ಮುಖ ಸಿಂಡರಿಸಿಕೊಳ್ಳಬೇಕಾಗಿಲ್ಲ ; ಅಂತೆಯೇ ಅಂತಹ ಆಚರಣೆಯನ್ನು ಜಾರಿಗೆ ತಂದುಕೊಳ್ಳಬೇಕೆಂಬ ಒತ್ತಾಯವೂ ಇಲ್ಲ'; ಅಣ್ಣನು ತಂಗಿಯನ್ನು ವಿವಾಹವಾಗುವ ಪದ್ಧತಿಗೆ ಸಂಬಂಧಿಸಿದಂತೆ 'ಬುಡಕಟ್ಟು ವ್ಯವಸ್ಥೆಯ ಒಂದು ಹಂತದ ವಿದ್ಯಮಾನ ಅದು. ಯಾವಾಗಲೂ ಹಾಗಿತ್ತೆಂದಾಗಲಿ, ಎಲ್ಲ ಬುಡಕಟ್ಟುಗಳಲ್ಲೂ ಅದೇ ಪದ್ಧತಿ ಇತ್ತೆಂದಾಗಲಿ ಇದರರ್ಥವಲ್ಲ...', 'ಇಂದಿನ ಮಹಿಳೆಯ ಪರಿಸ್ಥಿತಿಗೆ ಭಿನ್ನವಾದ ಸನ್ನಿವೇಶಗಳನ್ನು ಋಗ್ವೇದವು ಬಯಸುತ್ತದೆ, ಆದೇಶಿಸುತ್ತದೆ. ವಶವರ್ತಿಗಳಾಗುವುದು ಋಗ್ವೇದದ ಆಶಯವಲ್ಲ.', 'ವಿಸ್ಮಯದಿಂದ ವಿಜ್ಞಾನದತ್ತ ಹೆಜ್ಜೆ ಹಾಕಲು ಋತ ಒಂದು ಸಾಧನೆ... ಋಗ್ವೇದದಲ್ಲಿ ಅಂಥ ಅನುಭವದ ಕಾಣ್ಕೆ ಇದೆ', 'ಋತ ಮತ್ತು ಓಷಧಿ ಇವೆರಡನ್ನೂ ಋಗ್ವೇದದಲ್ಲಿ ವೈಜ್ಞಾನಿಕ ಚಿಂತನೆಯ ಮೂಲ ಬೇರುಗಳೆನ್ನಬಹುದು', 'ಗಣಕಯಂತ್ರವೇನೂ ಇಲ್ಲದಿದ್ದಾಗ ಜರುಗಿದ ಎರಡು ಪ್ರಾಚೀನ ಅದ್ಭುತಗಳು ನಮ್ಮಲ್ಲಿವೆ : ಒಂದು ಋಗ್ವೇದವನ್ನು ವಿಂಗಡಿಸಿ ಜೋಡಿಸಿರುವ ವಿಧಾನ; ಇನ್ನೊಂದು, ಪಾಣಿನಿಯ ಅಷ್ಟಾಧ್ಯಾಯೀ ಎಂಬ ಗ್ರಂಥ.'

ನಾಗರಿಕತೆಯ ಇತಿಹಾಸದಲ್ಲಿ ಮೊತ್ತಮೊದಲ ಸ್ಪಷ್ಟ ದಾಖಲೆಯಾದ ಋಗ್ವೇದದ ವಾಸ್ತವ ಮಹತ್ವವನ್ನೂ ಸ್ಥಾನವನ್ನೂ ಈ ಕೃತಿಯಿಂದ ಯಾವುದೇ ಪೂರ್ವಗ್ರಹವಿಲ್ಲದೆ ತಿಳಿಯಬಹುದು.

***– ಅಡ್ಯನಡ್ಕ ಕೃಷ್ಣ ಭಟ್***

# ಅಬ್ಬಾಸ್ ಕೈರೋಸ್ತಾಮಿ

ಬಿ. ಎ. ಸಂವರ್ತ (ಸಾಹಿಲ್)

ಶಾಹ್ ವಿರುದ್ಧ ಮತ್ತು ಸೆನ್ಸಾರ್ ವಿರುದ್ಧ ಬಂಡಾಯದ ಕಹಳೆ ಮೊಳಗಿದಾತ ಅಬ್ಬಾಸ್ ಎಂದು ಬಹಳಷ್ಟು ಜನ ಅಭಿಪ್ರಾಯಪಡುತ್ತಾರೆ. ಆದರೆ ಅದು ಅಬ್ಬಾಸ್ ಕೈರೋಸ್ತಾಮಿಯ ಪ್ರತಿಭೆಯನ್ನು ಸೀಮಿತಗೊಳಿಸಿದಂತಾಗುತ್ತದೆ. ಆತ ಪ್ರಗತಿಪರನಾಗಿದ್ದ ಮತ್ತು ಬದುಕಿನ ಎಲ್ಲಾ ರೀತಿಯ ಶೋಷಣೆಗಳಿಗೆ ವಿರೋಧಿಯಾಗಿದ್ದ. ಆದರೆ ಅವನ ಬಂಡಾಯ ಕೇವಲ ಸರ್ಕಾರ, ಆಡಳಿತದ ವಿರುದ್ಧ ಮಾತ್ರವಾಗಿರದೆ ಬದುಕು, ಪ್ರಕೃತಿ, ಲೋಕ, ಸಮಾಜ ಎಲ್ಲದರ ವಿರುದ್ಧವೂ ಆಗಿತ್ತು. ಶೋಷಣೆಯನ್ನು ಕೇವಲ ಘೋಷಣೆಯ ಮೂಲಕ ವಿರೋಧಿಸದ ಅಬ್ಬಾಸ್ ಕೈರೋಸ್ತಾಮಿ ಕಲೆಯ ಮೂಲಕ ಬದುಕನ್ನು ಬದಲಿಸಬಹುದು, ಬೇರೆಯದಾಗಿಯೇ ಗ್ರಹಿಸಬಹುದು ಎಂದು ತೋರಿಸಿಕೊಟ್ಟ . ಅವನಲ್ಲಿ ಸಿದ್ಧಾಂತವನ್ನೂ ಮೀರಿದ ಲೋಕಜ್ಞಾನ, ಲೋಕದೃಷ್ಟಿ ಇತ್ತು. ಹಾಗಾಗಿ ಅವನು ಬಂಡಾಯವನ್ನು ಒಪ್ಪದ ಮಂದಿಗೂ ತನ್ನ ಕಲೆಗಾಗಿ ಇಷ್ಟವಾಗುತ್ತಾನೆ ಮತ್ತು ಘೋಷಣೆಯಾಗದೆ, ನೀತಿಬೋಧೆಯೂ ಆಗದೆ ಕಲಾತ್ಮಕವಾಗಿ ಸೃಜನಾತ್ಮಕವಾಗಿ ಮನಸ್ಸಿಗೆ ತಟ್ಟುವಂತೆ ಸಂವಹನ ನಡೆಸಿ ವೀಕ್ಷಕರ ಮನಸ್ಸನ್ನೂ ಬದಲಿಸುತ್ತಾನೆ, ನೋಟ ಬದಲಿಸುತ್ತಾನೆ. ಅದುವೇ ಅಬ್ಬಾಸ್ ಕೈರೋಸ್ತಾಮಿಯ ಹೆಗ್ಗಳಿಕೆ.

೧೯೯೫ನೇ ಇಸವಿ ಸಿನಿಮಾ ಎಂಬ ಕಲೆ ಲ್ಯೂಮಿಯೇರ್ ಸಹೋದರರ ಅನ್ವೇಷಣೆಯಿಂದಾಗಿ ಜನಿಸಿ ನೂರು ವರ್ಷ ಪೂರೈಸಿದೆ. ಆ ವರ್ಷ ಜಗತ್ತಿನ ನಲವತ್ತು ಸಿನಿಮಾ ನಿರ್ದೇಶಕರು ಒಟ್ಟು ಸೇರಿ ಲ್ಯೂಮಿಯೇರ್ ಸಹೋದರರು ತಮ್ಮ ಮೊದಲ ಚಲನಚಿತ್ರ 'ಅರೈವಲ್ ಆಫ್ ಎ ಟ್ರೈನ್'ಅನ್ನು ಚಿತ್ರೀಕರಿಸಿದ ಕ್ಯಾಮೆರಾದಲ್ಲಿ ಒಂದು ನಿಮಿಷದ ಸಿನಿಮಾ ಮಾಡಿ ಆ ಮುಖಾಂತರ ಸಿನಿಮಾ ಎಂಬ ಕಲೆಯ ನೂರನೇ ಹುಟ್ಟುಹಬ್ಬವನ್ನು ಆಚರಿಸುವುದು ಎಂದು ನಿರ್ಧರಿಸಲಾಯಿತು. 'ಲ್ಯೂಮಿಯೇರ್ ಅಂಡ್ ಕಂಪನಿ' ಎಂಬ ಈ ಒಂದು ನಿಮಿಷದ ಚಿತ್ರ ಸರಣಿಯಲ್ಲಿ ನಿರ್ದೇಶಕರಿಗೆ ಮೂರು ನಿಯಮ ಪಾಲಿಸುವುದು ಕಡ್ಡಾಯವಾಗಿತ್ತು. ಆ ನಿಯಮಗಳು ಹೀಗಿದ್ದವು :

೧. ಸಿನಿಮಾದ ಅವಧಿ ೫೨ ಸೆಕೆಂಡು ಮೀರಿರಬಾರದು.

೨. ಕ್ಯಾಮೆರಾ/ ಲೆನ್ಸ್ ಚಲನೆ, ಕೃತಕ ಬೆಳಕು ಮತ್ತು ಕೃತಕ ಧ್ವನಿ ನಿಷಿದ್ಧ.

೩. ಮೂರು ಟೇಕ್ ಒಳಗಡೆ ಚಿತ್ರ ತಯಾರಿಸಬೇಕು.

ಈ ಸರಣಿಯಲ್ಲಿ ಅತ್ಯುತ್ತಮ ಸಿನಿಮಾ ಎಂದು ಗುರುತಿಸಲ್ಪಡುವ ೫೩ ಸೆಕೆಂಡುಗಳ ಸಿನಿಮಾ 'ಡಿನ್ನರ್ ಫಾರ್ ಒನ್' ಅನ್ನು ನಿರ್ದೇಶಿಸಿದ್ದು ಆ ಹೊತ್ತಿಗೆ ಎರಡೂವರೆ ದಶಕದಿಂದ ಸಿನಿಮಾ ತಯಾರಿಸುತ್ತಿದ್ದರೂ ಆಗಷ್ಟೇ, ಅಂದರೆ ೯೦ರ ದಶಕದಲ್ಲೇ, ಜಗತ್ತಿಗೆಲ್ಲ ಪರಿಚಯವಾಗಿದ್ದ ಇರಾನಿ ನಿರ್ದೇಶಕ ಅಬ್ಬಾಸ್ ಕೈರೋಸ್ತಾಮಿ.

ಒಂದು ಕಾವಲಿಯ ಮೇಲೆ ಒಂದು ತುಂಡು ಬೆಣ್ಣೆ ಬೀಳುತ್ತದೆ. ಬಿಸಿಗೆ ಹಗುರವಾಗಿ ಆ ಬೆಣ್ಣೆ ತುಂಡು ಕರಗುತ್ತದೆ. ಅದಾಗುವ ಹೊತ್ತಿಗೆ ಫೋನ್ ರಿಂಗ್ ಆಗುತ್ತದೆ. ಫೋನ್ ಕರೆಯನ್ನು ಸ್ವೀಕರಿಸಲಾಗುತ್ತದೆ. 'ಹಲೋ' ಎಂಬ ಸ್ವರ ಕೇಳಿ ಬರುತ್ತದೆ. ಆ ಕಡೆಯಿಂದ ಸ್ವರ ಬರುತ್ತಿದ್ದಂತೆ ಒಂದು ಮೊಟ್ಟೆ ಕಾವಲಿಯ ಮೇಲೆ ಒಡೆದು ಸುರಿಯುತ್ತದೆ. ಫೋನ್ ಮೂಲಕ ಬರುತ್ತಿರುವ ದನಿ 'ಮಾತನಾಡು' ಎಂದು ಬೇಡುತ್ತದೆ. 'ನೀನು ಮನೆಯಲ್ಲಿಯೇ ಇದ್ದೀಯ ಎಂದು ಗೊತ್ತು. ದಯವಿಟ್ಟು ಮಾತನಾಡು' ಎಂದು ವಿನಂತಿಸಿಕೊಳ್ಳುತ್ತದೆ. ಎರಡನೇ ಮೊಟ್ಟೆ ಕಾವಲಿಯ ಮೇಲೆ ಚೆಲ್ಲುತ್ತದೆ. 'ದಯವಿಟ್ಟು ಮಾತನಾಡು,' ಎಂದು ಬೇಡಿಕೊಳ್ಳುತ್ತದೆ ಫೋನಿನಿಂದ ತೇಲಿಬರುತ್ತಿರುವ ಸ್ವರ. ಆಮ್ಲೆಟ್ ತಯಾರಾಗುತ್ತದೆ. ಕಾವಲಿಯನ್ನು ಗ್ಯಾಸ್ ಒಲೆಯ ಮೇಲಿಂದ ತೆಗೆಯಲಾಗುತ್ತದೆ. ಫೋನ್ ಕರೆ ಕಟ್ ಆದ 'ಕೂ ಕೂ' ದನಿ ಕೇಳುತ್ತದೆ.

ಇದು ಅಬ್ಬಾಸ್ ಕೈರೋಸ್ತಾಮಿ ನಿರ್ದೇಶನದ ೫೩ ಸೆಕೆಂಡುಗಳ ಚಲನಚಿತ್ರ.

ಕೈರೋಸ್ತಾಮಿ ತನ್ನ ಚಿತ್ರದಲ್ಲಿ ಧ್ವನಿಯನ್ನು ಚಿತ್ರದ ಅವಿಭಾಜ್ಯ ಅಂಗವನ್ನಾಗಿಸಿ ಎರಡನೇ ನಿಯಮವನ್ನು ತನ್ನ ಕಲ್ಪನೆ, ಚಿತ್ರಕತೆಯ ಮುಖಾಂತರ ಮುರಿಯುತ್ತಾನೆ. ೫೩ ಸೆಕೆಂಡುಗಳ ಈ ಚಿತ್ರ ಅಬ್ಬಾಸ್ ಕೈರೋಸ್ತಾಮಿಯ ಒಳಗಿರುವ ಬಂಡಾಯಗಾರನನ್ನು ಮತ್ತು ಕನಿಷ್ಠತೆಯನ್ನು ಗರಿಷ್ಠವಾಗಿ ಉಪಯೋಗಿಸುವ ಅಬ್ಬಾಸ್‌ನ ಶೈಲಿಯನ್ನು ಉತ್ಕೃಷ್ಟ ರೀತಿಯಲ್ಲಿ ತೋರಿಸುತ್ತದೆ.

ಅಬ್ಬಾಸ್ ಕೈರೋಸ್ತಾಮಿ ಇರಾನ್ ದೇಶದ ಆಚೆಗೆ ಮೊತ್ತ ಮೊದಲ ಬಾರಿಗೆ ಗುರುತಿಸಲ್ಪಟ್ಟ 'ವೇರ್ ಈಸ್ ಮೈ ಫ್ರೆಂಡ್ಸ್ ಹೌಸ್ ?' ಸಿನಿಮಾದಲ್ಲಿ ಓರ್ವ ಶಾಲಾ ಬಾಲಕ ತಪ್ಪಿ ತನ್ನ ಸಹಪಾಠಿಯ ಹೋಂವರ್ಕ್ ಪುಸ್ತಕವನ್ನು ತನ್ನ ಚೀಲಕ್ಕೆ ತುಂಬಿ ಮನೆಗೆ ತಂದುಬಿಡುತ್ತಾನೆ. ಆತ ಹೋಂವರ್ಕ್ ಮಾಡದೆ ಇದ್ದರೆ ಮಾರನೇ ದಿನ ಮೇಷ್ಟ್ರ ಕೈಯಲ್ಲಿ ಬೈಸಿಕೊಳ್ಳಬೇಕಾಗುತ್ತದೆ ಎಂದು ತಿಳಿದಿರುವ ಈತ ತನ್ನ ಸಹಪಾಠಿಗೆ ಪುಸ್ತಕ ಮರಳಿಸಲು ಅವನ ಮನೆಯನ್ನು ಹುಡುಕುತ್ತಾ ಹೋಗುತ್ತಾನೆ. ದಾರಿಯುದ್ದಕ್ಕೂ ಆತ ಭೇಟಿಯಾಗುವ ಮಂದಿ, ಅವನು ಕಾಣುವ ಜನ, ಅವನು ಹಾದುಹೋಗುವ ದಾರಿ, ಅಲ್ಲಿನ ಬದುಕು ಮತ್ತು ಅವುಗಳೆಲ್ಲದರೊಳಗೆ ಅಂತರ್ಗತವಾಗಿರುವ ಸೌಂದರ್ಯ ಮತ್ತು ಕಠೋರತನ ಸಿನಿಮಾದುದ್ದಕ್ಕೂ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಅವನು ಗೊತ್ತೇ ಇಲ್ಲದ ದಾರಿಯನ್ನು



ಕ್ರಮಿಸಲು ಕಾರಣ ಮಾಸ್ತರರ ಭಯ ಮತ್ತು ಅವರು ನೀಡುವ ಶಿಕ್ಷೆಯ ಬಗೆಗಿನ ಹೆದರಿಕೆ. ಕೊನೆಗೂ ಸಿಗದ ಮಿತ್ರನ ಹೋಂವರ್ಕ್ ರಾತ್ರಿ ಇಡೀ ಕುಳ್ಳಿ ತಾನೇ ಮುಗಿಸಿ ಮಾರನೇ ದಿನ ಮಾಸ್ತರರು ನೋಡುವ ಮೊದಲೇ ಸಹಪಾಠಿಗೆ ನೀಡುತ್ತಾನೆ.

ಮುಗ್ಧ ಬದುಕನ್ನು ಭಯಭೀತಗೊಳಿಸುವ ಶಿಸ್ತು, ಶಿಕ್ಷೆ, ಇವುಗಳ ಕುರಿತ ಭಯ, ಲೋಕದ ಕಠೋರತನ, ಅದನ್ನು ಹಾದುಹೋಗುವ ಛಲ ಇವುಗಳೆಲ್ಲವನ್ನೂ ಈ ಚಲನಚಿತ್ರ ತೋರಿಸುತ್ತದೆ. ಆದರೂ ಅವಕ್ಕೆಲ್ಲಕ್ಕಿಂತ ಮುಖ್ಯವಾಗಿ ಸರಿ-ತಪ್ಪು, ನ್ಯಾಯ-ಅನ್ಯಾಯ- ಈ ಪ್ರಶ್ನೆಗಳ ಆಚೆಗೆ ಸಾಧ್ಯವಾಗುವ ಸಹೋದರತೆ ಮತ್ತು ಮಾನವೀಯತೆಯನ್ನು ಎತ್ತಿಹಿಡಿಯುವ ಪರಿಹಾರ ಮಾರ್ಗದ ಸಾಧ್ಯತೆ ಮತ್ತು ಅನಿವಾರ್ಯತೆಯನ್ನು ತೋರಿಸುತ್ತದೆ ಮತ್ತು ಸಂಭ್ರಮಿಸುತ್ತದೆ.

ಇಲ್ಲಿ 'ಪರಿಹಾರ' ವೀಕ್ಷಕರಲ್ಲಿ ಒಂದು ಬಗೆಯಲ್ಲಿ ಸಾಂತ್ವನ ಹೇಳಿದರೂ, ಅಬ್ಬಾಸ್ ಕೈರೋಸ್ತಾಮಿಗೆ 'ಪರಿಹಾರ' ಅಥವಾ 'ಗುರಿ' ಇಲ್ಲ, 'ನಿರ್ಣಯ' ಮುಖ್ಯವಲ್ಲ. ಬದಲಾಗಿ, ಪರಿಹಾರ ಕಂಡುಕೊಳ್ಳುವ ಮಾರ್ಗದಲ್ಲಿ ಆಗುವ ಅನುಭವ ಕೈರೋಸ್ತಾಮಿಗೆ ಹೆಚ್ಚು ಮುಖ್ಯ.

ಆತನ ಪ್ರಪ್ರಥಮ ಪೂರ್ಣಪ್ರಮಾಣದ ಚಲನಚಿತ್ರ 'ಮೊಸಾಫಿರ್' ಉರ್ಫ್ 'ದಿ ಟ್ರಾವೆಲರ್' ಅದರ ಚಿತ್ರಕತೆಯಲ್ಲಿ ತನ್ನ ರಾಷ್ಟ್ರೀಯ ತಂಡ ಆಡುವ ಫುಟ್ಬಾಲ್ ಪಂದ್ಯ ನೋಡಲು ಹೋಗಬೇಕು. ಅದಕ್ಕಾಗಿ ಹಣ ಒಟ್ಟು ಮಾಡಲು ಆತ ಕಷ್ಟಪಟ್ಟು ದೂರದ ಊರಲ್ಲಿ ಇರುವ ಸ್ಟೇಡಿಯಂಗೆ ಹೋಗಲು ಬಹಳ ಕಷ್ಟಪಡುತ್ತಾನೆ. ಕೊನೆಗೆ ಹಾಗೂ ಹೀಗೂ ಮಾಡಿ ಪಂದ್ಯ ನೋಡಲು ಸ್ಟೇಡಿಯಂಗೆ ಹೋಗುತ್ತಾನೆ. ಆದರೆ ಪಯಣದಲ್ಲಿ ದಣಿದ ಆತ ಪಂದ್ಯ ನಡೆಯುವ ಹೊತ್ತಿಗೆ ನಿದ್ದೆ ಹೋಗುತ್ತಾನೆ. ಆ ಚಿತ್ರದ ಅಂತ್ಯ ಒಂದು ರೀತಿಯಲ್ಲಿ 'ಆ್ಯಂಟಿ-ಕ್ಲೈಮ್ಯಾಕ್ಸ್' ಅಂತ ಅನ್ನಿಸಿದರೂ ಅದು 'ಅಂತ್ಯ'ಕ್ಕಿಂತ 'ಯಾತ್ರೆ', 'ಮಾರ್ಗ' ಮತ್ತು ಅಲ್ಲಿ ಆಗುವ 'ಅನುಭವ' ಮುಖ್ಯ ಎಂಬುದು ಅಬ್ಬಾಸ್ ಕೈರೋಸ್ತಾಮಿಯ ನಿಲುವು.

ಆತನ 'ದಿ ವಿಂಡ್ ವಿಲ್ ಕ್ಯಾರಿ ಅಸ್', 'ಲೈಫ್ ಗೋಸ್ ಆನ್', 'ಥ್ರೂ ದಿ ಆಲಿವ್ ಟ್ರೀಸ್,' 'ಟೇಸ್ಟ್ ಎ ಚೆರಿ', 'ಸರ್ಟಿಫೈಡ್ ಕಾಪಿ' ಎಲ್ಲಾ ಸಿನಿಮಾಗಳಲ್ಲೂ ಯಾತ್ರೆ, ಮಾರ್ಗ ಮತ್ತು ಅಲ್ಲಿ ಆಗುವ ಅನುಭವಗಳೇ ಮುಖ್ಯ. ಈ ಎಲ್ಲಾ ಸಿನಿಮಾಗಳ 'ಅಂತ್ಯ' ತುಂಬ ಅಸ್ಪಷ್ಟವಾಗಿರುವುದು ಬಹುಶಃ ಅದು 'ಆ್ಯಂಟಿ-ಕ್ಲೈಮ್ಯಾಕ್ಸ್' ತರಹ ಅನ್ನಿಸದೆ ಇರಲಿ ಎಂಬ ಕಾರಣಕ್ಕೂ ಇರಬಹುದು.

ಆದರೆ ಆ 'ಅಸ್ಪಷ್ಟ' / 'ಅಪೂರ್ಣ' ಅಂತ್ಯಕ್ಕೆ ಮತ್ತೊಂದು ಕಾರಣವೂ ಇದೆ. 'ಸಿನಿಮಾದಲ್ಲಿ ಸಾಮಾನ್ಯವಾಗಿ ಹೇಳಬೇಕು ಎಂದಿರುವ ಸಂಗತಿಯನ್ನು ನಿರ್ದೇಶಕರು ಹೇಳಿಯೋ ಇಲ್ಲ ತೋರಿಸಿಯೋ ವೀಕ್ಷಕರ ಮುಂದಿಡುತ್ತಾರೆ. ನಾನು ಹೇಳದೆಯೇ, ತೋರಿಸದೆಯೇ ಅದನ್ನು ವೀಕ್ಷಕರು ಗಮನಿಸುವಂತೆ ಮಾಡಲು ಪ್ರಯತ್ನಿಸುತ್ತೇನೆ. ನೀವು ಹೇಳಬೇಕೆಂದುಕೊಂಡದ್ದನ್ನು ಹೇಳಿದರೆ ಆ ಮಾತನ್ನೊಂದೇ ಹೇಳಿದಂತಾಗುತ್ತದೆ. ಅದೇ ಹೇಳದೆ ಉಳಿದರೆ ಬಹಳಷ್ಟು ಹೇಳಿದಂತೆ ಆಗುತ್ತದೆ,' ಎಂದು ಸಂದರ್ಶನವೊಂದರಲ್ಲಿ ಅಬ್ಬಾಸ್ ಕೈರೋಸ್ತಾಮಿ ಹೇಳಿದ್ದಿದೆ. ಇದು ಅಬ್ಬಾಸ್ ಕೈರೋಸ್ತಾಮಿಗೆ ಬದುಕಿನಲ್ಲಿರುವ ಅನಂತ ಸಾಧ್ಯತೆಗಳ ಕುರಿತಾಗಿ ಇದ್ದ ವಿಶ್ವಾಸವೂ ಹೌದು.

ಬದುಕಿನ ಅನಂತ ಸಾಧ್ಯತೆಗಳು ಮಾತ್ರವಲ್ಲ, ಸಿನಿಮಾ ಮಾಧ್ಯಮದ ಅನಂತ ಸಾಧ್ಯತೆಯೂ ಸಹ ಕೈರೋಸ್ತಾಮಿಯ ಆಸಕ್ತಿಯ ವಿಷಯ, ಅನ್ವೇಷಣೆಯ ವಿಷಯ.

ಆತ್ಮಹತ್ಯೆಗೆ ಸಜ್ಜಾಗಿರುವ ವ್ಯಕ್ತಿ ತನ್ನನ್ನು ಹೂಳಲು ಒಬ್ಬ ವ್ಯಕ್ತಿಯನ್ನು ಹುಡುಕುವ 'ಟೇಸ್ಟ್ ಎ ಚೆರಿ' ಸಿನಿಮಾ, ತಾನು ನಿರ್ದೇಶಿಸಿದ 'ವೇರ್ ಈಸ್ ಮೈ ಫ್ರೆಂಡ್ಸ್ ಹೌಸ್' ಸಿನಿಮಾ ಚಿತ್ರೀಕರಿಸಿದ ಪ್ರದೇಶ (ಕೋಕರ್) ಭೂಕಂಪಕ್ಕೆ ಒಳಗಾಗದ ಮೇಲೆ ಅಲ್ಲಿಗೆ ಭೇಟಿ ನೀಡಿ ತನ್ನ ಸಿನಿಮಾದ ನಟ ಬದುಕುಳಿದಿದ್ದಾನೆಯೇ ಎಂದು ಹುಡುಕುವ 'ಲೈಫ್ ಗೋಸ್ ಆನ್' ಸಿನಿಮಾ, ಮುದುಕಿಯೊಬ್ಬಳ ಸಾವಿಗೆ ಕಾಯುತ್ತಾ ತನ್ನ ಬದುಕಲ್ಲದಂಥ ಬದುಕನ್ನು ಪ್ರಶಂಸಿಸಲು ಕಲಿಯುವ ಓರ್ವನ ಕತೆಯಾದ 'ದಿ ವಿಂಡ್ ವಿಲ್ ಕ್ಯಾರಿ ಅಸ್', ಈ ಎಲ್ಲದರಲ್ಲೂ ಅದಮ್ಯ ಜೀವನ ಪ್ರೀತಿ ಮತ್ತು ಬದುಕಿನ ಅನಂತ ಸಾಧ್ಯತೆಗಳನ್ನು ಅನ್ವೇಷಿಸಿದರೆ, ಸಾಕ್ಷ್ಯಚಿತ್ರ ಮತ್ತು ಕಲ್ಪಿತ-ಕಥನ ಉಳ್ಳ ಚಿತ್ರಗಳ ಮಿಶ್ರ ರೂಪದಲ್ಲಿ ಆತ ಹೆಣೆದ 'ಕ್ಲೋಸ್ - ಅಪ್', 'ಲೈಫ್ ಗೋಸ್ ಆನ್,' 'ಶಿರೀನ್' ಮತ್ತು ಆತನ ಪ್ರಯೋಗಾತ್ಮಕ ಸಿನಿಮಾಗಳಾದ 'ಫೈವ್', 'ಟೆನ್'ಗಳಲ್ಲದೆ ಕಿರುಚಿತ್ರಗಳಾದ



*'ವೇರ್ ಈಸ್ ಮೈ ಫ್ರೆಂಡ್ಸ್ ಹೌಸ್ ?' ಚಿತ್ರದ ಒಂದು ದೃಶ್ಯ*

'ಕಲರ್ಸ್', 'ಕೋರಸ್' ಸಿನಿಮಾ ಮಾಧ್ಯಮದ ಅನಂತ ಸಾಧ್ಯತೆಗಳನ್ನು ಅನ್ವೇಷಿಸಿದ ಸಿನಿಮಾಗಳಾಗಿವೆ.

ಬದುಕಲು ಮತ್ತು ಬದುಕನ್ನು ಗ್ರಹಿಸಲು, ಅರ್ಥೈಸಿಕೊಳ್ಳಲು ಮತ್ತು ಸಹ್ಯಗೊಳಿಸಲು ತಾನು ಆಯ್ಕೆ ಮಾಡಿಕೊಂಡ ಮಾಧ್ಯಮದ ಕುರಿತಾಗಿ ಅಪಾರ ನಿಷ್ಠೆ ಮತ್ತು ಪ್ರೀತಿ ಉಳ್ಳ ಅಬ್ಬಾಸ್ ಕಲೆ ಮತ್ತು ಬದುಕು ಎರಡನ್ನೂ ಬೇರ್ಪಡಿಸಲಾಗದಂತೆ ನೋಡಿಕೊಳ್ಳುತ್ತಾನೆ ಮತ್ತು ಪ್ರಸ್ತುತಪಡಿಸುತ್ತಾನೆ. ಸ್ವತಃ ಕವಿಯೂ ಆದ ಅಬ್ಬಾಸ್ ಕೈರೋಸ್ತಾಮಿಯ ಒಂದು ಪುಟ್ಟ ಕವಿತೆ ಹೀಗಿದೆ: 'ಶರತ್ಕಾಲದ ಮಧ್ಯಾಹ್ನ / ಮರವೊಂದರಿಂದ ಉದುರಿದ ಎಲೆ / ನಿಧಾನವಾಗಿ ಬೀಳುತ್ತದೆ / ತನ್ನದೇ ನೆರಳ ಮೇಲೆ.' ಇಲ್ಲಿ ಎಲೆ ಮತ್ತು ಅದರ ನೆರಳು ಹೇಗೆ ನಿಧಾನಕ್ಕೆ ಒಂದಾಗದಿದ್ದರೂ ಹತ್ತಿರವಾಗಿ ತಮ್ಮ ಅದ್ವೈತ ಅಳಿಸದಿದ್ದರೂ ಸ್ಪಷ್ಟವಾಗಿ ದ್ವೈತವಾಗುಳಿಯದೆ ಇರುವುದೋ ಹಾಗೆ ಅಬ್ಬಾಸ್ ಕೈರೋಸ್ತಾಮಿಯ ಕೈಯಲ್ಲಿ ಬದುಕು ಮತ್ತು ಕಲಾ ಮಾಧ್ಯಮ ಒಂದಕ್ಕೊಂದು ಬಹಳ ಹತ್ತಿರವಾಗುತ್ತವೆ.

'ತ್ರೂ ದಿ ಆಲಿವ್ ಟ್ರೀಸ್' ಸಿನಿಮಾದಲ್ಲಿ ಭೂಕಂಪದ ಸ್ಥಳದಲ್ಲಿ ಕಲ್ಪಿತ-ಕತಾ ಚಲನಚಿತ್ರವನ್ನು ಚಿತ್ರೀಕರಿಸುವ ನಿರ್ದೇಶಕ ಅಪಘಾತದ ನಡುವೆಯೂ ಚಿತ್ರೀಕರಣದ ಮೂಲಕ ನಿಜ ಬದುಕಿನಲ್ಲಿ ಪ್ರೇಮ ಅರಳುವಂತೆ ಮಾಡುತ್ತಾನೆ. ಈ ಸಿನಿಮಾ ತಯಾರಿಸಿ ತಾನೇ ತನ್ನ ಹಿಂದಿನ ಸಿನಿಮಾ 'ಲೈಫ್ ಗೋಸ್ ಆನ್,' ಸಂದರ್ಭದಲ್ಲಿ ಸಾಕ್ಷ್ಯಚಿತ್ರದಂತಹ ಸಿನಿಮಾದ ನಡುವಿನಲ್ಲಿ ನೆಟ್ಟ ಕಲ್ಪಿತ-ಕಥೆಯ ಒಂದು ಭಾಗದಿಂದ ಸ್ಫೂರ್ತಿ ಪಡೆದು, 'ಲೈಫ್ ಗೋಸ್ ಆನ್'ನ ಚಿತ್ರೀಕೃತವಾಗಿದ್ದು ಕೋಕರ್ ಪ್ರದೇಶದಲ್ಲಿ. ಭೂಕಂಪಕ್ಕೆ ನೆಲಕ್ಕುರುಳಿದ ಬದುಕಿನ ನಡುವೆ, ಆ ಬದುಕನ್ನು ಮತ್ತು ಧ್ವಂಸಗೊಂಡ ಊರುಗಳ ನಿಜ ಚಿತ್ರಣ ನೀಡುತ್ತಾ ಅವುಗಳ ನಡುವೆಯೂ ಬದುಕು ನಿಲ್ಲದೆ ಚಲಿಸುತ್ತಿರುತ್ತದೆ ಎಂದು ಆ ಸಿನಿಮಾ ಹೇಳುತ್ತದೆ. ಈ ಎರಡು ಸಿನಿಮಾಗಳಲ್ಲಿ ಅವುಗಳ ಒಳಗೊಳಗೇ ಇರುವ ಪರಸ್ಪರ ಸಂಬಂಧ ಸ್ಪಷ್ಟವಾಗಿ ಕಾಣಿಸುತ್ತದೆ. ಆದರೆ ಅಲ್ಲಿ ಇನ್ನೊಂದು ಸಂಬಂಧವೂ ಇದೆ. ಅದೇ ಕಲೆ ಮತ್ತು ಬದುಕಿನ ನಡುವಿನ ಅವಿನಾಭಾವ ಸಂಬಂಧ. 'ಲೈಫ್ ಗೋಸ್ ಆನ್' ಬದುಕಿನ ನೈಜ ಘಟನೆಯಿಂದ ಪ್ರೇರಣೆಗೊಂಡು ಸಿನಿಮಾ ರೂಪ ತಾಳುತ್ತದೆ. ಅಂದರೆ ಸಿನಿಮಾ ಬದುಕಿನಿಂದ ಪಡೆಯುತ್ತದೆ. ಅದೇ 'ತ್ರೂ ದಿ ಆಲಿವ್ ಟ್ರೀಸ್' ಸಿನಿಮಾದಲ್ಲಿ ಕಲೆಯಿಂದ ಬದುಕು ಸಹ್ಯವಾಗುತ್ತದೆ, ಸುಂದರವಾಗುತ್ತದೆ. ಅಂದರೆ ಕಲೆಯಿಂದ ಬದುಕು ಪಡೆದುಕೊಳ್ಳುತ್ತದೆ.

ಆತನ ಮೊದಮೊದಲಿನ ಕಿರು ಚಿತ್ರಗಳಲ್ಲಿ ಒಂದಾದ 'ಆರ್ಡರ್ಲಿ ಆರ್ ಡಿಸಾರ್ಡರ್ಲಿ' ಚಿತ್ರದಲ್ಲಿ ಬದುಕಿಗೆ 'ಶಿಸ್ತು' ಏಕೆ ಅಗತ್ಯ ಎಂಬುದರ ಕುರಿತು

ಚಿತ್ರೀಕರಿಸುತ್ತಾನೆ. ಅದು ನೀತಿಬೋಧೆ ಎಂದು ಅನ್ನಿಸುವಾಗ ಕಲೆಯ ರಚನೆಗೆ ಹೇಗೆ 'ಶಿಸ್ತು' ಒಳ್ಳೆಯದಲ್ಲ ಮತ್ತು ಅದಕ್ಕೆ ಹೇಗೆ ಅವ್ಯವಸ್ಥಿತ ಮಾರ್ಗ ಸೂಕ್ತ ಎಂದು ತೋರಿಸುತ್ತಾನೆ. ಇದು ಬದುಕಿಗೂ ಕಲೆಗೂ ಇರುವ ಭಿನ್ನತೆಯನ್ನು ಮಾತ್ರ ತೋರಿಸದೆ, ಕಲೆಯಲ್ಲಿ ಹೇಗೆ ಬದುಕನ್ನು ಬುಡಮೇಲು ಮಾಡಬಹುದು ಎಂಬುದನ್ನು ತೋರಿಸುತ್ತಾ ಕಲೆಗೆ ಇರುವ ಬಂಡಾಯ ಶಕ್ತಿಯನ್ನೂ ಮನಗಾಣಿಸುತ್ತಾನೆ.

ಬದುಕು ಮತ್ತು ಕಲೆಗಳ ನಡುವಿನ ಸಂಬಂಧ ಅಬ್ಬಾಸ್ ಕೈರೋಸ್ತಾಮಿಯನ್ನು ಆಕರ್ಷಿಸಿದಂತೆಯೇ ಅವನನ್ನು ವಾಸ್ತವ–ಕಲ್ಪನೆ, ಮಕ್ಕಳು–ಬೆಳೆದವರು, ಸತ್ಯ–ಅಸತ್ಯ, ಹಳ್ಳಿ–ಪೇಟೆ ಈ ವಿರುದ್ಧ ಎಂದೆನಿಸುವ, ಆದರೆ ಬಿಡಿಸಲಾಗದ ಸಂಬಂಧ ಹೊಂದಿರುವ ವಿಷಯಗಳ ಅಂತರ್‌ಸಂಬಂಧವೂ ಸಹ ಆಕರ್ಷಿಸುತ್ತದೆ.

'ದಿ ವಿಂಡ್ ವಿಲ್ ಕ್ಯಾರಿ ಅಸ್' ಸಿನಿಮಾದಲ್ಲಿ ಪಟ್ಟಣದಿಂದ ಬರುವ ಚಿತ್ರನಿರ್ದೇಶಕ ಹಳ್ಳಿಯ ಮುದುಕಿಯೊಬ್ಬಳ ಸಾವಿಗೆ ಕಾಯುತ್ತಾನೆ. ಆ ಹಳ್ಳಿಯ ಅಂತ್ಯಕ್ರಿಯೆಯ ರೀತಿಯನ್ನು ಚಿತ್ರೀಕರಿಸಲು ಬಂದಿರುವ ಆತ ಆ ಮುದುಕಿ ಸಾಯುತ್ತಿಲ್ಲ ಎಂದು ಬೇಸರಿಸಿಕೊಂಡರೂ ಕ್ರಮೇಣ ಹಳ್ಳಿ ಬದುಕನ್ನು ಮೆಚ್ಚಲು ಆರಂಭಿಸುತ್ತಾನೆ. ಕೊನೆಗೆ ಆ ಮುದುಕಿಯ ಅಂತ್ಯಕ್ರಿಯೆಯನ್ನು ಚಿತ್ರೀಕರಿಸುವುದಿಲ್ಲ. 'ವೇರ್ ಈಸ್ ಮೈ ಫ್ರೆಂಡ್ಸ್ ಹೌಸ್' ಚಿತ್ರದಲ್ಲಿ ಮಕ್ಕಳ ಮುಗ್ಧತೆ ಮತ್ತು ಬೆಳೆದವರ ಸಣ್ಣತನಗಳು, ಅಸಾಧು ಲೋಕ ಇವುಗಳ ಚಿತ್ರಣವನ್ನು ಚಿತ್ರದುದ್ದಕ್ಕೂ ಕಾಣಿಸುತ್ತಾನೆ ಅಬ್ಬಾಸ್ ಕೈರೋಸ್ತಾಮಿ. 'ಸರ್ಟಿಫೈಡ್ ಕಾಪಿ' ಎಂಬ ಸಿನಿಮಾದಲ್ಲಿ ಅಪರಿಚಿತರು ಎಂದು ಕಾಣಿಸುವ ಲೇಖಕ ಮತ್ತು ಓರ್ವ ಹೆಂಗಸು ದಿನಗಳು ಸಾಗುತ್ತ ಸಾಗುತ್ತ ಬೇರಾದ ಗಂಡ–ಹೆಂಡತಿಯಂತೆ ಕಾಣಿಸುತ್ತಾರೆ. ಅಬ್ಬಾಸ್ ಆ ಮುಖಾಂತರ ಸತ್ಯ–ಅಸತ್ಯಗಳ ಲೋಕವನ್ನು ತೆರೆದು ಅಸತ್ಯದಿಂದ ಸಾಧ್ಯವಾಗುವ ಸತ್ಯಗಳತ್ತ ನಮ್ಮ ಗಮನ ಸೆಳೆಯುತ್ತಾನೆ. ಅದೇ ಅವನ 'ಕ್ಲೋಸ್ ಅಪ್' ಸಿನಿಮಾದಲ್ಲಿ ತಾನು ಚಿತ್ರನಿರ್ದೇಶಕ ಮಕ್ಮಲ್ಬಫ್ ಎಂದು ಹೇಳುವ ಶ್ರೀಸಾಮಾನ್ಯನೊಬ್ಬನ ನಿಜವಾದ ಕೋರ್ಟ್ ಕೇಸ್‌ಅನ್ನು ಚಿತ್ರೀಕರಿಸುವ ಮೂಲಕ ಅಬ್ಬಾಸ್ ವಾಸ್ತವ – ಕಲ್ಪನೆಗಳ ಲೋಕವನ್ನು ಬಿಚ್ಚಿಡುವುದಲ್ಲದೆ ಕಲ್ಪನೆಗಳ ಅಗತ್ಯ ಉಂಟಾಗುವ ಅಸಹಾಯಕತೆ, ದಾರಿದ್ರ್ಯದ ಕಡೆಗೂ ನಮ್ಮ ಗಮನ ಸೆಳೆಯುತ್ತಾನೆ.

'ಕ್ಲೋಸ್ ಅಪ್' ಸಿನಿಮಾದಲ್ಲಿ ತಾನು ಮಕ್ಮಲ್ಬಫ್ ಎಂದು ಹೇಳಿಕೊಳ್ಳುವ ವ್ಯಕ್ತಿಯ ವಿರುದ್ಧ ಪೊಲೀಸ್ ಕೇಸ್ ಆದಾಗ ಅವನನ್ನು ಸಂದರ್ಶಿಸಲು ಹೋದ ಅಬ್ಬಾಸ್ ಆ ಘಟನೆಯನ್ನೇ ಸಿನಿಮಾ ಆಗಿಸುತ್ತಾನೆ. ಅಲ್ಲಿ ಬರುವ ಒಬ್ಬ ಪತ್ರಕರ್ತ ಈ ಘಟನೆ 'ರೋಚಕ'ವಾಗಿದೆ ಎಂದು ಹೇಳುತ್ತಾನೆ. ಆದರೆ ಅದೇ ವ್ಯಕ್ತಿಯನ್ನು ಅಬ್ಬಾಸ್ ಚಿತ್ರಿಸುವ ರೀತಿ ಅತ್ಯಂತ ಮಾನವೀಯವಾಗಿದ್ದು, ಅಲ್ಲಿನ 'ರೋಚಕತೆ'ಯನ್ನು ಮರೆಮಾಚಿಸಿ ನಮ್ಮ ಮುಂದಿಡುತ್ತಾನೆ. ಅಲ್ಲಿನ ರೋಚಕತೆಗೆ ಗಮನ ಕೊಡದೆ ಅಲ್ಲಿನ ಮನಸ್ಸನ್ನು ಅರ್ಥೈಸಿಕೊಳ್ಳಲು ಅಬ್ಬಾಸ್ ಪ್ರಯತ್ನಿಸುತ್ತಾನೆ. ಇದು ಸಮೂಹ ಮಾಧ್ಯಮಕ್ಕೂ ಮತ್ತು ಕಲೆಗೂ ಇರುವ ಸಂಬಂಧ ಎಂದು ಪತ್ರಕರ್ತನಿಗೆ ಮುಖ್ಯವಾದ 'ರೋಚಕತೆ'ಯನ್ನು ತನ್ನ ಕಲೆಯ ಮುಖಾಂತರ ಎದುರಾಗಿ ಅಬ್ಬಾಸ್ ಸ್ಪಷ್ಟಪಡಿಸುತ್ತಾನೆ.

> ## ಮಾಹಿತಿ
>
> 'ಹೊಸತು' ಆಗಸ್ಟ್ ತಿಂಗಳ ಸಂಚಿಕೆಯಲ್ಲಿ ಎಸ್. ಮಾಲತಿಯವರ 'ವೃತ್ತಿರಂಗದ ತೆರೆಮರೆಯ ಪ್ರತಿಭಾವಂತ ಮಹಿಳೆಯರು' ಎಂಬ ಲೇಖನಕ್ಕೆ **ಡಾ॥ ದೇವಿಕಾ ಡಿ. ನಗರಕರ** ಅವರ 'ಉತ್ತರ ಕರ್ನಾಟಕದ ರಂಗಭೂಮಿಗೆ ಮಹಿಳೆಯರ ಕೊಡುಗೆ' ಎಂಬ ಸಂಶೋಧನಾ ಕೃತಿ ಆಕರಗ್ರಂಥ ಎಂಬುದನ್ನು ಓದುಗರ ಗಮನಕ್ಕೆ ತರಲು ಲೇಖಕಿ ತಿಳಿಸಿದ್ದಾರೆ.
>
> –ಸಂ.

ಕೋಕರ್‌ನಲ್ಲಿ ಭೂಕಂಪವಾದಾಗ ಅಲ್ಲಿ ಚಿತ್ರೀಕರಣ ಮಾಡಿದ್ದಕ್ಕೆ ಹಲವೆಡೆಯಿಂದ 'ಸೂತಕದ ಮನೆಯಲ್ಲಿ ಜಾತಕ' ಕದ್ದ ಟೀಕೆಗೆ ಒಳಗಾದ ಅಬ್ಬಾಸ್ ಒಂದು ಸಂದರ್ಶನದಲ್ಲಿ, 'ನಾನು ವಾಸ್ತವವನ್ನು ತಯಾರಿಸುವುದಿಲ್ಲ. ನಾನು ಅದನ್ನು ಒಂದು ಕ್ರಮದಲ್ಲಿ ಜೋಡಿಸುತ್ತೇನೆ ಅಷ್ಟೆ, ಹೂಗಾರ ಹೂವನ್ನು ಜೋಡಿಸಿದಂತೆ. ಆತ ಹೂವನ್ನು ಅರಳಿಸುವುದು ಅಸಾಧ್ಯ' ಎಂದದ್ದಿದೆ.

ಅಬ್ಬಾಸ್‌ನಲ್ಲಿರುವ ಆತ್ಮವಿಮರ್ಶಾತ್ಮಕ ಗುಣ ಅವನ ಸಿನಿಮಾಗಳಲ್ಲಿಯೂ ಕಂಡುಬರುತ್ತದೆ. 'ಲೈಫ್ ಗೋಸ್ ಆನ್' ಚಿತ್ರೀಕರಣ ನಡೆಸಿದುದರ ಕುರಿತಾಗಿಯೇ ನಿರ್ದೇಶಿಸಿದ 'ತ್ರೂ ದಿ ಆಲಿವ್ ಟ್ರೀಸ್' ಒಂದು ಉದಾಹರಣೆಯಾದರೆ, 'ದಿ ವಿಂಡ್ ವಿಲ್ ಕ್ಯಾರಿ ಅಸ್' ಸಿನಿಮಾದಲ್ಲಿ ಆ ಮುದುಕಿಯ ಸಾವಿಗೆ ಕಾಯುತ್ತಿರುವ ನಿರ್ದೇಶಕ ಹಳ್ಳಿಯ ಪುಟ್ಟ ಹುಡುಗನನ್ನು, "ನಾನು ಕೆಟ್ಟವನಾ ?" ಎಂದು ಕೇಳುವುದು ಅಬ್ಬಾಸ್ ತನ್ನ ಕಲೆಯನ್ನು ತಾನೇ ಪ್ರಶ್ನಿಸಿಕೊಳ್ಳುತ್ತಿರುವಂತಿದೆ.

ಸಿನಿಮಾ ಮಾಧ್ಯಮದ ಪ್ರಯೋಗಾತ್ಮಕತೆಯಲ್ಲಿ ಆಸಕ್ತಿ ಹೊಂದಿದ್ದ ಅಬ್ಬಾಸ್ ಕೈರೋಸ್ತಾಮಿ 'ಫೈವ್' ಎಂಬ ತನ್ನ ಸಿನಿಮಾದಲ್ಲಿ ನಿಷ್ಕ್ರಿಯತೆ ಎಂದೆನಿಸುವ ಕ್ಷಣಗಳ ಒಳಗಿನ ಸೌಂದರ್ಯ ಮತ್ತು ಚಲನೆಯನ್ನು ಮಾತ್ರ ತೋರಿಸುವುದಿಲ್ಲ, ಬದಲಾಗಿ ಒಂದೇ ಶಾಟ್, ಅದೂ ದೀರ್ಘವಾದ ಶಾಟ್, ಹೇಗೆ ಭಾವೋತ್ಪತ್ತಿ ಮಾಡುತ್ತದೆ ಎಂಬುದನ್ನು ತೋರಿಸಿಕೊಡುತ್ತಾನೆ. ಅವನ ಈ ಪ್ರಯೋಗಾತ್ಮಕತೆ ಆತನ 'ಶಿರೀನ್' ಎಂಬ ಸಿನಿಮಾದಲ್ಲಿ ಹೊಸ ಮಜಲನ್ನೇ ತಲುಪುತ್ತದೆ.

ಒಂದು ಸಿನಿಮಾ ಹಾಲಿನಲ್ಲಿ ಕುಳಿತು 'ಶಿರೀನ್–ಫರ್ಹಾದ್' ಸಿನಿಮಾವನ್ನು ನೋಡುವ ಹೆಂಗಸರ ಕ್ಲೋಸ್–ಅಪ್ ಶಾಟುಗಳ ಸರಮಾಲೆ 'ಶಿರೀನ್'. ಅವರು ನೋಡುತ್ತಿರುವ ಸಿನಿಮಾ ನಮಗೆ ಕಾಣಿಸುವುದಿಲ್ಲ, ಬರೀ ಕೇಳಿಸುತ್ತದೆ. ಕಾಣಿಸುವುದು ಸಿನಿಮಾ ನೋಡುವ ಹೆಂಗಸರ ಕ್ಲೋಸ್ – ಅಪ್ ಮುಖ ಮಾತ್ರ. ಅವರು ನೋಡುತ್ತಿರುವ ಶಿರೀನ್–ಫರ್ಹಾದ್ ಸಿನಿಮಾದಲ್ಲಿ ಪ್ರೇಮಾಂಕುರವಾದಾಗ ವೀಕ್ಷಕಿಯೊಬ್ಬಳು ನಾಚಿಕೊಳ್ಳುವ ಕ್ಲೋಸ್ – ಅಪ್, ಅವರ ನಡುವೆ ವಿರಹ ಉಂಟಾದಾಗ ಅಳುವ ವೀಕ್ಷಕಿ, ಹೀಗೆ ಭಿನ್ನ ಭಿನ್ನ ಸಂದರ್ಭಕ್ಕೆ ಭಿನ್ನ ಭಿನ್ನರೀತಿಯಲ್ಲಿ ಸ್ಪಂದಿಸುವ ವೀಕ್ಷಕರ ಕ್ಲೋಸ್–ಅಪ್ ಶಾಟುಗಳ ಸರಮಾಲೆ 'ಶಿರೀನ್'. ಇಲ್ಲಿ ನಾವು ವೀಕ್ಷಕರ ಮೂಲಕ ಕಾಣದ ಒಂದು ಸಿನಿಮಾವನ್ನು ನೋಡುತ್ತೇವೆ.

ತಮಾಷೆ ಎಂದರೆ, ಈ ಸಿನಿಮಾ ಅಬ್ಬಾಸ್ ನಿರ್ಮಿಸಿದ ಬಗೆ ಸಿನಿಮಾ ಎಂಬುದು ಒಂದು ವಿಶಿಷ್ಟ ಕಲೆ ಎಂಬುದರ ಬಗ್ಗೆ ಬೆಳಕು ಚೆಲ್ಲುತ್ತದೆ. ಸುಮಾರು ನೂರು ಮಂದಿ ಹೆಂಗಸರನ್ನು ಒಂದು ಕೋಣೆಯಲ್ಲಿ ಕುಳ್ಳಿರಿಸಿ ಅವರೆದುರಿನ ಗೋಡೆಯ ಮೇಲೆ ಮೂರೇ ಮೂರು ಚುಕ್ಕೆಗಳನ್ನು ಬರೆದು ಅವರಿಗೆಲ್ಲಾ ಅದನ್ನು ನೋಡು ನೋಡುತ್ತಾ, ತಮ್ಮ ತಮ್ಮ ಬದುಕನ್ನು ನೆನಪಿಸಿಕೊಳ್ಳಲು ಹೇಳಿದ. ಅವರೆಲ್ಲಾ ಆ ಮೂರು ಚುಕ್ಕೆಗಳನ್ನು ನೋಡುತ್ತಾ, ತಮ್ಮ ತಮ್ಮ ಬದುಕಿನ ಸಿಹಿ–ಕಹಿ ಘಟನಾವಳಿಗಳನ್ನು ನೆನಪಿಸಿಕೊಳ್ಳುತ್ತ ಅವಕ್ಕೆ ಅಳು–ನಗುವಿನ ಮೂಲಕ ಸ್ಪಂದಿಸಿದರು. ಅವರೆಲ್ಲರ ಮುಖವನ್ನು ಕ್ಯಾಮೆರಾ ಮೂಲಕ ಸೆರೆ ಹಿಡಿದ ಅಬ್ಬಾಸ್ 'ಶಿರೀನ್–ಫರ್ಹಾದ್' ಕತೆಯುಳ್ಳ ಧ್ವನಿ ಸುರುಳಿಯನ್ನು ಎಡಿಟ್ ಮಾಡಿ ಈ ಸಿನಿಮಾ ತಯಾರಿಸಿದ. ಅಲ್ಲಿ 'ಶಿರೀನ್–ಫರ್ಹಾದ್' ಸಿನಿಮಾಕ್ಕೆ ಸ್ಪಂದಿಸುವಂತೆ ಕಾಣುವ ಆ ಹೆಂಗಸರು ನಿಜವಾಗಿಯೂ ಸ್ಪಂದಿಸುತ್ತಿರುವುದು ತಮ್ಮದೇ ಬದುಕಿನ ಕತೆಗೆ! ಅಷ್ಟಕ್ಕೂ ಕಲೆಯೊಂದಿಗೆ ನಮಗೆ ನಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಗುವುದು ಅದು ನಮ್ಮ ಬದುಕಿನ ಯಾವುದೋ ವಿಷಯಕ್ಕೆ ಹತ್ತಿರವಾದಾಗಲೇ ಅಲ್ಲವೇ !! ಬದುಕಿಲ್ಲದೆ ಕಲೆ ನಿರ್ಮಾಣ ಮಾತ್ರವಲ್ಲ, ಕಲೆಗೆ ಸ್ಪಂದಿಸಲೂ ಸಾಧ್ಯವಿಲ್ಲ. ಈ ಒಳನೋಟವನ್ನು ಮಾತ್ರವಲ್ಲ 'ಶಿರೀನ್' ತೋರಿಸಿಕೊಡುವುದು. ಸಿನಿಮಾ ಮಾಧ್ಯಮ ಇನ್ನೂ ಕೂಸಾಗಿದ್ದ ಸಂದರ್ಭದಲ್ಲಿ ಹ್ಯೂಗೋ ಮೊನ್ಸ್ಟರ್ಬರ್ಗ್ ಮತ್ತು ಎಡ್ಗರ್ ಮೊರಿನ್ ತರಹದ ಶಾಸ್ತ್ರಜ್ಞರು ಸಿನಿಮಾ ನಡೆಯುವುದು ಪರದೆಯ ಮೇಲಲ್ಲ, ಬದಲಾಗಿ ವೀಕ್ಷಕನ ಮನಃಪಟಲದಲ್ಲಿ ಎಂದು ವಾದಿಸಿದರು. ಇದನ್ನು 'ಶಿರೀನ್' ಸಾಬೀತು ಪಡಿಸುವಂತಿದೆ. 'ಶಿರೀನ್' ಸಿನಿಮಾ ಕಲೆಯ ಈ ಮಾಧ್ಯಮದ ಅನಂತ ಸಾಧ್ಯತೆಗಳನ್ನು ತೋರಿಸಿ ಕೊಟ್ಟಿತು. ಅಷ್ಟೇ ಅಲ್ಲ, ವೀಕ್ಷಕರ ಮೂಲಕ ಸಿನಿಮಾ ಒಂದನ್ನು ತೋರಿಸಿದ ಈ ಚಿತ್ರದಲ್ಲಿ ಸಿನಿಮಾ ಮಾಧ್ಯಮ ಕಲೆಯ ಸಂವಹನೆಯ ಒಂದು ಸಂಪೂರ್ಣ ಆವರ್ತ ಪೂರೈಸಿತು ಎಂದು ಈ ಲೇಖಕ ನಂಬಿರುತ್ತಾನೆ.

ಹೀಗೆ ಬದುಕು ಮತ್ತು ಮಾಧ್ಯಮಗಳ ಜೊತೆ ಆಡಾಡುತ ಆಯುಷ್ಯ ಕಳೆದ ಅಬ್ಬಾಸ್ ಕೈರೋಸ್ತಾಮಿ ಸಿನಿಮಾ ಮಾಧ್ಯಮಕ್ಕೆ ಬಂದಿದ್ದೇ ಆಕಸ್ಮಿಕವಾಗಿ. ಪುಟಗಳ ವಿನ್ಯಾಸಕಾರನಾಗಿದ್ದ ಆತ ಸಿನಿಮಾ ತಯಾರಿಕೆ ಶುರು ಮಾಡಿದ್ದು 'ಕನೂನ್' ಎಂಬ

ಸಂಸ್ಥೆಗೆ ಸಿನಿಮಾ ಟೈಟಲ್ ಕಾರ್ಡ್ ತಯಾರಿಸಲು ನೇಮಕಗೊಂಡ ನಂತರದಲ್ಲಿ. ಮಕ್ಕಳಿಗಾಗಿ ಕಿರುಚಿತ್ರ ತಯಾರಿಸಲು ಆರಂಭಿಸಿದ ಕೈರೋಸ್ತಾಮಿ ಜಟಿಲವಲ್ಲದ ವಿಷಯಗಳನ್ನು ಆಕರ್ಷಕವಾಗಿ ತಿಳಿಯಾಗಿಸದೆ ಮಕ್ಕಳಿಗೆ ದಾಟಿಸುವಲ್ಲಿ ಬಹುಮಟ್ಟಿಗೆ ಸಫಲನಾದ. ಮುಂದೆ ಪೂರ್ಣಪ್ರಮಾಣದ ಚಲನಚಿತ್ರ ತಯಾರಿಕೆಯಲ್ಲಿ ತೊಡಗಿದ ಆತ ಇದೇ ಜುಲೈ ತಿಂಗಳ ನಾಲ್ಕನೇ ತಾರೀಖಿನಂದು ಅಸುನೀಗಿದ.

ಶಾನ ವಿರುದ್ಧ ಮತ್ತು ಸೆನ್ಸಾರ್ ವಿರುದ್ಧ ಬಂಡಾಯದ ಕಹಳೆ ಮೊಳಗಿದಾತ ಅಬ್ಬಾಸ್ ಎಂದು ಬಹಳಷ್ಟು ಜನ ಅಭಿಪ್ರಾಯಪಡುತ್ತಾರೆ. ಆದರೆ ಅದು ಅಬ್ಬಾಸ್ ಕೈರೋಸ್ತಾಮಿಯ ಪ್ರತಿಭೆಯನ್ನು ಸೀಮಿತಗೊಳಿಸಿದಂತಾಗುತ್ತದೆ. ಆತ ಪ್ರಗತಿಪರನಾಗಿದ್ದ ಮತ್ತು ಬದುಕಿನ ಎಲ್ಲಾ ರೀತಿಯ ಶೋಷಣೆಗಳಿಗೆ ವಿರೋಧಿಯಾಗಿದ್ದ. ಆದರೆ ಅವನ ಬಂಡಾಯ ಕೇವಲ ಸರ್ಕಾರ, ಆಡಳಿತದ ವಿರುದ್ಧ ಮಾತ್ರವಾಗಿರದೆ ಬದುಕು, ಪ್ರಕೃತಿ, ಲೋಕ, ಸಮಾಜ ಎಲ್ಲದರ ವಿರುದ್ಧವೂ ಆಗಿತ್ತು. ಶೋಷಣೆಯನ್ನು ಕೇವಲ ಘೋಷಣೆಯ ಮೂಲಕ ವಿರೋಧಿಸದ ಅಬ್ಬಾಸ್ ಕೈರೋಸ್ತಾಮಿ ಕಲೆಯ ಮೂಲಕ ಬದುಕನ್ನು ಬದಲಿಸಬಹುದು, ಬೇರೆಯದಾಗಿಯೇ ಗ್ರಹಿಸಬಹುದು ಎಂದು ತೋರಿಸಿಕೊಟ್ಟ. ಅವನಲ್ಲಿ ಸಿದ್ಧಾಂತವನ್ನೂ ಮೀರಿದ ಲೋಕಜ್ಞಾನ, ಲೋಕದೃಷ್ಟಿ ಇತ್ತು. ಹಾಗಾಗಿ ಅವನು ಬಂಡಾಯವನ್ನು ಒಪ್ಪದ ಮಂದಿಗೂ ತನ್ನ ಕಲೆಗಾಗಿ ಇಷ್ಟವಾಗುತ್ತಾನೆ ಮತ್ತು ಘೋಷಣೆಯಾಗದೆ, ನೀತಿಬೋಧೆಯೂ ಆಗದೆ ಕಲಾತ್ಮಕವಾಗಿ ಮತ್ತು ಸೃಜನಾತ್ಮಕವಾಗಿ ಮನಸ್ಸಿಗೆ ತಟ್ಟುವಂತೆ ಸಂವಹನ ನಡೆಸಿ ವೀಕ್ಷಕರ ಮನಸ್ಸನ್ನೂ ಬದಲಿಸುತ್ತಾನೆ, ನೋಟ ಬದಲಿಸುತ್ತಾನೆ. ಅದುವೇ ಅಬ್ಬಾಸ್ ಕೈರೋಸ್ತಾಮಿಯ ಹೆಗ್ಗಳಿಕೆ.

'ಲೈಫ್ ಗೋಸ್ ಆನ್' ಸಿನಿಮಾದಲ್ಲಿ ಕೋಕರ್ ಕಡೆ ಧಾವಿಸುವ ಕಾರ್ ಬೆಟ್ಟದಾಚೆ ಸಾಗುತ್ತದೆ, ಕ್ಯಾಮೆರಾ ಅದನ್ನು ಹಿಂಬಾಲಿಸುವುದಿಲ್ಲ. ಸಿನಿಮಾ ಅಲ್ಲಿಗೆ ಅಂತ್ಯವಾಗುತ್ತದೆ. ಸಿನಿಮಾದಾಚೆಗೂ ಬದುಕಿದೆ, ಸಿನಿಮಾ ಮುಗಿದ ಮೇಲೂ ಬದುಕಿದೆ ಎಂದು ಅಬ್ಬಾಸ್ ಹೇಳುವಂತಿದೆ ಆ ಸಿನಿಮಾದ ಅಂತ್ಯ. ಬದುಕಿನಾಚೆ ಬದುಕು ಇದೆಯೋ ಇಲ್ಲವೋ ಗೊತ್ತಿಲ್ಲ, ಆದರೆ ಅಬ್ಬಾಸ್ ಕೈರೋಸ್ತಾಮಿಯ ಬದುಕು ಮುಗಿದ ಮೇಲೂ ನಮಗೆ ಅವನ ಸಿನಿಮಾಗಳು ಇವೆ ಎಂಬುದು ತೃಪ್ತಿ ಮತ್ತು ಖುಷಿ ನೀಡುವ ವಿಷಯ. ಸಿನಿಮಾದಿಂದ ಬದುಕು ಶ್ರೀಮಂತಗೊಳ್ಳುತ್ತದೆ, ಬದುಕಿನಿಂದ ಸಿನಿಮಾ ಶ್ರೀಮಂತಗೊಳ್ಳುತ್ತದೆ ಎಂದ ಅಬ್ಬಾಸ್ ಕೈರೋಸ್ತಾಮಿ ತನ್ನ ಬದುಕು ಮತ್ತು ಸಿನಿಮಾ ಎರಡರ ಮೂಲಕವೂ ಸುತ್ತಲ ಬದುಕನ್ನೂ ಸಿನಿಮಾ ಮಾಧ್ಯಮವನ್ನೂ ಶ್ರೀಮಂತಗೊಳಿಸಿ ನಮ್ಮನ್ನಗಲಿದ್ದಾನೆ.

*(ದೆಹಲಿಯ ಜವಾಹರ್‌ಲಾಲ್ ನೆಹರು ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಮತ್ತು ಪುಣೆಯ ಫಿಲಂ ಅಂಡ್ ಟೆಲಿವಿಷನ್ ಇನ್ಸ್ಟಿಟ್ಯೂಟ್ ಆಫ್ ಇಂಡಿಯಾದಲ್ಲಿ ಚಲನಚಿತ್ರ ಚಿತ್ರಕತೆ ಬರವಣಿಗೆ ಅಭ್ಯಾಸ ಮಾಡಿರುವ ಮಣಿಪಾಲ ನಿವಾಸಿಯಾದ ಸಂವರ್ತ 'ಸಾಹಿಲ್' ಪೂರ್ಣಾವಧಿ ಬರಹಗಾರರು. 'ಕರಾವಳಿ ಕರ್ನಾಟಕ' ಅಂತರ್ಜಾಲ ಪತ್ರಿಕೆಯಲ್ಲಿ 'ಶ್ಯಾಡೋ ಆಫ್ ಲೈಫ್' ಮತ್ತು ಕನ್ನಡ ಪ್ರಭ ಪತ್ರಿಕೆಯಲ್ಲಿ 'ಬಾಳ್ಕಟ್ಟೆ' ಅಂಕಣಗಳಿಂದಾಗಿ ಕನ್ನಡ ಓದುಗರಿಗೆ ಪರಿಚಿತರು.)*

**ಬಿ. ಎ. ಸಂವರ್ತ (ಸಾಹಿಲ್)**
'ಸತ್ಯಶ್ರೀ', ಎಮ್ ಐಜಿ, ೪ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ
ಕೆ.ಹೆಚ್.ಬಿ. ಕಾಲನಿ, ಹುಡ್ಕೊ, ಮಣಿಪಾಲ – ೫೭೬ ೧೦೪

ಕಾವ್ಯಲೋಕ

# ಸತ್ಯಕಾಮರಿಗೆ

ನಿಲ್ಲದ ನಡಿಗೆ
ಅರಿವಿನ ಕಡೆಗೆ
ಪ್ರತಿಕ್ಷಣವೂ ಹೊಸ ಹುಟ್ಟು
ಇದೇ ಅವರ ಗುಟ್ಟು

ಹಳೆಯ ಬಾಧೆಯಿಲ್ಲ
ನಾಳೆಯ ನಿರೀಕ್ಷೆಯಿಲ್ಲ
ಎಚ್ಚರದ ಮನಕ್ಕೆ
ನಿನ್ನೆ – ನಾಳೆಗಳೆಲ್ಲ ಮಿಥ್ಯ

ಅವರಿಗೆ
ಜ್ಞಾನತಲೆಯ ಭಾರವಲ್ಲ
ಕಾಲ ಚಪ್ಪಲಿ
ಅದಕ್ಕೆ ನಡಿಗೆ ನೇರ
ಸರಳ ಮತ್ತು ಸುಗಮ

ದೊಡ್ಡವರವರು
ನಡೆದು ನುಡಿದರು
ನಾನು ನಡೆಯಲೂ ಇಲ್ಲ
ನುಡಿಯುವುದು ಬಿಡಲಿಲ್ಲ

ಅವರದ್ದು ತಿಳಿವು–ತಿಳಿ
ಹಗುರ ಹೆಚ್ಚು
ನನಗದೋಗಟ್ಟಿ
ಭಾರ ಹೆಚ್ಚು

ಅವರಾಡಿದ್ದೆಲ್ಲ ಅರಿವು
ನಾನೂ ಅರಿತು ಆಡಿದರೂ
ಇಲ್ಲ ಅದರಲ್ಲಿ

ಯಾವುದೇ ತಿರುಳು
ಅವರನ್ನ ಅರಿತೇ ಎಂಬುದೇ
ನನ್ನ ದೊಡ್ಡಮರುಳು

ಎಷ್ಟು ಹುಡುಕಿದರು
ಸಿಗಲಿಲ್ಲ ಅವರು...
ಯಾರೋ ಪಿಸುಗುಟ್ಟಿದರು
ಇತ್ತ ಕಲ್ಲದಾರಿಯಲ್ಲೆ ನಡೆದರು
ಹೆಜ್ಜೆ ಮೂಡದ ಹಾದಿ

ಹಿಡಿದು ನಡೆದರೆ...
ಕಲ್ಲೆಲ್ಲ ಹುಲ್ಲಾಗಿ...
ಹುಲ್ಲೆಲ್ಲಾ ಹೂವಾಗಿ
ಹಸಿರ ಹಾಸಿತ್ತು

ಹೌದು –
ಹೆಸರಾಗದ ಅವರು
ಹಸಿರಾದರು
ಉಸಿರಾಗಿ ಉಳಿದರು...
ಹಸಿವಿದ್ದವರಿಗೆ
ಅಕ್ಷಯವಾಗಿ ಬೆಳೆದರು

ಸತ್ಯಕಾಮರೂ ನೀವೂ
ಸತ್ಯ ಹೇಳಿದಿರಿ
ನಮಗೆ ಕಾಮ ತಿಳಿಯಿತು
ಸತ್ಯ ತಿಳಿಯಲಿಲ್ಲ...
ಕಾಮದ ಸತ್ಯ ಹತ್ತಿರವಾಯಿತು
ಸತ್ಯಕಾಮ ದೂರಾದರು.

**ಹರ್ಷಿತ ಕೆ.**
ಕನ್ನಡ ಭಾರತಿ ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ – ೫೭೭ ೪೫೧
ಭದ್ರಾವತಿ ತಾಲೂಕು, ಶಿವಮೊಗ್ಗ ಜಿಲ್ಲೆ

"ಕನ್ನಡನಾಡಿಗೆ ಕನ್ನಡವೇ ಗತಿ ಅನ್ಯಥಾ ಶರಣಂ ನಾಸ್ತಿ." ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ ಎನ್ನುವ ಖಚಿತವಾದ ಗಟ್ಟಿನಿಲುವು ಶ್ರೀ ಅವರದು. ಬಿ.ಎಂ.ಶ್ರೀ ಒಲವು ಗ್ರಾಮ್ಯ ಕನ್ನಡಕ್ಕಿಂತ ಶಿಷ್ಟ ಕನ್ನಡಕ್ಕೆ ಎನ್ನುವ ಅಭಿಪ್ರಾಯವಿದ್ದು '(ಆದರೆ) ಭಾಷೆಯನ್ನು ಸುಲಭ ಮಾಡುತ್ತೇನೆಂದು, ಅಬದ್ಧ ಮಾಡಬಾರದು, ಗ್ರಾಮ್ಯವನ್ನು ದೂರವೇ ನಿಲ್ಲಿಸಿ, ಭಾಷೆ ಶುದ್ಧವಾಗಿ, ಬಿಗಿಯೂ ಕಟ್ಟು ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು,' ಎನ್ನುವ ಅವರ ಮಾತುಗಳು ಚರ್ಚೆಯನ್ನು ಆಹ್ವಾನಿಸುತ್ತವೆ.



# ಬಿ. ಎಂ. ಶ್ರೀ ಅವರ ಕನ್ನಡ ಭಾಷಾಚಿಂತನೆ ಗ್ರಾಮ್ಯಕ್ಕೆ ವಿರೋಧ ? ಬ್ರಾಹ್ಮಣಪರ ?

ಇಪ್ಪತ್ತೊಂದನೆಯ ಶತಮಾನದ ಈ ದಿನಗಳು ಜಾತಿಮುಕ್ತವಾಗಿರುತ್ತವೆ ಎನ್ನುವ ಒಂದು ಪ್ರಮಾಣದ ವಿಶ್ವಾಸ ಸಮಸಮಾಜದ ಕನಸು ಬಿತ್ತಿದ ಹಲವು ಹೋರಾಟಗಳು ಚಿಗುರೊಡೆದ ಕಳೆದ ಶತಮಾನದ ಎಪ್ಪತ್ತು-ಎಂಬತ್ತರ ದಶಕದ ದಿನಗಳದ್ದಾಗಿತ್ತು. ಆದರೆ ಆ ವಿಶ್ವಾಸ ಇಂದು ಮುಕ್ಕಾಗಿವೆ. ಅಷ್ಟು ಮಾತ್ರವಲ್ಲ, ಜಾತಿಪ್ರಜ್ಞೆ ಗಟ್ಟಿಯಾಗುತ್ತಿದ್ದು ಜಾತಿವಾದಿಗಳು ಮತ್ತು ಕೋಮುವಾದಿಗಳು ಸಮಾಜದ ಮೇಲೆ ಹಿಡಿತ ಸಾಧಿಸಿದ್ದು ಜಾತ್ಯತೀತ ಮೌಲ್ಯ ಅಪಾಯದಲ್ಲಿದೆ.

ಜಾತ್ಯತೀತತೆ ಎಂದರೆ ಕಣ್ಣೆದುರಿನ ಜಾತಿ ಸೃಷ್ಟಿಸಿದ ವಿಕಾರಗಳಿಗೆ ಕುರುಡಾಗುವುದಲ್ಲ; ನಿಜಸ್ವರೂಪದಲ್ಲಿ ಅದನ್ನು ಅರ್ಥ ಮಾಡಿಕೊಂಡು ಅದನ್ನು ತೊಲಗಿಸುವ ಎಲ್ಲ ಮಾರ್ಗಗಳನ್ನು ಹುಡುಕುವುದು. ಮೇಲ್‌ಸ್ತರದಲ್ಲಿ ಜಾತಿವ್ಯವಸ್ಥೆಯನ್ನು ಪುನರ್ ರೂಪಿಸುವಂತೆ ಕಾಣುವ ಜಾತಿಗಣತಿ ವಾಸ್ತವವನ್ನು ಅರಿಯುವ ಪ್ರಯತ್ನ ವಾಗಿದ್ದು, ಇದನ್ನು ಸರಿಯಾಗಿ ಬಳಸಿದಲ್ಲಿ ಅದು ಜಾತ್ಯತೀತ ಸಮಾಜವನ್ನು ನಿರ್ಮಿಸುವ ಕನಸಿಗೆ ಅಡಿಪಾಯವಾಗುತ್ತದೆ.

ಸಾಮಾಜಿಕ ಮುಂಚಲನೆಗೆ ವಿವಿಧ ಕ್ಷೇತ್ರಗಳಲ್ಲಿನ ತಮ್ಮ ಸೇವೆಯಿಂದ ಕೊಡುಗೆ ನೀಡಿದ ವ್ಯಕ್ತಿಗಳನ್ನು ಅರಿಯುವಾಗ ಅವರ ಜಾತಿ ಕುರಿತ ನಿಲುವುಗಳು ಚರ್ಚೆಗೆ ಬರುವುದು ಸಾಮಾನ್ಯ. ಇದನ್ನು ಎಚ್ಚರದಿಂದ ಅರಿಯದಿದ್ದಲ್ಲಿ ಸಂಬಂಧಿಸಿದ ವ್ಯಕ್ತಿಗಳಿಗೆ ಮಾತ್ರವಲ್ಲ, ಅವರ ಕೊಡುಗೆಯನ್ನು ವರ್ತಮಾನದಲ್ಲಿ ಸ್ವೀಕರಿಸುವಾಗಲೂ ಬಿಕ್ಕಟ್ಟುಗಳು ತಲೆದೋರುತ್ತವೆ. ಜಾತಿವಾದಿಯನ್ನು ಜಾತಿವಾದಿ ಎಂದು ಗುರುತಿಸುವುದು ಎಷ್ಟು ಮುಖ್ಯವೋ ಜಾತ್ಯತೀತನನ್ನು ಜಾತ್ಯತೀತನೆಂದು ಗುರುತಿಸುವುದು ಕೂಡ ಅಷ್ಟೇ ಮುಖ್ಯ. ಇಲ್ಲವಾದಲ್ಲಿ ತಪ್ಪಾದ ಗ್ರಹಿಕೆಗಳು ಪೂರ್ವಗ್ರಹ ಗಳಿಗೆ ಕಾರಣವಾಗಿ ಅವರ ಕೊಡುಗೆಯನ್ನು ವರ್ತಮಾನದ ಸಮಾಜ ನಿರ್ಲಕ್ಷಿಸುವಂತೆ ಮಾಡಬಹುದು. ಜಾತಿ ಹಿನ್ನೆಲೆಯಲ್ಲಿ ಗಾಂಧಿ, ಅಂಬೇಡ್ಕರ್‌ರಂತಹ ರಾಷ್ಟ್ರೀಯ ಐಕಾನುಗಳ ಕುರಿತ ಚರ್ಚೆಗಳು ನಿರಂತರ ನಡೆಯುತ್ತಿರುವುದರಿಂದ ಇಂತಹ ವ್ಯಕ್ತಿಗಳ ವಿಚಾರದಲ್ಲಿ ಅಷ್ಟು ತೊಡಕುಗಳಿಲ್ಲ. ಆದರೆ ನಾಡು-ನುಡಿಗಾಗಿ ದುಡಿದ ಪ್ರಾದೇಶಿಕ ವ್ಯಕ್ತಿಗಳ ಚಿಂತನೆಯ ಕುರಿತ ಚರ್ಚೆಗಳು ವಿದ್ವಾಂಸರ ವಲಯದಲ್ಲಿ ಒಂದು ತೀರ್ಮಾನಕ್ಕೆ ಬಂದು ನಿಂತಂತೆ ತೋರುತ್ತವೆ. ಈ ಬಗ್ಗೆ ಇನ್ನೂ ಚರ್ಚೆ ಅಗತ್ಯವಿದೆ ಎನಿಸುತ್ತದೆ. ಮೈಸೂರು ಕರ್ನಾಟಕದ ಏಳ್ಗೆಗೆ ಮಹತ್ತರ ಕೊಡುಗೆ ನೀಡಿದ ಸರ್.ಎಂ.ವಿ. ಮತ್ತು ಕನ್ನಡದ ಏಳ್ಗೆಗಾಗಿ ಅವಿರತ ದುಡಿದ ಬಿ.ಎಂ.ಶ್ರೀ ಅವರ ಕೊಡುಗೆ ಮತ್ತು ಸಾಧನೆಗಳನ್ನು ಗೌರವಿಸು ವಾಗಲೂ ಇವರಿಬ್ಬರ ಜಾತಿ ಕುರಿತ ನಿಲುವುಗಳು ಒಂದೇ ಬಗೆಯದಾಗಿರಲಿಲ್ಲ ಎಂದು ಗಮನಿಸಬೇಕು. ಈ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಅವರ ಜಾತಿ ಕುರಿತ ನಿಲುವುಗಳನ್ನು ಚರ್ಚಿಸಬೇಕಾಗಿದೆ.

**ಸರ್ಜಾಶಂಕರ್ ಹರಳಿಮಠ**

**ಇಂಗ್ಲಿಷಿನಿಂದ ಜೀವಧಾರಣೆ**

ಕನ್ನಡಪರ ಚಿಂತನೆಗೆ ಇಪ್ಪತ್ತನೆಯ ಶತಮಾನದ ಆರಂಭದಲ್ಲಿಯೇ ಅಡಿಪಾಯ ಹಾಕಿದವರಲ್ಲಿ ಬಿ.ಎಂ.ಶ್ರೀ ಮುಖ್ಯರಾದವರು. ಬಿ.ಎಂ.ಶ್ರೀ ಅವರ ಕನ್ನಡ ಚಿಂತನೆ ಹಲವು ಕಾರಣಗಳಿಗಾಗಿ ಉದ್ದಕ್ಕೂ ಚರ್ಚೆಗೆ ಒಳಗಾಗುತ್ತ ಬಂದಿದೆ. ಕನ್ನಡಪರ ಚಿಂತನೆಗೆ ಶ್ರೀಕಾರ ಹಾಕಿದವರು ಎನ್ನುವುದು ಮೊದಲ ಕಾರಣವಾದರೆ, ಕನ್ನಡಪರವಾದ ಕಡುನಿಷ್ಠ ಕಾಳಜಿ ಮತ್ತು ಬಹುಮುಖತೆಯುಳ್ಳ ಚಿಂತನೆ ಎರಡನೆಯ ಕಾರಣವಾಗಿದೆ. ಬಿ.ಎಂ.ಶ್ರೀ ಅವರಿಗೆ ಮೈಸೂರು ರಾಜಪ್ರಭುತ್ವದ ಬಗ್ಗೆ ಆರಾಧನಾಭಾವವಿತ್ತು, ಬ್ರಿಟಿಷ್ ವಸಾಹತುವಿನ ಬಗ್ಗೆ ಅಷ್ಟೇನೂ ತಕರಾರುಗಳಿರಲಿಲ್ಲ. ಈ ಹಿನ್ನೆಲೆಯಲ್ಲಿಯೂ ಅವರ ಕನ್ನಡ ಚಿಂತನೆ ಚರ್ಚೆಗೆ ಒಳಗಾಗಿದೆ.

ಬಿ.ಎಂ.ಶ್ರೀ ಅವರ ಸಂದರ್ಭದಲ್ಲಿ ಕನ್ನಡಕ್ಕೆ ಕಂಟಕದಂತೆ ತೋರುತ್ತಿದ್ದುದು ಸಂಸ್ಕೃತವಾಗಿತ್ತು. ಆದರೆ ೨೧ನೇ ಶತಮಾನದ ಈ ಆರಂಭಕಾಲದಲ್ಲಿ ಕನ್ನಡ ಮತ್ತು ಕನ್ನಡದಂತಹ ಎಲ್ಲಾ ದೇಶಿ ಭಾಷೆಗಳಿಗೆ ತೀವ್ರತರವಾದ ಬಿಕ್ಕಟ್ಟುಗಳನ್ನು ತಂದೊಡ್ಡಿರುವುದು, ಅವುಗಳ ಅಸ್ತಿತ್ವವನ್ನು ಅಲುಗಾಡಿಸುತ್ತಿರುವುದು

ಬಂಡವಾಳಶಾಹಿಗಳ ಭಾಷೆಯಾದ ಇಂಗ್ಲಿಷ್ ಆಗಿದೆ. ಈಗ ದೇಶಿ ಭಾಷೆಗಳು ತಮ್ಮ ಅಸ್ತಿತ್ವಕ್ಕಾಗಿ ಹೋರಾಡಬೇಕಾದ ಕಠಿಣ ಸನ್ನಿವೇಶ ನಿರ್ಮಾಣವಾಗಿದೆ. ಆದರೆ ಶತಮಾನವೊಂದರಷ್ಟು ಹಿಂದೆ ಕನ್ನಡದ ಬಿಕ್ಕಟ್ಟಿಗೆ ಇಂಗ್ಲಿಷ್ ಮೂಲಕವೇ ಪರಿಹಾರ ಕಾಣುವ ಪ್ರಯತ್ನ ಮಾಡಿದವರು ಬಿ.ಎಂ.ಶ್ರೀ ಅವರು. ಹಾಗೆಂದು ಇಂಗ್ಲಿಷಿನ ಕುರಿತು ಕುರುಡು ವ್ಯಾಮೋಹವೇನೂ ಅವರಿಗಿರಲಿಲ್ಲ. 'ಜನರ ಮುಖಂಡರೂ ಮೇಧಾವಿಗಳೂ ಎಷ್ಟೇ ಭಾಷೆಗಳನ್ನು ಕಲಿಯಲಿ, ಜನಸಾಮಾನ್ಯರೂ, ಸರ್ವಜನವೂ ದೇಶಭಾಷೆಯನ್ನು ಆಡತಕ್ಕದ್ದೇ ? ಇಲ್ಲ, ಅದನ್ನು ಕಿತ್ತು ಅದರ ಸ್ಥಳದಲ್ಲಿ ಭಾರತಭೂಮಿಯ ಹೆಸರನ್ನು ಹೇಳಿಕೊಂಡು ದಿಗ್ವಿಜಯಕ್ಕೆ ಬಂದಿರುವ ಬೇರೊಂದು ಭಾಷೆಯನ್ನು ಹೂಡತಕ್ಕದ್ದೇ ? ಎಚ್ಚರಿಕೆಯಿಂದ ಯೋಚನೆ ಮಾಡಬೇಕು.' ಎಂಬ ಎಚ್ಚರ ಅವರಲ್ಲಿತ್ತು.

ಈ ಎಚ್ಚರವಿದ್ದರೂ ಬಿ.ಎಂ.ಶ್ರೀ ಅವರು ಇಂಗ್ಲಿಷನ್ನು ಭಾರತಮಾತೆಯ 'ಇನಿಯ ತಂಗಿ' ಎಂದು ಭಾವಿಸುವುದು ಸಮಸ್ಯಾತ್ಮಕವಾಗಿದೆ. ಇಂಗ್ಲಿಷ್ ಪ್ರಭುತ್ವದ ಭಾಷೆಯಾಗಿ ಮಾರುಕಟ್ಟೆಯನ್ನು ನಿಯಂತ್ರಿಸುತ್ತಿರುವ ಸಮಕಾಲೀನ ಸಂದರ್ಭದಲ್ಲಿ ಈ ಗ್ರಹಿಕೆ ಇನ್ನೂ ಹೆಚ್ಚು ಸಮಸ್ಯೆಯನ್ನು ತಂದೊಡ್ಡಿದೆ. ಆದರೆ ಅಂದು ಸಾಹಿತ್ಯಿಕ ನೆಲೆಯಲ್ಲಿ ಇಂಗ್ಲಿಷ್ ಕನ್ನಡಕ್ಕೆ ಮುಖ್ಯ ಎಂದು ಬಿ.ಎಂ.ಶ್ರೀ ಭಾವಿಸಿದ್ದರು. ಅವರು ಇಂಗ್ಲಿಷ್ ಗೀತೆಗಳನ್ನು ಕನ್ನಡಕ್ಕೆ ತಂದಿದ್ದನ್ನು, ಕನ್ನಡ ಕಾವ್ಯಕ್ಷೇತ್ರವು ಇಂಗ್ಲಿಷ್ ಭಾಷಾ ಸಾಹಿತ್ಯದಿಂದ ಜೀವಧಾರಣೆ ಪಡೆಯಬೇಕೆಂದು ಅವರು ಪ್ರತಿಪಾದಿಸಿದ್ದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದಾಗಿದೆ. "ಇವಳ ಸೊಬಗನವಳು ತೊಟ್ಟು, ನೋಡ ಬಯಸಿದೆ; ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ" ಎನ್ನುವ ಅವರ **'ಕಾಣಿಕೆ'** ಪದ್ಯದ ಸಾಲುಗಳು ಇಂಗ್ಲಿಷ್ ಮತ್ತು ಕನ್ನಡದ ನಡುವಿನ ಕೊಡುಕೊಳ್ಳುವಿಕೆಯ ಸಂಬಂಧವನ್ನು ಅವರು ಸಾಹಿತ್ಯದ ನೆಲೆಯಲ್ಲಿ ನೋಡುತ್ತಿದ್ದಾರೆ ಎನ್ನುವುದನ್ನು ಸೂಚಿಸುತ್ತವೆ. ಹೀಗಿದ್ದರೂ ಇಂಗ್ಲಿಷ್ ಭಾಷೆ ಕನ್ನಡಕ್ಕೆ ಪೂರಕವಾಗಿ ಮಾತ್ರ ಇರಬೇಕು ಎನ್ನುವ ನಿಲುವನ್ನು ಅವರು ಹೊಂದಿದ್ದರು.

**ಸಾಹಿತ್ಯಿಕವೋ ? ಸಾಮಾಜಿಕವೋ ?**

ಈವರೆಗೂ ಬಿ.ಎಂ.ಶ್ರೀ ಅವರ ಕನ್ನಡ ಅಸ್ಮಿತೆ ಕುರಿತ ಚಿಂತನೆಗಳನ್ನು ಪ್ರಧಾನವಾಗಿ ಸಾಹಿತ್ಯದ ನೆಲೆಯಲ್ಲಿಯೇ ಚರ್ಚಿಸಲಾಗಿದೆ. ಮೇಲೆ ಉದಾಹರಿಸಿದ **'ಕಾಣಿಕೆ'** ಪದ್ಯ ಮತ್ತು 'ಭಾಷೆಯ ಮತ್ತು ಕಾವ್ಯಮಾಲೆಯ ಪೂರ್ವೋತ್ತರವನ್ನು ತಿಳಿದು, ಅವು ಮುಂದೆ ಶೋಭಿಸಿ ತಮ್ಮ ಸತ್ವದಿಂದಲೇ ಜನರು ಮೋಹಿಸುವಂತೆ ಮಾಡುವುದಕ್ಕಾಗಿ, ಎಲ್ಲರೂ ಅಭಿಮಾನಪಟ್ಟುಕೊಂಡು ಯೋಗ್ಯತಾನುಸಾರ ಸಹಾಯ ಮಾಡಬೇಕು' ಎನ್ನುವಂತಹ ಅವರ ನುಡಿಗಳೇ ಚರ್ಚೆಯ ಮುನ್ನೆಲೆಗೆ ಬಂದಿದ್ದು ಇದಕ್ಕೆ ಕಾರಣ.

ಆದರೆ ಬಿ.ಎಂ.ಶ್ರೀ ಅವರ ಕನ್ನಡ ಅಸ್ಮಿತೆ ಕುರಿತ ಚಿಂತನೆಯಲ್ಲಿ ಸಾಮಾಜಿಕ ನೆಲೆಯೂ ಅಂತರ್ಗತವಾಗಿದೆ. ಸೆಕ್ಯುಲರ್ ಆದ ಸಮಾಜವಾದಿ ಮೌಲ್ಯಗಳು ಅವರ ಭಾಷೆ ಕುರಿತ ಚಿಂತನೆಯಲ್ಲಿದೆ. 'ನಾವು ಬಳಸತಕ್ಕ ಯಾವ ಭಾಷೆಯೇ ಆಗಲಿ, ಪೇಟೆಗೆ ಹೋಗಿ ವ್ಯಾಪಾರ ಮಾಡುವುದಕ್ಕೆ, ಕಾಗದ ಬರೆಯುವುದಕ್ಕೆ, ಪ್ರತಿದಿನದ ಕಾರ್ಯಾಚರಣೆಗೆ ಒದಗಿದರೆ ಸಾಲದು. ಭಾಷೆಯಿಂದ ಜನರ ಜೀವನ ಮೇಲ್ಪಟ್ಟು, ಅವರ ವಿಚಾರಶಕ್ತಿ ಹೆಚ್ಚಿ, ಅವರ ಜೀವನದಲ್ಲಿ, ಒಟ್ಟು ಜನಾಂಗದ ಜೀವನದಲ್ಲಿ, ಒದಗಬಹುದಾದ ಸಮಸ್ಯೆಗಳು ಪಾರಾಗಿ ಜನತೆಯೂ ದೇಶವೂ ಸ್ವರ್ಗಪಥಕ್ಕೆ ಹಾರುವ ಪಕ್ಷಿಯಂತೆ ಮೇಲಕ್ಕೆ ಮೇಲಕ್ಕೆ ಹೋಗಲು ಸಾಧಕವಾಗಬೇಕು' ಎಂದವರು ಪ್ರತಿಪಾದಿಸುತ್ತಾರೆ.

'ಭಾಷೆಯೆನ್ನುವುದು ನಿತ್ಯಗಟ್ಟಳೆಯ ವ್ಯಾಪಾರಕ್ಕಾಗಿ ಇರುವುದು ಮಾತ್ರವಲ್ಲ. ಅದರ ಮುಖ್ಯಕಾರ್ಯ ಒಂದು ಜನಾಂಗವನ್ನು ಸಂಸ್ಕಾರದಲ್ಲಿ ಮುಂದಕ್ಕೆ ತೆಗೆದುಕೊಂಡು ಹೋಗಲು ಸಾಧಕವಾಗುವುದು. ಆನಂದರಸವನ್ನು ಕಲೆಯ ಮೂಲಕ ಹೃದಯಕ್ಕೆ ತುಂಬುವುದು, ಆತ್ಮೋದ್ಧಾರಕ್ಕೆ ಸೋಪಾನವಾಗುವುದು – ಒಂದು ಇಡಿಯ ಜನಾಂಗವನ್ನು; ಅಲ್ಲೊಬ್ಬರನ್ನು ಇಲ್ಲೊಬ್ಬರನ್ನಲ್ಲ; ಕೇವಲ ವಿದ್ಯಾಪಾರಂಗತರನ್ನಲ್ಲ; ಜನಸಾಮಾನ್ಯರನ್ನು; ನಾಡಿನ ಗಂಡಸರು, ಹೆಂಗಸರು, ಮಕ್ಕಳನ್ನು' ಎನ್ನುವಲ್ಲಿ ಕನ್ನಡ ಅಸ್ಮಿತೆಯ ಚಿಂತನೆಯಲ್ಲಿ ಸಾಮಾಜಿಕ ನೆಲೆ ಸ್ಪಷ್ಟವಾಗಿದೆ.

ಬಿ.ಎಂ.ಶ್ರೀ ಅವರು ಕನ್ನಡ ಭಾಷೆಯನ್ನು ಜಾತ್ಯತೀತ ಮತ್ತು ಧರ್ಮಾತೀತ ನೆಲೆಯಲ್ಲಿ ಕಟ್ಟಬಯಸುತ್ತಾರೆ. ಜೈನ, ಬ್ರಾಹ್ಮಣ, ವೀರಶೈವ ಹೀಗೆ ಎಲ್ಲ ಸಮುದಾಯಗಳಿಂದ ಬಂದ ಕವಿಗಳು ರಚಿಸಿದ ಸಾಹಿತ್ಯದಂತೆ ಕ್ರೈಸ್ತ ಕಾವ್ಯಮಾಲೆಯೂ, ಮಹಮ್ಮದೀಯರ ಕಾವ್ಯಮಾಲೆಯೂ ಕನ್ನಡದ ಭಾಗವಾಗಬೇಕೆಂದು ಅವರು ಬಯಸುತ್ತಾರೆ. "ಕನ್ನಡಿಗರಾದ ನಾವು ಸಂಘಟಿತರಾಗಬೇಕು. ನಮ್ಮ ನಾಡು ನುಡಿಯ ಸೇವೆ ಸಲ್ಲಿಸಲು ಮುಂದುವರಿದಾಗ ಹಿಂದೂ–ಮುಸಲ್ಮಾನ, ಬ್ರಾಹ್ಮಣ–ಬ್ರಾಹ್ಮಣೇತರ ಎಂಬ ಸಂಕುಚಿತ ಅಭಿಪ್ರಾಯಗಳನ್ನು ಬದಿಗೊತ್ತಿ ನಮ್ಮ ಕುಲ ಕನ್ನಡಕುಲ, ಗೋತ್ರ ಸೂತ್ರಗಳೆಲ್ಲವೂ ಕನ್ನಡವೇ, ನಮಗೆ 'ಕನ್ನಡ ಗೆಲ್ಗೆ ಕನ್ನಡ ಬಾಳ್ಗೆ' ಎಂಬುದೇ ನಿತ್ಯವೂ ಪಠಿಸುವ ಪಂಚಾಕ್ಷರ ಮಹಾಮಂತ್ರವೆಂದು ಭಾವಿಸಬೇಕು. 'ಒಂದು ಭಾಷೆಯಾಡುವವರೆಲ್ಲ ಒಂದು ಜಾತಿ' ಎನ್ನುವ ಅಚಲ ನಂಬಿಕೆ ಅವರದು.

ಬಿ.ಎಂ.ಶ್ರೀ ಅವರ ಕನ್ನಡ ಭಾಷೆ ಕುರಿತ ಚಿಂತನೆ ಸಂಕುಚಿತವಾದುದಲ್ಲ. 'ಈ ಪುಣ್ಯಕ್ಷೇತ್ರದಲ್ಲಿ ಬೇರೂರಿ ಆಕಾಶ ಹಬ್ಬಿರುವ ಎಲ್ಲಾ ಪ್ರದೇಶಗಳಿಂದಲೂ ಗಾಳಿಯನ್ನೂ ಬೆಳಕನ್ನೂ ಆಹಾರವನ್ನೂ ತೇಜಸ್ಸನ್ನೂ ಹೀರಿಕೊಳ್ಳುವ ಉದಾರ ಹೃದಯವೊಂದನ್ನು' ಕನ್ನಡ ಮನಸ್ಸು ಹೊಂದಬೇಕೆಂಬುದು ಶ್ರೀ ಅವರ ಹಂಬಲವಾಗಿದೆ. ಬಿ.ಎಂ.ಶ್ರೀ ಅವರ ಈ ಎಲ್ಲ ಚಿಂತನೆಗಳು ಸಮಕಾಲೀನ ಸಂದರ್ಭದಲ್ಲಿ ದೊಡ್ಡ ಮೌಲ್ಯಗಳಾಗಿ ಕಂಡುಬರುತ್ತವೆ.

**ಅನುಸಂಧಾನದ ಮಾರ್ಗ**

ದೇಶಿ ಭಾಷೆಯ ಕುರಿತಂತೆ ಮೂರು ಬಗೆಯ ನಿಲುವುಗಳು ಇರಲು ಸಾಧ್ಯವಿದೆ. ಅವುಗಳೆಂದರೆ : (೧) ನಮ್ಮ ಭಾಷೆಯೇ ಸರ್ವಶ್ರೇಷ್ಠ ಎನ್ನುವ ಮತ್ತು ಅನ್ಯಭಾಷೆಗಳನ್ನು ಸ್ವೀಕರಿಸದಿರುವ ಮೂಲಭೂತವಾದಿತನ, (೨) ನಮ್ಮ ಭಾಷೆ ನಾಶವಾಗುತ್ತಿರುವ ಭಾಷೆ. ಇದರ ಬಗ್ಗೆ ಚಿಂತಿಸುವುದಕ್ಕಿಂತ ಇಂಗ್ಲಿಷನ್ನು ಅನುಸರಿಸುವುದೇ ಉತ್ತಮ ಎನ್ನುವ ತಮ್ಮ ಭಾಷೆಯ ಬಗ್ಗೆ ಕಾಳಜಿಯಿಲ್ಲದ ಹೊಂದಾಣಿಕೆಯ ಮಾರ್ಗ, (೩) ಮಾಧ್ಯಮವಾಗಿ ತಮ್ಮ ಭಾಷೆಯನ್ನೇ ಬಳಸುತ್ತ ಅದರ ಉಳಿವಿಗೆ ಸರ್ವಪ್ರಯತ್ನ ಮಾಡುತ್ತ ಭಾಷೆಯಾಗಿ ಇಂಗ್ಲಿಷನ್ನು ಕಲಿಯುವ ಅನುಸಂಧಾನದ ಮಾರ್ಗ.

ಬಿ.ಎಂ.ಶ್ರೀ ಅವರು ಮೂರನೇ ನಿಲುವಿನವರು. ಕನ್ನಡದ "ಭಂಡಾರವನ್ನೆಲ್ಲಾ ಕೂಡಿಟ್ಟು ಕಾಪಾಡಿಕೊಂಡು ಮುಂದೆ ಹೆಚ್ಚಿಸುತ್ತಾ ಹೋಗುವುದು ಬಿಟ್ಟು, ಇದ್ದಬದ್ದದ್ದನ್ನೆಲ್ಲಾ ಕೆರೆಯಲ್ಲಿ ಮುಳುಗಿಸಿ ಕೈ ಬೀಸಿಕೊಂಡು ಮನೆಗೆ ಬರುವಷ್ಟು ಮರುಳತನ ಎಲ್ಲಾದರೂ ಉಂಟೆ ?" ಎಂದು ಕನ್ನಡವನ್ನು ಕೈಬಿಟ್ಟು ಇಂಗ್ಲಿಷಿನ ಹಿಂದೆ ಹೋಗುವವರನ್ನು ಅವರು ಆಕ್ರೋಶದಿಂದ ಪ್ರಶ್ನಿಸುತ್ತಾರೆ. ಬಿ.ಎಂ.ಶ್ರೀ ಶಿಷ್ಯರಾದ ಕುವೆಂಪು ಅವರನ್ನೂ ಒಳಗೊಂಡಂತೆ ಮುಂದಿನ ಕಾಲಘಟ್ಟದ ಕನ್ನಡದ ಬಹುಮುಖ್ಯ ಚಿಂತಕರೆಲ್ಲ ಈ ಆರೋಗ್ಯಕಾರಿ ನಿಲುವನ್ನೇ ಪ್ರತಿಪಾದಿಸಿರುವುದನ್ನು ಗಮನಿಸಿದಾಗ ಈ ಚಿಂತನೆಯ ಮಹತ್ವ ಅರಿವಾಗುತ್ತದೆ.

**ಗ್ರಾಮ್ಯಕ್ಕೆ ವಿರೋಧ ಮತ್ತು ಬ್ರಾಹ್ಮಣಪರ ಎನ್ನುವ ಚರ್ಚೆ**

"ಕನ್ನಡನಾಡಿಗೆ ಕನ್ನಡವೇ ಗತಿ ಅನ್ಯಥಾ ಶರಣಂ ನಾಸ್ತಿ." ಸಂಸ್ಕೃತವಲ್ಲ, ಇಂಗ್ಲಿಷಲ್ಲ, ಹಿಂದಿಯಲ್ಲ ಎನ್ನುವ ಖಚಿತವಾದ ಗಟ್ಟಿನಿಲುವು ಶ್ರೀ ಅವರದು. ಬಿ.ಎಂ.ಶ್ರೀ ಒಲವು ಗ್ರಾಮ್ಯ ಕನ್ನಡಕ್ಕಿಂತ ಶಿಷ್ಟ ಕನ್ನಡಕ್ಕೆ ಎನ್ನುವ ಅಭಿಪ್ರಾಯವಿದ್ದು '(ಆದರೆ) ಭಾಷೆಯನ್ನು ಸುಲಭ ಮಾಡುತ್ತೇನೆಂದು, ಅಬದ್ಧ ಮಾಡಬಾರದು, ಗ್ರಾಮ್ಯವನ್ನು ದೂರವೇ ನಿಲ್ಲಿಸಿ, ಭಾಷೆ ಶುದ್ಧವಾಗಿ, ಬಿಗಿಯೂ ಕಟ್ಟು ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು,' ಎನ್ನುವ ಅವರ ಮಾತುಗಳು ಚರ್ಚೆಯನ್ನು ಆಹ್ವಾನಿಸುತ್ತವೆ. ಪ್ರಸ್ತುತ, ಗ್ರಂಥಸ್ಥವಾದ ಕನ್ನಡ ಭಾಷೆಯಲ್ಲಿ ತುಂಬಿ ತುಳುಕುತ್ತಿರುವ ಸಂಸ್ಕೃತಭಾಷಾ ಮೂಲದ ಪದಗಳಿಂದಾಗಿ ಸಾಮಾನ್ಯಜನರಿಗೆ ಕ್ಲಿಷ್ಟಕರವಾಗಿದೆ ಎನ್ನುವ ತಿಳಿವಳಿಕೆಯಲ್ಲಿ ಈ ಕುರಿತು ಗಂಭೀರವಾಗಿ ಸಂಶೋಧನೆಯಲ್ಲಿ ತೊಡಗಿರುವ ಡಿ. ಎನ್. ಶಂಕರಭಟ್ಟರು ಕನ್ನಡ ಭಾಷೆಯನ್ನು ಆಡುಭಾಷೆಯ ಮೂಲದಿಂದಲೇ ಉಳಿಸಲು ಹೊಸ ಚಿಂತನೆಗಳನ್ನು ಮಂಡಿಸುತ್ತಿದ್ದಾರೆ. ಶಂಕರಭಟ್ಟರು ಮಂಡಿಸುತ್ತಿರುವ ಚಿಂತನೆಗಳಿಗೆ ಬಿ.ಎಂ.ಶ್ರೀ ಅವರ ಚಿಂತನೆಗಳು ವ್ಯತಿರಿಕ್ತವಾಗಿವೆಯೇ ಎಂದು ಅವಲೋಕಿಸಬೇಕಾಗಿದೆ.

ಹಲಸಂಗಿ ಗೆಳೆಯರು ಸಂಪಾದಿಸಿದ 'ಗರತಿಯ ಹಾಡು' (೧೯೩೨) ಎಂಬ ಜನಪದ ಕಾವ್ಯ ಸಂಗ್ರಹಕ್ಕೆ ಮುನ್ನುಡಿ ಬರೆಯುತ್ತ 'ಜನವಾಣಿ ಬೇರು, ಕವಿವಾಣಿ ಹೂವು' ಎಂದು ಜನರ ಆಡುಭಾಷೆಯ ಮಹತ್ವವನ್ನು ಬಿ.ಎಂ.ಶ್ರೀ ಸಾರುತ್ತಾರೆ. 'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎನ್ನುವ ತಮ್ಮ ಭಾಷಣದಲ್ಲಿ 'ಸಂಸ್ಕೃತ ಆಡುವುದು

ನಿಂತುಹೋದ ಎರಡು ಸಾವಿರ ವರ್ಷದ ಮೇಲೂ ಅದೇ ಭಾಷೆಯಲ್ಲಿ ಬರೆಯುತ್ತಿದ್ದರೇ ಹೊರತು, ಜನರು ಆಡುವ ದೇಶಭಾಷೆಗಳಲ್ಲಿ ಬರೆಯುವ ಯೋಚನೆ ಯಾರಿಗೂ ಬರಲಿಲ್ಲ' ಎಂದು ಕನ್ನಡದ ಪ್ರಾಚೀನ ಸಾಹಿತಿಗಳನ್ನು ಕಟುವಾಗಿ ಟೀಕಿಸುತ್ತಾರೆ. ಇದರೊಂದಿಗೆ ಸಾಹಿತ್ಯ ರಚನೆಗೆ ಸಂಸ್ಕೃತಭಾಷೆಯನ್ನು ಹಾಗೂ ಸಂಸ್ಕೃತಭೂಯಿಷ್ಠ ಕನ್ನಡವನ್ನು ಬಳಸುವುದನ್ನು ತಿರಸ್ಕರಿಸುತ್ತಾರೆ. ಹೀಗಿರುವಾಗ ಶ್ರೀಯವರು ಸಂಸ್ಕೃತಪದಗಳಿಂದ ಮುಕ್ತವಾದ ಅಚ್ಚಕನ್ನಡದ ಗ್ರಾಮ್ಯ ಭಾಷೆಯನ್ನು ಸಾಹಿತ್ಯದ ಭಾಷೆಯಾಗಿ ಬಳಸುವುದಕ್ಕೆ ವಿರೋಧ ವ್ಯಕ್ತಪಡಿಸುತ್ತಾರೆಯೇ ಎನ್ನುವುದು ಚರ್ಚೆಯನ್ನು ಬೇಡುತ್ತಿದೆ.

'ಗ್ರಾಮ್ಯವನ್ನು ಬಿಟ್ಟು ವಿದ್ಯಾವಂತರೂ ಉತ್ತಮ ಜಾತಿಯವರೂ ಆಡತಕ್ಕ ಸ್ಫುಟವಾದ ಕನ್ನಡವನ್ನು ಗ್ರಂಥ ಭಾಷೆಯಾಗಿ ತಿರುಗಿಸಿಬಿಟ್ಟರೆ, ಅಚ್ಚು ಹಾಕುವುದರಿಂದಲೂ ಮಕ್ಕಳಿಂದ ಕಲಿಸುವುದರಿಂದಲೂ ಇದೇ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ' ಎನ್ನುವ ಬಿ.ಎಂ.ಶ್ರೀ ಅವರ ಮಾತುಗಳಲ್ಲಿ 'ಮೇಲ್ಜಾತಿಪರವಾದ ನಿಲುವುಗಳನ್ನು' ಗುರುತಿಸಲಾಗಿದ್ದು ಬಿ.ಎಂ.ಶ್ರೀ ಅವರ ಇಂತಹ ನಿಲುವುಗಳನ್ನು 'ಒಪ್ಪಲಾಗದು', ಎಂಬ ವಿರೋಧ ಕನ್ನಡ ಭಾಷೆ ಕುರಿತ ಚರ್ಚೆಗಳಲ್ಲಿ ವ್ಯಕ್ತವಾಗಿದೆ. ಮೇಲಿನ ಮಾತುಗಳನ್ನು ಉದ್ಧರಿಸುತ್ತ 'ಗ್ರಾಮ್ಯವಾದ ಭಾಷೆಯನ್ನು ಕಾವ್ಯವಾಗಿಸಿದ ಬೇಂದ್ರೆಯವರಿಗೆ ಹೋಲಿಸಿದಾಗ ಶ್ರೀಯವರ ವಾದ ಮತ್ತು ವಾಚಕವರ್ಗದ ಸ್ವರೂಪಗಳು ಅರ್ಥವಾಗುತ್ತವೆ' ಎಂಬ ಎಚ್. ಎಸ್. ರಾಘವೇಂದ್ರರಾವ್ ಅವರ ಅಭಿಪ್ರಾಯದಲ್ಲೂ ಬಿ.ಎಂ.ಶ್ರೀ ಅವರ ಗ್ರಾಮ್ಯದ ಕುರಿತಾದ ಚಿಂತನೆ ಜಾತಿಗ್ರಹೀತವಾದುದು ಎಂಬ ಗ್ರಹಿಕೆಯಿದೆ. ಬಿ.ಎಂ.ಶ್ರೀ ಅವರ ಚಿಂತನೆಗಳನ್ನು ೨೦ನೇ ಶತಮಾನದ ಚಾರಿತ್ರಿಕ ಸಂದರ್ಭದಲ್ಲಿಟ್ಟು ನೋಡಬೇಕು ಎನ್ನುವ ಎಚ್ಚರದ ನಡುವೆಯೂ 'ಬ್ರಾಹ್ಮಣರು ಬಳಸುವ ಕನ್ನಡವನ್ನು ಮಾದರಿ ಭಾಷೆ ಮಾಡಬೇಕು ಎನ್ನುವುದರ ಮೇಲೆ ಪ್ರಶ್ನೆ ಎತ್ತಬಹುದು' ಎನ್ನುವುದರಲ್ಲಿ ಎಚ್. ಎಸ್. ರಾಘವೇಂದ್ರರಾವ್ ಅವರ ಬಿ.ಎಂ.ಶ್ರೀ ಕುರಿತ ಗ್ರಹಿಕೆಗೆ ರಹಮತ್ ತರೀಕೆರೆ ಅವರ ಸಹಮತವಿರುವುದು ಸ್ಪಷ್ಟವಿದೆ.

ಬಿ.ಎಂ.ಶ್ರೀ ಅವರ ಗ್ರಾಮ್ಯವನ್ನು ಕುರಿತಾದ ಈ ಹೇಳಿಕೆ 'ಮುಂದಿನ ಗ್ರಂಥಗಳಿಗೆಲ್ಲಾ ಒಂದೇ ಸಮವಾದ ಭಾಷೆ'ಯನ್ನು, ಅಂದರೆ ಕನ್ನಡದಲ್ಲಿಯೇ ಒಂದು ಪ್ರಾಮಾಣೀಕೃತ ಭಾಷೆಯ ಹುಡುಕಾಟದ ಸಂದರ್ಭದಲ್ಲಿ ಬಂದಿದ್ದು ಎನ್ನುವುದು ಗಮನಿಸಬೇಕಾದದ್ದು.

ಬಿ.ಎಂ.ಶ್ರೀ ಅವರು ಯಾವುದನ್ನು ಕುರಿತು 'ಗ್ರಾಮ್ಯ' ಎನ್ನುತ್ತಿದ್ದಾರೆ ಎನ್ನುವುದೂ ಗೊಂದಲಕ್ಕೆ ಎಡೆಮಾಡುವಂತಿದೆ. 'ಕನ್ನಡಕ್ಕೆ ಒಂದು ಕಟ್ಟು' ಎನ್ನುವ ಲೇಖನದಲ್ಲಿ ಈ ಗೊಂದಲ ಸ್ಪಷ್ಟವಾಗಿದೆ. ಈ ಲೇಖನದಲ್ಲಿ ಅವರು ಕನ್ನಡಭಾಷೆ ಉಳಿದು ಬೆಳೆಯಲು ಯಾವ ಸ್ವರೂಪದಲ್ಲಿ ಇದ್ದರೆ ಸೂಕ್ತ ಎಂಬ ಚಿಂತನೆಯ ಹಿನ್ನೆಲೆಯಲ್ಲಿ ಅವರ ಕೆಲವು ನುಡಿಗಳನ್ನು ಗಮನಿಸೋಣ :

'(ವಿದ್ಯಾರ್ಥಿಗಳಿಗೆ ದೇಶಭಾಷೆಯನ್ನು ಬರೆಯುವುದನ್ನು ಕಲಿಸಿಕೊಡುವ) ವಿಹಿತವಾದ ಮಾರ್ಗ ಯಾವುದು ? ರೂಢಿಯಲ್ಲಿರುವ ಭಾಷೆಯನ್ನು ಕ್ರಮಪಡಿಸಿಕೊಳ್ಳುವುದೇ ಅಲ್ಲವೇ ? ಕೆಲವರ ಮನಸ್ಸಿನಲ್ಲಿ ಭಾಷೆ ಎನ್ನುವುದು ಓಲೆಗರಿಯಿಂದ ಹೊರಟು ಅಚ್ಚಿನಮೊಳೆಯ ಮೂಲಕ ಇಳಿದುಬರುವಂತೆ ಕಾಣುತ್ತದೆ. ಇವರಿಗೆ ಪುಸ್ತಕದಲ್ಲಿ ಕಣ್ಣಿಗೆ ತೋರುವ ಭಾಷೆ ಅಂದರೆ ಗೌರವ; ಜನರ ಬಾಯಿಂದ ಕಿವಿಗೆ ಬೀಳುವ ಭಾಷೆ ಅಂದರೆ ಧಿಕ್ಕಾರ. ಆದರೂ ಬರೆಯುವ ಭಾಷೆಗೆ ಆಡುವ ಭಾಷೆಯೇ ಜನ್ಮಸ್ಥಾನ. ಕಾವ್ಯವನ್ನು ಮೊದಲು ಬರೆದವನು ಆಡುವ ಭಾಷೆಯಲ್ಲಿ ತಾನೇ ಬರೆದಿರಬೇಕು? ಇವತ್ತಿನವರೆಗೆ ಕನ್ನಡ ಪುಸ್ತಕವೇ ಇಲ್ಲದಿದ್ದರೆ, ಈಗ ಮೊದಲು ಬರೆಯತಕ್ಕವನೂ ಹಾಗೆ ತಾನೇ ಮಾಡಬೇಕು ? ಹಿಂದಿನ ಭಾಷೆ ಆಗಿನ ಜನಕ್ಕೆ ತಿಳಿಯುತ್ತಿತ್ತು; ಈಗಿನ ಜನಕ್ಕೆ ತಿಳಿಯುವುದಿಲ್ಲ. ಅದರ ವ್ಯಾಕರಣ ಕಷ್ಟ; ಇದಲ್ಲದೆಯೂ ಅದರ ಶಬ್ದಕೋಶ ಈಗಿನ ಅಭಿಪ್ರಾಯಗಳನ್ನೆಲ್ಲಾ ಹೇಳಲಾರದು. ಆದರೂ ಬಹುಕಾಲದಿಂದಲೂ ಬರೆದು ಬರೆದು ಒಂದು ಕ್ರಮಕ್ಕೆ ಬಂದಿರುವ ಗ್ರಂಥಭಾಷೆ ಇರುವಾಗ, ಈಗಿನ ಗ್ರಂಥಕರ್ತರು ಅದನ್ನು ಧಿಕ್ಕಾರ ಮಾಡುವುದಕ್ಕೂ ಆಗುವುದಿಲ್ಲ. ಅದರ ಮೇಲೂ ದೃಷ್ಟಿ ಇರಲಿ; ಹೊಸ ಭಾಷೆಯ ಅಕ್ರಮ, ಅಪರೂಪವನ್ನೆಲ್ಲಾ ಅದರ ಮೇಲಿನ ಗಮನದಿಂದ ಒಂದು ಕ್ರಮಕ್ಕೆ ತರೋಣ. ಈಗ ಆಡುವ ಭಾಷೆಯಲ್ಲಿ ಕ್ರಮವಿಲ್ಲ, ಏಕರೂಪವಿಲ್ಲ; ಪ್ರಾಂತ್ಯಭೇದವಿದೆ, ಮಿಶ್ರವಿದೆ, ಗ್ರಾಮ್ಯವಿದೆ. ಅರ್ಥ, ಕ್ರಮ ಎರಡೂ ಬೇಕಾದರೂ ಅರ್ಥ ಮುಂದು, ಕ್ರಮ ಹಿಂದು; ಆದುದರಿಂದ ಅರ್ಥವಾಗುವ ಹೊಸ ಭಾಷೆಯನ್ನೇ ಹಿಡಿದು ಕ್ರಮಕ್ಕೆ ಬರುವಂತೆ ತಪ್ಪು ಭಾಗವನ್ನೆಲ್ಲಾ ಶೋಧಿಸೋಣ. ಎರಡು ಭಾಷೆಗೂ ಮಧ್ಯಮಾರ್ಗವನ್ನು ಹಿಡಿದರೆ ಅದು ಸಾಧ್ಯವಾಗುತ್ತದೆ. ಹೊಸಗನ್ನಡದಲ್ಲಿ ವಚನಗ್ರಂಥವನ್ನು ಬರೆಯುವುದಕ್ಕೆ, ಸತ್ತ ಕವಿಗಳೂ, ಶಾಸನಕಾರರೂ ಬಲವಾಗಿ ಹಿಡಿದಿರುವ ಮುಷ್ಟಿಯಿಂದ ಭಾಷೆಯನ್ನು ಸಡಿಲಿಸಿ, ಬದುಕಿರತಕ್ಕವರ ಬಾಯಿಯಲ್ಲಿ ಸ್ವತಂತ್ರವಾಗಿ ಉಸಿರಾಡಿ ಜೀವಕಳೆ ತುಂಬಿಕೊಳ್ಳುವಂತೆ ಮಾಡಬೇಕು. ಆದರೆ ಭಾಷೆಯನ್ನು ಸುಲಭ ಮಾಡುತ್ತೇನೆಂದು, ಅಬದ್ಧ ಮಾಡಬಾರದು; ಗ್ರಾಮ್ಯವನ್ನು ದೂರವೇ ನಿಲ್ಲಿಸಿ, ಭಾಷೆ ಶುದ್ಧವಾಗಿ, ಬಿಗಿಯೂ ಕಟ್ಟೂ ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕು.'

ಈ ಮಾತುಗಳಲ್ಲಿ ಕನ್ನಡದ ಉಳಿವಿಗೆ ಬಿ.ಎಂ.ಶ್ರೀ ಅವರು 'ಸತ್ತ ಕವಿಗಳೂ ಶಾಸನಕಾರರಿಂದ ಜೀವ ಕಳಕೊಂಡ ಗ್ರಾಂಥಿಕ ಭಾಷೆಗೆ' ಬದಲಿಯಾಗಿ 'ಜೀವಕಳೆಯಿಂದ ಕೂಡಿದ ಆಡುಭಾಷೆಯನ್ನೂ', ಪಂಡಿತರ ಹಳೆಗನ್ನಡಕ್ಕೆ ಬದಲಾಗಿ ಜನಸಾಮಾನ್ಯರಾಡುವ ಹೊಸಗನ್ನಡದ ಬಳಕೆಯನ್ನೂ ಸ್ಪಷ್ಟವಾಗಿಯೇ ಸೂಚಿಸುತ್ತಿದ್ದಾರೆ. ಇಲ್ಲಿ ಬಿ.ಎಂ.ಶ್ರೀ ವಿದ್ಯಾರ್ಥಿಗಳಿಗೆ ದೇಶಭಾಷೆಯ ಬರವಣಿಗೆಗೆ ಬಳಸಲು ಸೂಚಿಸುತ್ತಿರುವ 'ರೂಢಿಯಲ್ಲಿರುವ ಭಾಷೆ', 'ಜನರ ಬಾಯಿಂದ ಕಿವಿಗೆ ಬೀಳುವ ಭಾಷೆ' ನಿಸ್ಸಂಶಯವಾಗಿ ಗ್ರಾಮ್ಯವೇ ಆಗಿದೆ. ಆದರೆ ಇಲ್ಲಿಯೇ 'ಗ್ರಾಮ್ಯ'ವನ್ನು ದೂರವೇ ನಿಲ್ಲಿಸಬೇಕೆಂದು ಹೇಳುತ್ತ ಗೊಂದಲ ಮೂಡಿಸುತ್ತಿದ್ದಾರೆ. ಹಾಗಿದ್ದರೆ ಬಿ.ಎಂ.ಶ್ರೀ ಅವರು ಭಾವಿಸಿದ 'ಗ್ರಾಮ್ಯ'ದ ಸ್ವರೂಪವೇನು ಎಂಬುದನ್ನು ಅರಿಯಬೇಕಾಗಿದೆ.

'ಗ್ರಾಮ್ಯವನ್ನು ಬಿಟ್ಟು ವಿದ್ಯಾವಂತರೂ ಉತ್ತಮ ಜಾತಿಯವರೂ ಆಡತಕ್ಕ ಸ್ಫುಟವಾದ ಕನ್ನಡವನ್ನು ಗ್ರಂಥ ಭಾಷೆಯಾಗಿ ತಿರುಗಿಸಿಬಿಟ್ಟರೆ, ಅಚ್ಚು ಹಾಕುವುದರಿಂದಲೂ ಮಕ್ಕಳಿಂದ ಕಲಿಸುವುದರಿಂದಲೂ ಇದೇ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ' ಎನ್ನುವ ಅವರ ನುಡಿಗಳು ಗ್ರಾಮ್ಯವೆಂದರೆ ಅಶಿಕ್ಷಿತರು ಮತ್ತು ಕೆಳಜಾತಿಯವರು ಆಡುವ ಭಾಷೆ ಎನ್ನುವ ಅರ್ಥ ಕೊಡುವಂತಿವೆ. 'ವಿದ್ಯಾವಂತರೂ ಉತ್ತಮ ಜಾತಿಯವರೂ ಆಡತಕ್ಕ ಸ್ಫುಟವಾದ ಕನ್ನಡ' ಎನ್ನುವುದು ಭಾಷೆ ಕುರಿತ ಬಿ.ಎಂ.ಶ್ರೀ ಅವರ ಚಿಂತನೆ ಬ್ರಾಹ್ಮಣಪರ ಅಥವಾ ಮೇಲ್ಜಾತಿಪರವಾದದ್ದು ಎನ್ನುವ ಅಭಿಪ್ರಾಯ ಮೂಡಲು ಕಾರಣವಾಗಿದೆ. ಬಿ.ಎಂ.ಶ್ರೀ ಅವರು ಜಾತಿಯಿಂದ ಬ್ರಾಹ್ಮಣರಾದದ್ದೂ ಈ ಅಭಿಪ್ರಾಯಕ್ಕೆ ಅನುಮೋದನೆಯ ಮುದ್ರೆಗಳು ಸುಲಭವಾಗಿ ಬೀಳಲು ಕಾರಣವಾಗಿದ್ದಂತೆ ತೋರುತ್ತವೆ.

ಈ ಗ್ರಹಿಕೆಯನ್ನು ಪುನರವಲೋಕಿಸುವ ಅಗತ್ಯವಿದೆ. ಬಿ.ಎಂ.ಶ್ರೀ ಅವರ ಈ ಕೆಳಗಿನ ಮಾತುಗಳನ್ನು ಗಮನಿಸಬೇಕಾಗಿದೆ:

೧. 'ಈಗಿನ ಕಾಲದಲ್ಲಿ ವಿದ್ಯಾವಂತನಾದವರು ಇಂಗ್ಲಿಷ್ ವಿದ್ಯೆಯಿಂದ ತಾವು ಪಡೆದ ಉತ್ತಮ ಜ್ಞಾನವನ್ನು ಕೂಡಿದಮಟ್ಟಿಗೆ ಸಾಮಾನ್ಯಜನರೂ ತಿಳಿದುಕೊಳ್ಳುವ ಹಾಗೆ ಅವರು ಆಡುವ ಭಾಷೆಯಲ್ಲೇ ಹರಡುವುದಕ್ಕೆ ಶಕ್ತರಾಗಿರಬೇಕಾದದ್ದು ನಮ್ಮ ದೇಶದ ಏಳಿಗೆಗೆ ಅವಶ್ಯಕವಾದ ಸೌಕರ್ಯಗಳಲ್ಲಿ ಒಂದಾಗಿದೆ.'

೨. 'ಸಂಸ್ಕೃತ ಆಡುವುದು ನಿಂತುಹೋದ ಎರಡು ಸಾವಿರ ವರ್ಷದ ಮೇಲೂ (ಕನ್ನಡ ಸಾಹಿತಿಗಳು) ಅದೇ ಭಾಷೆಯಲ್ಲಿ ಬರೆಯುತ್ತಿದ್ದರೇ ಹೊರತು, ಜನರು ಆಡುವ ದೇಶಭಾಷೆಗಳಲ್ಲಿ ಬರೆಯುವ ಯೋಚನೆಯೇ ಯಾರಿಗೂ ಬರಲಿಲ್ಲ.'

೩. '(ಆದರೆ ಸದ್ಯಕ್ಕೆ) ಜನರಿಗೆ ತಿಳಿಯದ ಭಾಷೆಯಲ್ಲಿ ಬರೆಯುವುದರಲ್ಲಿ ಯಾವ ಬುದ್ಧಿವಂತಿಕೆಯೂ ಇಲ್ಲ. ಹೊಸಗನ್ನಡವನ್ನೇ ಎಲ್ಲರೂ ಹಿಡಿಯಬೇಕು.'

೪. 'ಜನರು ರೂಢಿಗೆ ತಂದ ಮಾತುಗಳನ್ನು ಸಮಯೋಚಿತವಾಗಿ ಒಪ್ಪಿಕೊಳ್ಳಬೇಕು.'

೫. 'ಭಾಷೆಯಿಂದ ಜನರ ಜೀವನ ಮೇಲ್ಪಟ್ಟು, ಅವರ ವಿಚಾರಶಕ್ತಿ ಹೆಚ್ಚಿ, ಅವರ ಜೀವನದಲ್ಲಿ, ಒಟ್ಟು ಜನಾಂಗದ ಜೀವನದಲ್ಲಿ, ಒದಗಬಹುದಾದ ಸಮಸ್ಯೆಗಳು ಪಾರಾಗಿ ಜನತೆಯೂ ದೇಶವೂ ಸ್ವರ್ಗಪಥಕ್ಕೆ ಹಾರುವ ಪಕ್ಷಿಯಂತೆ ಮೇಲಕ್ಕೆ ಮೇಲಕ್ಕೆ ಹೋಗಲು ಸಾಧಕವಾಗಬೇಕು.'

ಮೇಲ್ಕಂಡ ಬಿ.ಎಂ.ಶ್ರೀ ಅವರ ಹೇಳಿಕೆಗಳಲ್ಲಿ 'ಸಾಮಾನ್ಯ ಜನ', 'ಜನರು ಆಡುವ ದೇಶಭಾಷೆ', 'ಜನರಿಗೆ ತಿಳಿಯದ ಭಾಷೆ' ಮತ್ತು 'ಜನರು ರೂಢಿಗೆ ತಂದ ಮಾತುಗಳು' ಎನ್ನುವುದನ್ನು ಗಮನಿಸಬೇಕು. ಬಿ.ಎಂ.ಶ್ರೀ ಅವರು ಇಲ್ಲಿ ಯಾರನ್ನು 'ಜನ' ಎನ್ನುತ್ತಿದ್ದಾರೋ ಆ ಜನ ಮುಂದೆ ಅವರ ಶಿಷ್ಯರಾದ ಕುವೆಂಪು ಅವರ ಪರಿಕಲ್ಪನೆಯ ಈ ನಾಡಿನ 'ಶ್ರೀಸಾಮಾನ್ಯ'ರೇ ಆಗಿದ್ದಾರೆ. ಶ್ರೀ ಅವರ ಕಾಲಘಟ್ಟದಲ್ಲಿ

ಒಟ್ಟು ಜನಸಂಖ್ಯೆಯ ಪ್ರಮಾಣದಲ್ಲಿ ಗ್ರಾಮೀಣರೇ ಹೆಚ್ಚಿದ್ದರಿಂದ ಅವರು ಹೇಳುತ್ತಿರುವ 'ಜನ' ಗ್ರಾಮೀಣರೇ ಆಗಿದ್ದಾರೆ ಎಂದೂ ನಿರ್ಣಯಿಸಬಹುದು. ಆದರೂ ಬಿ.ಎಂ.ಶ್ರೀ ಅವರು 'ಗ್ರಾಮ್ಯವನ್ನು ಬಿಟ್ಟು ವಿದ್ಯಾವಂತರೂ ಉತ್ತಮ ಜಾತಿಯವರೂ ಆಡತಕ್ಕ ಸ್ಫುಟವಾದ ಕನ್ನಡವನ್ನು ಗ್ರಂಥ ಭಾಷೆಯಾಗಿ' ಯಾಕೆ ಶಿಫಾರಸ್ಸು ಮಾಡುತ್ತಿದ್ದಾರೆ ಎನ್ನುವ ಪ್ರಶ್ನೆ ಮೂಡುತ್ತದೆ. ಈ ಮಾತುಗಳನ್ನು ಶ್ರೀ ಅವರು ಯಾವ ಸಂದರ್ಭದಲ್ಲಿ ಹೇಳುತ್ತಿದ್ದಾರೆ ಎನ್ನುವುದನ್ನು ಗಮನಿಸಬೇಕು.

ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಮಾಡಿದ ಈ ಭಾಷಣದ ಮುಂದಿನ ಮಾತುಗಳನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ: 'ಭಾಷೆಯನ್ನು ಈ ತರದಲ್ಲಿ ಸೋಸುವುದಕ್ಕೆ ಉದ್ದೇಶವೇನೆಂದರೆ, ಎಲ್ಲಾ ಜನರೂ ಓದಬೇಕೆನ್ನುವುದೇ. ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ, ಬರೆಯತಕ್ಕ ಕಾಲ ಹೋಯಿತು. ಈಗ ಹೆಂಗಸರು, ಗಂಡಸರು, ಚಿಕ್ಕವರು, ದೊಡ್ಡವರು, ಬ್ರಾಹ್ಮಣರು, ಒಕ್ಕಲಿಗರು, ಅಷ್ಟರೂ ಓದುವಂತೆ ಬರೆಯಬೇಕು.' ಅಂದರೆ ಕನ್ನಡಭಾಷೆಯನ್ನು ಜನಸಾಮಾನ್ಯರಿಗೆ ಹೊರೆಯಾದ ಗ್ರಾಂಥಿಕವಾದ ಸಂಸ್ಕೃತಭಾಷೆಯ ಹಿಡಿತದಿಂದಲೂ, ವ್ಯಾಕರಣ ಭಾರದಿಂದ ನಲುಗುವ ಹಳೆಗನ್ನಡದಿಂದಲೂ ಮುಕ್ತಗೊಳಿಸಿ ಎಲ್ಲರೂ ಸುಲಭವಾಗಿ ಬಳಸಬಹುದಾದಂತಹ 'ಪ್ರಮಾಣ ಭಾಷೆ'ಯೊಂದನ್ನು ರೂಪಿಸುವ ತುರ್ತು ಶ್ರೀ ಅವರದ್ದಾಗಿತ್ತು. ಅಂದರೆ ಕನ್ನಡಕ್ಕೊಂದು ಸಮರ್ಥವಾದ ಗ್ರಂಥಭಾಷೆಯನ್ನು ರೂಪಿಸುವ ಹಿನ್ನೆಲೆಯಲ್ಲಿ ಬಿ.ಎಂ.ಶ್ರೀ ಅವರು ಮೇಲ್ಕಂಡ ಮಾತುಗಳನ್ನು ಹೇಳುತ್ತಿದ್ದಾರೆ ಎನ್ನುವುದು ಅರಿವಾಗುತ್ತದೆ.

ಬಿ.ಎಂ.ಶ್ರೀ ಅವರು ಮಾತನಾಡುತ್ತಿರುವ ಒಂದು ಶತಮಾನದಷ್ಟು ಹಿಂದಿನ ಕನ್ನಡಭಾಷೆಯ ಸ್ಥಿತಿಯನ್ನು ಒಂದು ಕ್ಷಣ ಹಿಂತಿರುಗಿ ನೋಡಬೇಕು. 'ಆಗ ಎಲ್ಲ ಕಡೆ ಇಂಗ್ಲಿಷ್ ವಾತಾವರಣ ಎಷ್ಟರಮಟ್ಟಿಗಿತ್ತೆಂದರೆ ಕನ್ನಡದಲ್ಲಿ ಮಾತನಾಡುವುದು ತಪ್ಪು ಎಂದು ಆಂಗ್ಲ ಪ್ರಾಧ್ಯಾಪಕರು ನಂಬಿದ್ದ ಕಾಲ.' ಆ ಸಂದರ್ಭದಲ್ಲಿ ಇಂಗ್ಲಿಷಿನ ಎದುರು ಕನ್ನಡದ ಶಿಷ್ಟಭಾಷೆಯೂ ತಬ್ಬಲಿಯಂತೆ ತೋರುತ್ತಿತ್ತು. ಕನ್ನಡಜನ ಇಂಗ್ಲಿಷಿನ ಎದುರು ಕೀಳರಿಮೆಯಿಂದ ನರಳುತ್ತಿದ್ದಾಗ ಪ್ರಾದೇಶಿಕವಾಗಿ ಹಲವಾರು ಉಪಭಾಷೆಗಳನ್ನು ಹೊಂದಿದ್ದ ಕನ್ನಡಕ್ಕೆ ಒಂದು ನಿರ್ದಿಷ್ಟ ಪ್ರಮಾಣೀಕೃತ ಭಾಷೆ ಅಗತ್ಯವೆಂದು ಶ್ರೀ ಅವರಿಗೆ ಅನ್ನಿಸಿದಂತೆ ಕಾಣುತ್ತದೆ. ಆಗ ಅವರಿಗೆ 'ವಿದ್ಯಾವಂತರೂ ಉತ್ತಮ ಜಾತಿಯವರೂ ಆಡತಕ್ಕ ಸ್ಫುಟವಾದ ಕನ್ನಡ' ಆ ಸಂದರ್ಭದಲ್ಲಿನ ಏಕೈಕ ಪರ್ಯಾಯದಂತೆ, ಲಭ್ಯ ಮಾದರಿಯಂತೆ ಕಂಡುಬಂದಿದೆ. ಅಂದರೆ ಇಲ್ಲಿ ವಿದ್ಯಾವಂತರೂ ಉತ್ತಮ ಜಾತಿಯವರೂ ಆಡುವ ಭಾಷೆ ಶ್ರೇಷ್ಠ ಎನ್ನುವ ನಿಲುವು ಶ್ರೀ ಅವರದ್ದಲ್ಲ. ಆ ಸಂದರ್ಭದಲ್ಲಿ ಎಲ್ಲರೂ ಸಾಹಿತ್ಯದಲ್ಲಿ ಬಳಸಬಹುದಾದ 'ಸ್ಫುಟವಾದ ಕನ್ನಡ'ವಾಗಿ ಮಾತ್ರವೇ ಅವರು ಇದನ್ನು ಗಮನಿಸುತ್ತಿದ್ದಾರೆ.

ಸಮಕಾಲೀನ ಸಂದರ್ಭದ ಉದಾಹರಣೆಯೊಂದರ ಮೂಲಕ ಇದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಬಹುದು ಎನ್ನಿಸುತ್ತದೆ. ಈಗ ಖಾಸಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳ ರಾಕ್ಷಸ ಹೊಡೆತದಿಂದ ಸರ್ಕಾರಿ ಕನ್ನಡ ಶಾಲೆಗಳನ್ನು ಉಳಿಸುವ ನಿಟ್ಟಿನಲ್ಲಿ ಈ ಶಾಲೆಗಳಿಗೆ ವಿದ್ಯಾರ್ಥಿಗಳನ್ನು ಆಕರ್ಷಿಸುವ ಉದ್ದೇಶದಿಂದ ಒಂದನೇ ತರಗತಿಯಿಂದಲೇ ಇಂಗ್ಲಿಷನ್ನು ಕಲಿಸಲು ಆರಂಭಿಸಲಾಗುತ್ತಿದೆ. ಇದನ್ನು ಇಂಗ್ಲಿಷಿನ ಹಿಡಿತವನ್ನು ಸಡಿಲಿಸಲು ಮಾಡಿದ ಪ್ರಯತ್ನವೆಂದು ನೋಡದೆ ಕನ್ನಡಭಾಷೆಯ ವಿರುದ್ಧವೆಂದೋ, ಕನ್ನಡಭಾಷೆಯ ಅವಹೇಳನವೆಂದೋ ಅಥವಾ ಇಂಗ್ಲಿಷ್ ಪರವಾದ ನಿಲುವೆಂದೋ ಆರೋಪಿಸಿದರೆ ಅದು ಅನುಚಿತವಾಗುತ್ತದೆ.

ಈ ನೆಲೆಯಲ್ಲಿ ನೋಡಿದಾಗ ಇಂಗ್ಲಿಷ್ ಮತ್ತು ಸಂಸ್ಕೃತದ ಹಿಡಿತದಿಂದ ಕನ್ನಡವನ್ನು ಬಿಡಿಸಲು ಪ್ರಯತ್ನಿಸುತ್ತಿದ್ದ ಬಿ.ಎಂ.ಶ್ರೀ ನುಡಿಯಲ್ಲಿನ 'ವಿದ್ಯಾವಂತರ ಭಾಷೆ' ಎನ್ನುವುದು ಗ್ರಾಮೀಣರ ಭಾಷೆಯ ಅವಗಣನೆಯಂತೆ ಮತ್ತು 'ಉತ್ತಮಜಾತಿಯವರು ಆಡತಕ್ಕ ಸ್ಫುಟವಾದ ಕನ್ನಡ' ಎನ್ನುವುದು ಕೆಳಜಾತಿಯವರ ಭಾಷೆಯ ಅವಗಣನೆಯಂತೆ ಮತ್ತದು ಬ್ರಾಹ್ಮಣಪರವಾದ ನಿಲುವಾಗಿ ನೋಡುವುದು ತಪ್ಪಾದ ಗ್ರಹಿಕೆಯಾಗಿದೆ. ಬಿ.ಎಂ.ಶ್ರೀ ಅವರ ಒಟ್ಟು ಚಿಂತನೆಯಲ್ಲಿ ಗ್ರಾಮ್ಯಕನ್ನಡವನ್ನು ತಿರಸ್ಕಾರದಿಂದ ಕಂಡ ನಿದರ್ಶನಗಳಿಲ್ಲ. ಅವರು ಇಂಗ್ಲಿಷ್ ಗೀತಗಳನ್ನು ಕನ್ನಡಕ್ಕೆ ತಂದಿದ್ದೂ, ಕನ್ನಡಭಾಷೆ ಜನಮುಖಿಯಾಗಿರಬೇಕೆಂದು ಮತ್ತೆ ಮತ್ತೆ ಪ್ರತಿಪಾದಿಸಿದ್ದೂ ಗ್ರಾಮ್ಯಕನ್ನಡದ ಅಂದರೆ ಎಲ್ಲಾ ಜಾತಿ ಜನಾಂಗದ ಪರವಾಗಿದ್ದ ಚಿಂತನೆಯೇ ಆಗಿದೆ. 'ಭಾಷೆ ಮತ್ತು ಸಾಹಿತ್ಯಗಳು ಪ್ರತಿಷ್ಠಿತ ವರ್ಗದಿಂದ ವಿಶಾಲ ಸಮುದಾಯಗಳತ್ತ ಹರಿಯಬೇಕು ಎಂದು ಚಿಂತಿಸುವುದೇ ಸಮಾಜವಾದಿ ತುಡಿತ.' ಇದು ಬಿ.ಎಂ.ಶ್ರೀ ಅವರ ಚಿಂತನೆಯ ಲಕ್ಷಣವೆಂದು ಗುರುತಿಸುವ ರಹಮತ್ ತರೀಕೆರೆ ಅವರೇ ಬಿ.ಎಂ.ಶ್ರೀ ಅವರು ಹೇಳಿದ 'ಉತ್ತಮ ಜಾತಿಯವರು ಆಡತಕ್ಕ ಸ್ಫುಟವಾದ ಕನ್ನಡ' ಎನ್ನುವ ಮಾತನ್ನು 'ಬ್ರಾಹ್ಮಣರು ಬಳಸುವ ಕನ್ನಡ' ಎಂದು ಗ್ರಹಿಸಿರುವುದು ಸರಳೀಕರಣವಾಗಿದೆ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕರಲ್ಲಿ ಪ್ರಮುಖರಾದ ಬಿ. ಕೃಷ್ಣಪ್ಪನವರ ಲೇಖನ 'ಕುವೆಂಪು ಲೇಖನಗಳಲ್ಲಿ ದಲಿತ ಜೀವನ ಚಕ್ರ' ಹುಟ್ಟುಹಾಕಿದ ವಾಗ್ವಾದ ಇಲ್ಲಿ ಉಲ್ಲೇಖನೀಯ. ಕುವೆಂಪು ಅವರ ಎರಡು ಕಾದಂಬರಿಗಳಲ್ಲಿ ಬರುವ ದಲಿತ ಮತ್ತು ಒಕ್ಕಲಿಗ (ಕುವೆಂಪು ಈ ಸಮುದಾಯಕ್ಕೆ ಸೇರಿದವರು) ಪಾತ್ರ ಚಿತ್ರಣಗಳಲ್ಲಿ ಲೇಖಕ ತೋರುವ ತಾರತಮ್ಯವನ್ನು ಮತ್ತು ಇದಕ್ಕೆ ಕಾರಣವಾಗಿರುವ ಲೇಖಕನ ವರ್ಗಪ್ರಜ್ಞೆಯನ್ನು ಕೃಷ್ಣಪ್ಪ ಅವರು ತಮ್ಮ ಲೇಖನದಲ್ಲಿ ವಿವರವಾಗಿ ವಿಮರ್ಶಿಸಿದ್ದರು. ಬಿಡಿಬಿಡಿಯಾಗಿ ಓದಿದಾಗ ಕೃಷ್ಣಪ್ಪನವರ ವಾದ ಸರಿ ಎನಿಸಿದರೂ ಕುವೆಂಪು ಅವರ ಸಾಹಿತ್ಯದ ಒಟ್ಟು ಧ್ವನಿ ದಲಿತಪರವಾಗಿರುವುದರಿಂದ ದಲಿತ ಸಂಘರ್ಷ ಸಮಿತಿಯವರೂ ಸೇರಿದಂತೆ ಕನ್ನಡ ಸಾಹಿತ್ಯಲೋಕ ಕೃಷ್ಣಪ್ಪನವರ ವಾದವನ್ನು ಸಮರ್ಥಿಸಲಿಲ್ಲ.

ಕುವೆಂಪು ಅವರ ಕುರಿತಾಗಿಯೇ ಇನ್ನೊಂದು ನಿದರ್ಶನವನ್ನು ಕೊಡುವುದಾದರೆ ಗುತ್ತಿ, ತಿಮ್ಮಿ, ಐತ, ಪೀಂಚಲುರಂತಹ ಸಾಮಾನ್ಯರ ಬಗ್ಗೆ ಚಿಂತಿಸಿದ ಕುವೆಂಪು ಅವರು ಜನಪದ ಸಾಹಿತ್ಯದ ಕುರಿತು ಗಂಭೀರರಾಗಿರಲಿಲ್ಲ. ಈ ಒಂದು ನಿದರ್ಶನದ ಮೂಲಕವೇ ಕುವೆಂಪು ಅವರನ್ನು ಸಾಮಾನ್ಯ ಜನರ ವಿರುದ್ಧದ ಚಿಂತನವುಳ್ಳವರೆಂದು ನಿರ್ಧರಿಸಲಾಗುವುದಿಲ್ಲ. ಹಾಗೆಯೇ ಮೇಲ್ಕಂಡ ಒಂದು ಮಾತಿನ ಮೇಲ್‌ಸ್ತರದ ಗ್ರಹಿಕೆಯಿಂದ ಬಿ.ಎಂ.ಶ್ರೀ ಅವರ ಚಿಂತನೆಯನ್ನು ಗ್ರಾಮ್ಯದ ವಿರುದ್ಧದ ಚಿಂತನೆಯೆಂದೋ ಅಥವಾ ಮೇಲ್ಜಾತಿಪರವಾದ ಚಿಂತನೆಯೆಂದೋ ನಿರ್ಧರಿಸಲಾಗುವುದಿಲ್ಲ. ಬಿ. ಕೃಷ್ಣಪ್ಪನವರ ವಾಗ್ವಾದ ಹುಟ್ಟಿಸಿದ ಲೇಖನದ ನಂತರ ಕುವೆಂಪು ಅವರು ಹುಟ್ಟಿದ ಜಾತಿಯನ್ನು ಬದಿಗಿಟ್ಟು ನಡೆದಂತಹ ಚರ್ಚೆಗಳು ಬಿ.ಎಂ.ಶ್ರೀ ಅವರ ಚಿಂತನೆಗಳ ವಿಚಾರಗಳಲ್ಲಿ ನಡೆದಿಲ್ಲ. ಈ ಪುನರ್ ವಿಮರ್ಶೆಯ ಕೊರತೆಯು ಕನ್ನಡದ ವಿದ್ವತ್‌ಲೋಕ ಭಾಷೆ ಕುರಿತ ಬಿ.ಎಂ.ಶ್ರೀ ಅವರ ಚಿಂತನೆಗಳನ್ನು ಹಲವು ಆಯಾಮಗಳಲ್ಲಿ ಪ್ರಮುಖವಾದದ್ದೆಂದು ಪರಿಗಣಿಸಿ ಗೌರವಿಸುವ ಹೊತ್ತಿನಲ್ಲಿಯೂ ಅವರ ಚಿಂತನೆಗಳಲ್ಲಿ 'ಮೇಲ್ಜಾತಿ ಪರವಾದ ನಿಲುವಿತ್ತು' ಎನ್ನುವ ಅಭಿಪ್ರಾಯವನ್ನು ಬದಲಿಸಿಕೊಳ್ಳದಿರಲು ಕಾರಣವಾಗಿದೆ.



## ವ್ಯತ್ಯಾಸ

ಎದೆ ಗೆಳತಿ, ನಾನು
ವರ್ಷ ಋತುವಿನಲಿ
ಬರುವ ಚಂಡಮಾರುತ,
ಅತೀ ವೇಗದಲಿ ಇಳೆಗೆ
ಬಂದು, ಅತೀವೇಗದಲಿ
ಶಾಂತಗೊಳ್ಳುವೆ !
ಆದರೆ ನೀನು...?
ವರ್ಷ ಋತುವಿನಲಿ
ಹೊಳೆಗೆ ಬರುವ
ಮಹಾಪೂರ,
ನಿಧಾನವಾಗಿ ಉಕ್ಕಿ
ಅಷ್ಟೇ ನಿಧಾನವಾಗಿ
ಶಾಂತಗೊಳ್ಳುವೆ !

ಲಾಲಸಾಬ. ಎಚ್. ನದಾಫ
ಬಾಗಲಕೋಟ

ಬಿ.ಎಂ.ಶ್ರೀ ಅವರ ಒಟ್ಟು ಚಿಂತನೆ ಆಡುಭಾಷೆಯ ಕನ್ನಡದ ಪರವಾಗಿದ್ದು, ಇಂದು ಡಿ. ಎನ್. ಶಂಕರಭಟ್ಟರು ಮಂಡಿಸುತ್ತಿರುವ ಸಂಸ್ಕೃತರಹಿತ ಆಡುಭಾಷಾ ಪ್ರಧಾನವಾದ ಕನ್ನಡ ಚಿಂತನೆಯ ಹೊಸ ಚಿಗುರುಗಳು ಬಿ.ಎಂ.ಶ್ರೀ ಅವರ ಚಿಂತನೆಗಳಲ್ಲಿಯ ಮೂಲ ಬೇರುಗಳಿಂದ ಕುಡಿಯೊಡೆದಿದ್ದಾಗಿವೆ.

**ಸಂಸ್ಕೃತ ಮತ್ತು ಇಂಗ್ಲಿಷ್ ಕುರಿತ ನಿಲುವುಗಳು**

'ರಾಜರ ಆಶ್ರಯದಿಂದಲೂ, ಮತಾಚಾರಗಳ ಭಕ್ತಿಯಿಂದಲೂ ಸಂಸ್ಕೃತ ಭಾಷೆ ವಿದ್ವನ್ಮಂಡಲಿಯಲ್ಲಿ ರಾಷ್ಟ್ರಭಾಷೆಯಾಗಿ ಗೌರವ ಸ್ಥಾನಕ್ಕೆ ಏರಿತು. ಬಹುಕಾಲ ಭಾರತ ಭೂಮಿಯನ್ನು ಒಂದುಗೂಡಿಸಿತು.' 'ನಾವು ಸ್ವೀಕರಿಸತಕ್ಕ ಭಾಷೆಗಳನ್ನು ಹೇಳುತ್ತಿರುವಾಗ ಸಂಸ್ಕೃತವನ್ನು ಬಿಡುವುದಕ್ಕಿಲ್ಲ, ಇದು ನಮ್ಮ ಪೂರ್ವಿಕರಾದ ಆರ್ಯರ ಭಾಷೆ.' ಸಂಸ್ಕೃತ ಭಾಷೆಯನ್ನು ಕುರಿತ ವ್ಯಾಮೋಹವೆನ್ನಿಸುವಷ್ಟು ಈ ರೀತಿಯ ಸ್ವರೂಪದ ಮಾತುಗಳು ಬಿ.ಎಂ.ಶ್ರೀ ಅವರ ಲೇಖನ ಮತ್ತು ಭಾಷಣಗಳಲ್ಲಿ ಬರುತ್ತವೆ. ಈ ಮಾತುಗಳು ಬಿ.ಎಂ.ಶ್ರೀ ಅವರ ವರ್ಗಪ್ರಜ್ಞೆಯ ಕಾರಣದಿಂದಾಗಿ ಬಂದಿವೆಯೇ ? ಈ ಹಿನ್ನೆಲೆಯಲ್ಲಿ ಸಂಸ್ಕೃತ ಭಾಷೆ ಕುರಿತ ಬಿ.ಎಂ.ಶ್ರೀ ಅವರ ನಿಲುವೇನು ಎನ್ನುವುದನ್ನು ಪರಿಶೀಲಿಸಬೇಕಾಗಿದೆ.

'ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ' ಎಂಬ ಕೃತಿಯಲ್ಲಿನ 'ಭಾಷೆಗಳ ಮೇಲಾಟ' ಶೀರ್ಷಿಕೆಯ ಅಧ್ಯಾಯದಲ್ಲಿ ಕನ್ನಡ, ಇಂಗ್ಲಿಷ್, ಹಿಂದಿ ಮತ್ತು ಸಂಸ್ಕೃತ ಭಾಷೆಗಳಲ್ಲಿ ಕನ್ನಡಿಗನು ಯಾವ ಭಾಷೆಯನ್ನು ಅನುಸರಿಸಬೇಕು ಎನ್ನುವ ಚರ್ಚೆಯನ್ನು ಮಾಡುವ ಬಿ.ಎಂ.ಶ್ರೀ ಅವರು ಸಂಸ್ಕೃತವನ್ನು ಕುರಿತು ನಾಡಿನ ಒಂದು ವರ್ಗದಲ್ಲಿರುವ ಆಸಕ್ತಿಯನ್ನು ವಿಶ್ಲೇಷಿಸುತ್ತಾರೆ. ಅದು ಹೀಗಿದೆ : 'ಈ ದೇಶದಲ್ಲಿ ಪೂಜ್ಯಸ್ಥಾನದಲ್ಲಿರುವುದು; ಕನ್ನಡ ಭಾಷೆಗೆ ಬಹುಕಾಲ ನಾನಾ ಬಗೆಯ ಚೈತನ್ಯವನ್ನು ತುಂಬಿ ನೂತನ ಮಾರ್ಗವನ್ನು ಕಲ್ಪಿಸಿಕೊಟ್ಟಿರುವುದು. ಅನೇಕ ಮಹನೀಯರು ತಮ್ಮ ಜೀವಮಾನವನ್ನೆಲ್ಲಾ ಇದಕ್ಕಾಗಿ ಧಾರೆಯೆರೆದು ಪುಷ್ಟವಾಗಿ ಮಾಡಿರುವ ಭಾಷೆ ಇದು. ಈಗಲೂ ಕೂಡ ಇದರ ಮೇಲೆ ಹೆಚ್ಚು ವಿಶ್ವಾಸ, ಹೆಚ್ಚು ಮಮತೆ ಇರುವ ಜನರು ಈ ಭಾಷೆಯಲ್ಲೇ ಮಾತನಾಡಿದರೂ ಆಗಬಹುದಾಗಿದೆ. ಆದ್ದರಿಂದ ಇದನ್ನೇ ಸುಲಭಗೊಳಿಸಿ ಭರತಖಂಡಕ್ಕೆ ಮತ್ತೊಮ್ಮೆ ರಾಷ್ಟ್ರ ಭಾಷೆಯನ್ನಾಗಿ ಏಕೆ ಮಾಡಬಾರದೆಂದು ಕೇಳಿದರೂ ಕೇಳಬಹುದು.' ಈ ಮಾತುಗಳು ಬಿ.ಎಂ.ಶ್ರೀ ಅವರ ಸಂಸ್ಕೃತ ಪರವಾದ ಮೇಲ್ವರ್ಗದ ಹಿತಾಸಕ್ತಿಯಿಂದ ಮೂಡಿರಬಹುದೇ ಎಂದು ಅನುಮಾನಿಸುವ ಹೊತ್ತಿಗೆ ಸಂಸ್ಕೃತವನ್ನು ಬಳಕೆಗೆ ತರುವ ಜನರ ನಿಲುವು ಎಷ್ಟು ವಾಸ್ತವಿಕವಾದದ್ದು ಎನ್ನುವುದನ್ನು ಮುಂದಿನ ಮಾತುಗಳಲ್ಲಿ ಪ್ರಶ್ನಿಸುತ್ತಾರೆ. 'ಆದರೆ, ಎಲ್ಲ ಕನ್ನಡಿಗರೂ ಸಂಸ್ಕೃತ ಭಾಷೆಯನ್ನೇ ಅಭ್ಯಾಸ ಮಾಡಿ ಅದರಿಂದಲೇ ಎಲ್ಲ ವಿಷಯಗಳನ್ನೂ ತಿಳಿದುಕೊಳ್ಳುವುದೂ, ಆ ಭಾಷೆಯಿಂದಲೇ ತಮ್ಮ ಏಳಿಗೆಯನ್ನು ಸಾಧಿಸಿಕೊಳ್ಳುವುದೂ ಎಷ್ಟು ಮಟ್ಟಿಗೆ ಸಾಧ್ಯ ?' ಎನ್ನುವ ಅವರ ಪ್ರಶ್ನೆಯಲ್ಲಿಯೇ ಸಂಸ್ಕೃತವನ್ನು ಪ್ರತಿಷ್ಠಾಪಿಸಬಯಸುವ ಹಿತಾಸಕ್ತಿಯ ವಿರೋಧವನ್ನು ಕಾಣಬಹುದು.

ಬಿ.ಎಂ.ಶ್ರೀ ಅವರು ಧಾರವಾಡದಲ್ಲಿ ಮಾಡಿದ ಭಾಷಣದಲ್ಲಿ ಸಂಸ್ಕೃತ ಭಾಷೆ ಯಾರಿಂದ ಮತ್ತು ಯಾವುದಕ್ಕೆ ಬಳಕೆಯಾಯಿತು ಎಂದು ಹೇಳುವ ಮೂಲಕ ಅದು ಸಾಮಾಜಿಕ ಶ್ರೇಣೀಕರಣಕ್ಕೆ ಕಾರಣವಾದುದನ್ನು ಸೂಚಿಸುತ್ತಾರೆ. 'ಸಾಮಾನ್ಯ ಜನರೆಂದರೆ ದಕ್ಷಿಣದಲ್ಲಿ ಆರ್ಯರಲ್ಲ ಶೂದ್ರರು. ಶೂದ್ರರನ್ನು ಕಂಡರೆ ಆರ್ಯರಿಗೆ ತಿರಸ್ಕಾರ ಈಗಲೂ ಇದೆ. ಹಿಂದೆ ಇನ್ನೂ ಹೆಚ್ಚೇ ಇದ್ದಿರಬೇಕು. ಈ ಶೂದ್ರರು ತಮ್ಮನ್ನು ಗೌರವದಿಂದ ಕಾಣುವುದಕ್ಕೆ ಎಷ್ಟು ಬೇಕೋ ಅಷ್ಟು ಅವರಿಗೆ ಉಪದೇಶವನ್ನು ಮಾಡಿದರು. ಮಿಕ್ಕದ್ದನ್ನೆಲ್ಲಾ ತಮ್ಮಲ್ಲೇ ಬಚ್ಚಿಟ್ಟುಕೊಂಡರು. ಗ್ರಂಥಗಳನ್ನು ಅವರ ಏಳಿಗೆಗೆ ಬರೆಯಲಿಲ್ಲ. ರಾಜಸಭೆಗಳಲ್ಲಿ ಸುಖಪುರುಷನಾದ ಪೋಷಕನಿಗೆ ಹೊಗಳು ಭಟ್ಟರಾಗಿ, ತಮ್ಮೊಳಗೆ ಒಬ್ಬರನ್ನೊಬ್ಬರನ್ನು ಜರೆಯುತ್ತಾ, ಸಂಸ್ಕೃತ ಕವಿಗಳನ್ನು ತಲೆಮೆಟ್ಟಿಹಾರಿದೆವೆಯೆಂದು ಪ್ರತಿಷ್ಠೆ ಕೊಚ್ಚುತ್ತಾ, ಹತ್ತು ಎಳೆ ಸಂಸ್ಕೃತ ಒಂದು ಎಳೆ ಕನ್ನಡ, ಹೀಗೆ ಕೂಡಿಸಿ ಬರಿಯ ಶಬ್ದಾಡಂಬರದ ಮಗ್ಗವನ್ನೂ ಹೆಣೆಯುತ್ತಾ, ದೊಡ್ಡ ಬಿರುದುಗಳನ್ನೂ ಧನವನ್ನೂ ಅಗ್ರಹಾರಗಳನ್ನೂ ಪಡೆಯುವುದಕ್ಕಾಗಿ ಸಂಸ್ಕೃತ ಪಂಡಿತರಾದ ಕವಿಗಳು ಈ ಗ್ರಂಥಗಳನ್ನು ಬರೆದದ್ದು. ರಾಜರ ಪ್ರಾಬಲ್ಯ ಮುರಿದುಹೋದ ಹಾಗೆಲ್ಲ ಈ ಕವಿಗಳ ಅಬ್ಬರವೂ ಅಡಗುತ್ತ ಬಂತು. ಶಿವಭಕ್ತರ ಕಾಲದಿಂದ ಸ್ವಲ್ಪಮಟ್ಟಿಗೆ ಅತಿ ಪಾಂಡಿತ್ಯಕ್ಕೆ ಹೋಗದೆ ಜನಮಂಡಲಿಗಾಗಿ ಬರೆದ ಕಾವ್ಯಗಳು ದೊರಕುತ್ತವೆ.' ಬಿ.ಎಂ.ಶ್ರೀ ಅವರ ಒಟ್ಟು ಚಿಂತನೆಗಳನ್ನು ಕುರಿತ ಇದುವರೆಗಿನ ಚರ್ಚೆಗಳನ್ನು ಗಮನಿಸಿದಾಗ ಈ ಚರ್ಚೆಗಳ ಮೇಲೆ ಬಿ.ಎಂ.ಶ್ರೀ ಅವರ ವೈಯಕ್ತಿಕವಾದ ಮೂರು ಸಂಗತಿಗಳು ಅಗತ್ಯಕ್ಕಿಂತ ಹೆಚ್ಚು ಪ್ರಭಾವ ಬೀರಿದಂತೆ ತೋರುತ್ತದೆ. ಅವುಗಳೆಂದರೆ: ಅವರ ಜಾತಿ, ಬ್ರಿಟಿಷ್ ವಸಾಹತು ಕುರಿತ ಮೃದು ಧೋರಣೆ ಮತ್ತು ರಾಜನಿಷ್ಠೆ. ಮುಖ್ಯವಾಗಿ ಭಾಷೆ ಸಂದರ್ಭದಲ್ಲಿ, ಸಂಸ್ಕೃತ ಭಾಷೆ ಕುರಿತ ಅವರ ನಿಲುವುಗಳನ್ನು ಚರ್ಚಿಸುವಾಗ ಅವರು ಹುಟ್ಟಿದ ಬ್ರಾಹ್ಮಣ ಜಾತಿಯ ಹಿನ್ನೆಲೆ, ಇಂಗ್ಲಿಷ್ ಭಾಷೆ ಕುರಿತ ಅವರ ನಿಲುವುಗಳನ್ನು ಚರ್ಚಿಸುವಾಗ ಬ್ರಿಟಿಷ್ ವಸಾಹತುಶಾಹಿ ಕುರಿತ ಅವರ ಮೃದು ಧೋರಣೆ ಪ್ರಭಾವ ಬೀರಿದಂತೆ ತೋರುತ್ತದೆ.

ಬಿ.ಎಂ.ಶ್ರೀ ಅವರ ಕಾಲಘಟ್ಟವನ್ನು ಗಮನಿಸಿದಾಗ ಆಗ ಸಂಸ್ಕೃತ ಬಲ್ಲ ವರ್ಗವೇ ಅಧಿಕಾರದ ಭಾಷೆಯಾಗಿದ್ದ ಇಂಗ್ಲಿಷನ್ನು ಅನುಸರಿಸತೊಡಗಿದ್ದು ಅರಿವಾಗುತ್ತದೆ. ಇಂತಹ ವರ್ಗವನ್ನು ಕನ್ನಡದತ್ತ ಒಲಿಸಿಕೊಳ್ಳುವ ಕಾರ್ಯತಂತ್ರದ ಭಾಗವಾಗಿಯೇ ಒಮ್ಮೆಗೆ ಸಂಸ್ಕೃತವನ್ನು ತಿರಸ್ಕರಿಸದೇ ಅದರ ಪರವಾದ ಮಾತುಗಳನ್ನು ಆಡುತ್ತಲೇ ಅನುಸಂಧಾನದ ಮಾರ್ಗದಲ್ಲಿ ಬಿ.ಎಂ.ಶ್ರೀ ಅವರು ನಡೆದರು ಎನ್ನುವುದು ಅರಿವಾಗುತ್ತದೆ. ಬಿ.ಎಂ.ಶ್ರೀ ಅವರ ಲೇಖನ ಮತ್ತು ಭಾಷಣಗಳಲ್ಲಿನ ಸಂಸ್ಕೃತ ಹಾಗೂ ಇಂಗ್ಲಿಷ್ ಪರವಾದ ನುಡಿಗಳನ್ನು ಬಿಡಿ ಬಿಡಿಯಾಗಿ ವಾಚ್ಯಾರ್ಥದಲ್ಲಿ ನೋಡದೆ ಒಟ್ಟಾರೆ ಧ್ವನಿಯನ್ನು ಗ್ರಹಿಸಿದಾಗ ಈ ಅಂಶ ಸ್ಪಷ್ಟವಾಗುತ್ತದೆ.

**ಕನ್ನಡ ಅಸ್ಮಿತೆ : ಸಾಹಿತ್ಯವಾದಿ ನೆಲೆಯಿಂದ ಸಾಮಾಜಿಕ ನೆಲೆಗೆ**

ಕನ್ನಡ ಅಸ್ಮಿತೆ ಕುರಿತ ಚಿಂತನಾಧಾರೆಗಳು ಹರಿದುಬಂದ ಕ್ರಮವನ್ನು ಗೆರೆ ಕೊರೆದಂತೆ ಗುರುತಿಸಲಾಗದಿದ್ದರೂ ಒಟ್ಟಾರೆಯಾಗಿ ಗಮನಿಸಿದಾಗ ಅವುಗಳು ಕ್ರಮವಾಗಿ ಸಾಹಿತ್ಯವಾದಿ, ಭಾಷಾ ಮೂಲಭೂತವಾದಿ, ಸಾಂಸ್ಕೃತಿಕ, ಜನಪ್ರಿಯ, ದ್ರಾವಿಡಶೋಧ ಮತ್ತು ಜನಕೇಂದ್ರಿತ ಅಥವಾ ಸಾಮಾಜಿಕ ನೆಲೆಗಳಲ್ಲಿ ಹರಿದು ಬಂದಿರುವುದನ್ನು ಗಮನಿಸಬಹುದು. ಈ ನೆಲೆಗಳಿಗೆ ಕಾರಣವಾದದ್ದು ಕನ್ನಡ ಭಾಷೆ ಎದುರುಗೊಂಡ ಆಯಾಯ ಕಾಲಘಟ್ಟದ ಸಾಹಿತ್ಯಿಕ ಹಾಗೂ ಸಾಮಾಜಿಕ ಸಂಕೀರ್ಣತೆಗಳು, ಪ್ರಭುತ್ವದ ನೀತಿಗಳು ಮತ್ತು ಇವುಗಳಿಂದ ಹುಟ್ಟಿದ ಅಪೇಕ್ಷೆಗಳು.

ಯಾವುದೇ ಭಾಷಾ ಅಸ್ಮಿತೆಯ ಮೇಲೆ ಕಾಲದ ಒತ್ತಡಗಳು ಪ್ರಧಾನ ಪಾತ್ರ ವಹಿಸುತ್ತವೆ. ಕನ್ನಡವು ವಿವಿಧ ಕಾಲಘಟ್ಟಗಳಲ್ಲಿ ಸಂಸ್ಕೃತ, ಇಂಗ್ಲಿಷ್ ಭಾಷೆಗಳ ಎದುರಿನಲ್ಲಿ ತನ್ನ ಅಸ್ಮಿತೆಯ ಉಳಿವಿಗಾಗಿ ಹೋರಾಟ ನಡೆಸಿದೆ. ವಸಾಹತುಶಾಹಿ, ನವವಸಾಹತುಶಾಹಿ ಕಾಲಘಟ್ಟದ ಜೀವನವಿಧಾನಗಳು ಕನ್ನಡದ ಅಸ್ಮಿತೆಯನ್ನು ಗಂಭೀರವಾಗಿ ಕಾಡಿವೆ. ಕನ್ನಡ ಏಕೀಕರಣ ಚಳುವಳಿ, ಗೋಕಾಕ್ ಚಳುವಳಿ, ಕಾವೇರಿ ಚಳುವಳಿ, ರೈತ, ದಲಿತ, ಅಹಿಂದ ಚಳುವಳಿಗಳು, ಬಂಡಾಯ ಸಾಹಿತ್ಯ ಚಳುವಳಿ, ಕನ್ನಡ ರಕ್ಷಣಾ ಪಡೆಯಂತಹ ಕನ್ನಡಪರ ಸಂಘಟನೆಗಳ ಹೋರಾಟಗಳು ಕೂಡ ಕನ್ನಡ ಅಸ್ಮಿತೆಯ ಸ್ವರೂಪವನ್ನು ಬದಲಾಯಿಸುತ್ತಾ ಬಂದಿವೆ.

ಮೇಲ್ಕಂಡ ಸಂಗತಿಗಳ ಪ್ರಭಾವದಿಂದ ರೂಪು ಪಡೆದ ಕನ್ನಡ ಅಸ್ಮಿತೆ ಕುರಿತಾದ ಚಿಂತನಾಧಾರೆಗಳು ೨೦ನೇ ಶತಮಾನದ ಆರಂಭಘಟ್ಟದಲ್ಲಿ ಸಾಹಿತ್ಯಿಕ ನೆಲೆಯಲ್ಲಿ ಆರಂಭಗೊಂಡು ಶತಮಾನದ ಅಂತ್ಯದಲ್ಲಿ ಸಾಮಾಜಿಕ ನೆಲೆಗೆ ಬಂದು ಸೇರಿದಂತೆ ಭಾಸವಾಗುತ್ತದೆ. ಒಬ್ಬನೇ ಚಿಂತಕನ ಚಿಂತನೆಗಳ ನೆಲೆ ಕಾಲಘಟ್ಟಗಳಲ್ಲಿ ಬದಲಾದದ್ದನ್ನೂ ನಾವು ಗಮನಿಸಬಹುದು. ಸಾಂಸ್ಕೃತಿಕ ನೆಲೆಯಲ್ಲಿದ್ದ ಅನಂತಮೂರ್ತಿ ಅವರ ಚಿಂತನೆಗಳು ಕೊನೆಯ ದಶಕಗಳಲ್ಲಿ ಸಾಮಾಜಿಕ ನೆಲೆಗೆ ಬದಲಾದದ್ದನ್ನೂ ನಾವು ಗುರುತಿಸಬಹುದು. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ 'ಭಾಷಾ ಮೂಲಭೂತವಾದಿ ನೆಲೆ'ಯೊಂದನ್ನು ಹೊರತುಪಡಿಸಿ ಉಳಿದ ಚಿಂತನಾಧಾರೆಗಳಲ್ಲೆಲ್ಲ ಸಾಮಾಜಿಕ ನೆಲೆಯೂ ಅಂತರ್ಗತವಾಗಿದ್ದು ಆಯಾಯ ಸಂದರ್ಭದ ತುರ್ತಿಗೆ ಸ್ಪಂದಿಸಿ ನಿರ್ದಿಷ್ಟ ಚಿಂತನಾಧಾರೆಗಳು ಮುನ್ನೆಲೆಗೆ ಬಂದಿದ್ದನ್ನು ನೋಡಬಹುದು. ಸಾಹಿತ್ಯವಾದಿ ನೆಲೆಯಲ್ಲಿ ಇದುವರೆಗೂ ಚರ್ಚಿಸಲ್ಪಟ್ಟ ಬಿ.ಎಂ.ಶ್ರೀ ಅವರ ಚಿಂತನೆಗಳಲ್ಲಿ ಸಾಮಾಜಿಕ ನೆಲೆಯೂ ಪ್ರಮುಖವಾಗಿತ್ತು ಎಂಬುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು.

**ಸರ್ಜಾಶಂಕರ್ ಹರಳಿಮಠ**
ದೇಸಿ ಸಂಸ್ಕೃತಿ, ಮೈಲಾರೇಶ್ವರ ಸಂಕೀರ್ಣ, ಬಿ. ಎಚ್. ರಸ್ತೆ
ಶಿವಮೊಗ್ಗ – ೫೭೭ ೨೦೧



# ಸದ್ಧು, ಅಸಹಿಷ್ಣುತೆ ತಾಂಡವವಾಡುತ್ತಿದೆ !

೧. ನಿನ್ನ ಹೆಸರೇನು ?

ಎಲ್ಲ ಗಲ್ಲಿಗಳಂತೆ ಇದು ಕೂಡ ಇಬ್ಭಾಗವಾಗಿ ಹಂಚಿಹೋಗಿತ್ತು. ಒಂದೆಡೆ ಹಿಂದೂಗಳ ವಠಾರ; ಇನ್ನೊಂದೆಡೆ ಮುಸಲ್ಮಾನರ ಮೊಹಲ್ಲಾ.

ಹಿಂದೂಗಳ ವಠಾರದಲ್ಲೂ ಆಚೆ ಈಚೆ ಮುಸಲ್ಮಾನರ ಮನೆಗಳಿದ್ದವು. ಹಾಗೆಯೇ ಮುಸಲ್ಮಾನರ ಮೊಹಲ್ಲಾದಲ್ಲೂ ಏಳೆಂಟು ಹಿಂದೂಗಳ ಬಿಡಾರಗಳಿದ್ದವು.

ಒಮ್ಮೆಲೇ ಗಲಭೆ ಶುರುವಾಯ್ತು. ಅದರ ಕಾವು ಇದ್ದಕ್ಕಿದ್ದಂತೆ ಏರತೊಡಗಿತು. ಸುತ್ತ-ಮುತ್ತಲೆಲ್ಲ ಹೊಡಿ-ಬಡಿ, ಕೊಚ್ಚು-ಕಡಿ, ಗೌಜು-ಗದ್ದಲ. ನೆಮ್ಮದಿಯ ಉಸಿರನ್ನು ತುಂಬುವ 'ಹರ ಹರ ಮಹಾದೇವ', 'ಅಲ್ಲಾ-ಹೋ-ಅಕಬರ್' ಸ್ವರಗಳು ಮೈ ನಡುಗಿಸುತ್ತಿದ್ದವು. ಅಂಥದ್ದರಲ್ಲಿ ಏನಾಗಬೇಕಿತ್ತೋ... ಅದೇ ಆಯ್ತು. ಮುಸಲ್ಮಾನರು ತಮ್ಮ ಸುತ್ತಮುತ್ತಲಿನ ಹಿಂದೂಗಳ ಮನೆಗಳಿಗೆ ಬೆಂಕಿಯಿಟ್ಟರು. ಕೆಲವರು ಸುಟ್ಟು ಕರಕಲಾದರು, ಕೆಲವರು ಹೊರಗೋಡಿ ಬಂದು ಸಾವರಿಸಿಕೊಳ್ಳುವಷ್ಟರಲ್ಲಿ ಅವರನ್ನೂ ಸಾಯಿಸಿದರು. ಇನ್ನು ಕೆಲವರು ತಪ್ಪಿಸಿಕೊಂಡು ಓಡಿದ್ದರಾದರೂ ಚಾಕು, ಚೂರಿ, ಈಟಿ, ದೊಣ್ಣೆ ಹಿಡಿದವರು ಅವರನ್ನು ಹುಡುಕತೊಡಗಿದ್ದರು.

ಇತ್ತ ಹಿಂದೂಗಳು ಯಾವುದರಲ್ಲಿ ಕಡಿಮೆ ಹೇಳಿ ?... ಹೀಗೆಯೇ ಇಲ್ಲಿಯೂ ಆಯಿತು. ಈ ನೂಕುನುಗ್ಗಲಿನಲ್ಲಿ ನಾಲ್ಕೈದು ವರ್ಷದ ಮುಸ್ಲಿಂ ಹುಡುಗನೊಬ್ಬ ಈ ದಂಗೆಕೋರರಿಂದ ತಪ್ಪಿಸಿಕೊಂಡು ಓಡೋಡಿ ಬಂದು ಒಂದು ಮನೆಯೊಳಗೆ ಹೊಕ್ಕುಬಿಟ್ಟ.

"ಅಂಕಲ್ ನನ್ನನ್ನು ರಕ್ಷಿಸಿ, ಅಂಕಲ್ ನನ್ನನ್ನು ರಕ್ಷಿಸಿ" ಎಂದು ಮೊರೆಯಿಡುತ್ತ ಪುರೋಹಿತರ ಕಾಲುಗಳಿಗೆ ಗಟ್ಟಿಯಾಗಿ ಸುತ್ತಿಕೊಂಡ. ದಂಗೆಕೋರರು ಇಲ್ಲಿಗೆ ಬಂದರೆ ಈ ಹುಡುಗನನ್ನು ಸುಮ್ಮನೆ ಬಿಡಲಾರರು. ಪುರೋಹಿತರಿಗೆ ತಲೆ ತಿರುಗಿದಂತಾಯ್ತು. ಅವನೆರಡೂ ಕೈಗಳಿಂದ ಆವರಿಸಿಕೊಂಡಿರುವ ತನ್ನ ಕಾಲುಗಳನ್ನು ಬಿಡಿಸಿಕೊಂಡು ಅವನನ್ನು ಹೊರಗೆ ಕಳಿಸಬೇಕೆಂದೆನಿಸಿದರೂ ಮುಖದಲ್ಲಿರುವ ಆ ಎಳಸುತನ, ಮುಗ್ಧತೆಯ ನೈಜರೂಪ... ಅವನ ಬಿಗಿಯಾದ ಹಿಡಿತದಿಂದ ತಪ್ಪಿಸಿಕೊಳ್ಳುವುದು ಆ ಕ್ಷಣ ಪುರೋಹಿತರಿಗೆ ಅಸಾಧ್ಯವೆನಿಸಿತು. ಅತ್ಯಂತ ಮೆಲುದನಿಯಲ್ಲಿ ಕೇಳಿದರು, "ನಿನ್ನ ಹೆಸರೇನು?"

"ರೆಹಮಾನ್"

"ಅಲ್ಲಲ್ಲ, ನಿನ್ನ ಹೆಸರು ರಾಮ. ಇದು ಹಿಂದೂಗಳ ಮನೆ. ಯಾರಾದರೂ ನಿನ್ನ ಹೆಸರು ಕೇಳಿದರೆ 'ರಾಮ' ಅಂತ ಹೇಳು...ಏನು ಹೇಳು ನಿನ್ನ ಹೆಸರು ?"

"ರಾ...ರಾ...ರಾಮ" ಮಗು ಹೇಳಿತು.

"ಹಾಂ...ರಾಮ ಎಂದೇ ಹೇಳಬೇಕು."

ಆಗಲೇ ಗುಂಪೊಂದು 'ಹರ-ಹರ ಮಹಾದೇವ' ಎನ್ನುತ್ತ ಅಲ್ಲಿಗೆ ಲಗ್ಗೆಯಿಟ್ಟಿತು. ಹುಡುಗನ ಮೇಲೆ ಅವರಿಗೆ ಅದೇಕೋ ಸಂದೇಹ ಬಂದಂತಿತ್ತು. ಕೈಲಿದ್ದ ಚಾಕು ಝಳಪಿಸುತ್ತ, ಅವರಲ್ಲೊಬ್ಬ ಕೆಂಗಣ್ಣಲ್ಲಿ ಬೆಂಕಿಯುಗುಳುತ್ತ ಕೇಳಿದ, "ಏನು ನಿನ್ನ ಹೆಸರು?"

"ರೆ...ರ...ರಾಮ"

ಗುಂಪು ಘೋಷಣೆ ಕೂಗುತ್ತ ಬಂದ ದಾರಿಯಲ್ಲಿ ಹಿಂದಿರುಗಿತು. ಪುರೋಹಿತರು ದೀರ್ಘ ನಿಟ್ಟುಸಿರು ಬಿಟ್ಟು, ಮುಚ್ಚಿಕೊಂಡಿದ್ದ ಕಣ್ಣು ತೆರೆದು ಹೇಳಿದರು, "ವಾತಾವರಣ ಶಾಂತವಾಗುವ ತನಕ ಯಾರೇ ನಿನ್ನ ಹೆಸರು ಕೇಳಿದರೂ, ರಾಮ ಅಂತ ಹೇಳು. ಆಮೇಲೆ ನಿನ್ನನ್ನು ಮನೆಗೆ ಕಳಿಸಿಕೊಡ್ತೇನೆ...ಈಗ ನೀನು ಮಲಗು, ನಾನೂ ಮಲಗುತ್ತೇನೆ."

ನಿದ್ದೆ ಮಗುವಿನ ಬಳಿಗೆ ಸುಳಿದರಲ್ಲವೆ ? ಮುಂಜಾನೆಯಿಂದ ನಡೆದ ಒಂದೊಂದು ಘಟನೆಯೂ ಚಲನಚಿತ್ರದಂತೆ ಕಣ್ಣ ಮುಂದೆ ಹಾದುಹೋಗಲಾರಂಭಿಸಿತು. ಬೆಂಕಿಯನ್ನುಗುಳುವ ಆ ಕೆಂಗಣ್ಣುಗಳು, ಝಳಪಿಸುವ ಆ ಚಾಕು-ಚೂರಿಗಳು... "ಹೇಳು, ನಿನ್ನ ಹೆಸರೇನು ?"... ಎಂಬ ಒತ್ತಾಯ...

ಭಯ ಒತ್ತರಿಸಿ ಬಂದಂತಾಗಿ ಅಪ್ಪನ ನೆನಪಾಯ್ತು...ಅಮ್ಮ ನೆನಪಾದಳು... ಮನೆ ಕಣ್ಮುಂದೆ ಕಟ್ಟಿದಂತಾಯ್ತು...ಬಾಗಿಲು ಸರಿಸಿ ನಿಧಾನವಾಗಿ ಹೊರನಡೆದುಬಿಟ್ಟ.

ಬೀದಿಯಲ್ಲಿ ಸ್ಮಶಾನ ಮೌನ. ದೂರದಲ್ಲಿ ಧಗಧಗಿಸುವ ಜ್ವಾಲೆಗಳು ಮುಗಿಲೆತ್ತರಕ್ಕೆ ಜಿಗಿಯುತ್ತಿದ್ದವು. ಕಮಟು ನಾರುವ ಹೊಗೆ. ಹುಡುಗ ತನ್ನ ಮನೆಯ ಮುಂಭಾಗವನ್ನು ನೆನಪಿಸಿಕೊಳ್ಳುತ್ತ ಮುಂದೆ ಮುಂದೆ ಸಾಗುತ್ತಿದ್ದ. ಕರಕಲಾದ ಮನೆಗಳೆಲ್ಲ ಒಂದೇ ರೀತಿ ಕಾಣಿಸುತ್ತಿದ್ದವು. ಅತ್ತ ಇತ್ತ ದೃಷ್ಟಿ ಹಾಯಿಸುತ್ತ ಮುಸ್ಲಿಂರ ಮೊಹಲ್ಲಾ ಆರಂಭವಾಗುವಲ್ಲಿಗೆ ತಲುಪಿದ. ಅಲ್ಲಿಯೂ ದಂಗೆಕೋರರ ಗುಂಪೊಂದು ಬಿಚ್ಚು ಕತ್ತಿ ಹಿಡಿದು ಘೋಷಣೆ ಕೂಗುತ್ತ ಅತ್ತಿತ್ತ ತಿರುಗುತ್ತಿತ್ತು. "ನೋಡಿ, ನೋಡಿ, ಅಲ್ಲೊಂದು ಹಾವಿನ ಮರಿ ಹರಿದು ಕೊಂಡು ಬರುತ್ತಿದೆಯಲ್ಲ ! ಹಿಡಿದು ಚಚ್ಚಿ ಅದನ್ನು..." ಒಮ್ಮೆಲೇ ಬಂದು ಅವನನ್ನು ಸುತ್ತುವರಿದರು. ಒಬ್ಬ ದಂಗೆಕೋರ ತನ್ನ ಕೈಯಲ್ಲಿದ್ದ ಚಾಕುವನ್ನು ಝಳಪಿಸುತ್ತ ಕೇಳಿದ, "ಹೇಳು, ನಿನ್ನ ಹೆಸರೇನು ?"

"ರ...ರ...ರ...ರಾಮ"

ಚಿಮ್ಮಿದ ರಕ್ತದ ಕಾರಂಜಿಯೊಂದಿಗೆ ಚೀತ್ಕಾರವೊಂದು ಕೇಳಿಸಿತು.

ಆ ರಾತ್ರಿ ಕೆಲವು ನಾಯಿಗಳು ಘೋಷಣೆ ಕೂಗುತ್ತ ಮಹಜರು ಮಾಡುವುದಕ್ಕಾಗಿ ಆ ಮಗುವಿನ ಹೆಣವನ್ನು ಅತ್ತಿಂದಿತ್ತ ಎಳೆದಾಡುತ್ತಿದ್ದವು. ಮೇಲೆಲ್ಲೋ ಅಲ್ಲಾಹು ಮತ್ತು ಈಶ ತಮ್ಮ ತಲೆ ಚಚ್ಚಿಕೊಳ್ಳುತ್ತಿದ್ದರು.

ಮೂಲ : **ಘನಶ್ಯಾಮ್ ಅಗ್ರವಾಲ್**
ಕನ್ನಡಕ್ಕೆ : **ಡಾ॥ ಮಾಧವಿ ಎಸ್. ಭಂಡಾರಿ**
'ಮಂದಾರ', ಪದ್ಮನಾಭನಗರ, ಡಯಾನಾ ಥಿಯೇಟರ್ ಹಿಂಭಾಗ
ಉಡುಪಿ - ೫೭೬ ೧೦೧



# ಅಳಿದ ಅಮೆರಿಕಾ ವಿಶ್ವವಿದ್ಯಾಲಯಗಳು

**ಚಾ**ಮ್‌ಸ್ಕಿ ನಮ್ಮ ಮಧ್ಯೆ ಇನ್ನೂ ಜೀವಂತವಾಗಿರುವ ಚಿಂತನಾ ಚೈತನ್ಯ ಹಾಗೂ ನಮ್ಮನ್ನೂ ಆಲೋಚಿಸುವ ದಿಕ್ಕಿಗೆ ಕೊಂಡೊಯ್ಯುವ ಓರ್ವ ಪ್ರಜ್ಞಾವಂತ ಮನುಷ್ಯ. ಸಮಕಾಲೀನ ಸಂದರ್ಭದಲ್ಲಿನ ಸಂಗತಿಗಳನ್ನು ಐತಿಹಾಸಿಕ, ಸಾಮಾಜಿಕ, ವೈಜ್ಞಾನಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ ಹಾಗೂ ರಾಜಕೀಯದ ಆಧಾರಾಂಶಗಳ ಮೂಸೆಯಲ್ಲಿ ಪ್ರಸ್ತುತ ಆಗುಹೋಗುಗಳನ್ನು ತರ್ಕಬದ್ಧವಾಗಿ ಚರ್ಚಿಸಬಲ್ಲ ಅಸಾಮಾನ್ಯ ಪಂಡಿತ. (ಕಟ್ಟಾ ಎಡಪಂಥೀಯರು ಈತನನ್ನು ಆರಾಮ ಕುರ್ಚಿಯ ಮಾತಿನಮಲ್ಲನೆನ್ನುತ್ತಾರೆ). ಚಾಮ್‌ಸ್ಕಿ ಅಮೆರಿಕಾದ ಪೆನ್ಸಿಲ್ವೇನಿಯಾದ ಪಿಟ್ಸ್‌ಬರ್ಗ್ ಎಂಬಲ್ಲಿರುವ ಯುನೈಟೆಡ್ ಸ್ಟೀಲ್ ವರ್ಕರ್ಸ್ ಸಂಸ್ಥೆಯಲ್ಲಿನ ಅಧೀನ ಅಧ್ಯಾಪಕರ ಸಂಘಟನೆಯನ್ನುದ್ದೇಶಿಸಿ ಕೆಲವು ತಿಂಗಳ ಹಿಂದೆ ಅಲ್ಲಿನ ಸಮಕಾಲೀನ ಶಿಕ್ಷಣ, ಅದರ ಸ್ವರೂಪ, ಸ್ಥಿತಿಗತಿ, ಕಲಿಕಾ ವಿಧಾನ, ಅಧ್ಯಾಪಕರ – ವಿದ್ಯಾರ್ಥಿಗಳ ಸಂಬಂಧ, ಅಧ್ಯಾಪಕರನ್ನು ಕುರಿತಾದ ವಿಶ್ವವಿದ್ಯಾಲಯ ಆಡಳಿತ ಮಂಡಳಿಗಳ ಧೋರಣೆಗಳು, ಅವರನ್ನು ನಡೆಸಿಕೊಳ್ಳುವ ರೀತಿ ನೀತಿ, ಬೌದ್ಧಿಕ ಆಸ್ಥೆ ಇತ್ಯಾದಿ ಅನೇಕ ಗಹನವಾದ ವಿಷಯಗಳ ಬಗ್ಗೆ ವಿಚಾರಗಳನ್ನು ಮಂಡಿಸಿದರು. ಅದನ್ನು ಅಲ್ಲಿನ ಸಂಘದ ಸದಸ್ಯನಾದ ರಾಬಿನ್ ಜೆ. ಸೋವಾರ್ಡ್ 'ದಿ ಡೆತ್ ಆಫ್ ಅಮೆರಿಕನ್ ಯೂನಿವರ್‌ಸಿಟೀಸ್' ಎಂಬ ಶೀರ್ಷಿಕೆಯಡಿಯಲ್ಲಿ ಸಂಪಾದಿಸಿದ್ದಾನೆ. ಅಮೆರಿಕಾದಲ್ಲೆಲ್ಲೋ ಆದ ಈ ಚರ್ಚೆಯನ್ನು ಕಟ್ಟಿಕೊಂಡು ನಮಗೇನಾಗಬೇಕಿದೆ ಎಂದು ಹಲುಬುವ ಮಾನವ ಸಂಪನ್ಮೂಲ ಮಂತ್ರಿಗಳಿಗೆ, ಅಧ್ಯಾಪಕರಿಗೆ, ನೀತಿ ನಿರೂಪಕರಿಗೆ, ವಿದ್ಯಾರ್ಥಿ ಸಮುದಾಯಕ್ಕೆ, ಕಾಲೇಜು, ವಿಶ್ವವಿದ್ಯಾಲಯಗಳ ಆಡಳಿತಮಂಡಳಿಗಳಿಗೆ ಚಾಮ್‌ಸ್ಕಿಯ ಈ ಚರ್ಚಾ ವಿಷಯವು ಕಣ್ಣತೆರೆಸುವ ಒಂದು ಉತ್ತಮ ಪಾಠವಾಗಬಹುದು. ಇಂದಿನ ನಮ್ಮ ಭಾರತದ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಅನೇಕ ವೈವಿಧ್ಯಮಯವಾದ ಸಂಗತಿಗಳಿವೆ : ಸರ್ಕಾರದಿಂದ ಉನ್ನತ–ಶಿಕ್ಷಣವನ್ನು ವಿಮುಕ್ತಗೊಳಿಸಿ ಖಾಸಗಿಯವರಿಗೆ ಅದನ್ನು ಪ್ರವೇಶಿಸುವ ಮುಕ್ತ ಅವಕಾಶವನ್ನು ಕಲ್ಪಿಸುವುದು, ಅನುದಾನವನ್ನು ಕಡಿತಗೊಳಿಸುವುದು, ಬಡ ಹಾಗೂ ಮಧ್ಯಮ ಕುಟುಂಬ ವರ್ಗದ ವಿದ್ಯಾರ್ಥಿಗಳನ್ನು ಸಾಲದ ಕೂಪಕ್ಕೆ ತಳ್ಳುವುದು, ಅಧ್ಯಾಪಕರನ್ನು (ಅರೆ, ಅಲ್ಪಕಾಲಿಕ, ಗುತ್ತಿಗೆ, ಬೇಡಿಕೆಯಾಧಾರ ಇತ್ಯಾದಿ) ಗುಲಾಮರಂತೆ ನಡೆಸಿಕೊಳ್ಳುತ್ತಾ ಅವರಿಗೆ ನೀಡಬೇಕಾದ ಮುಂಬಡ್ತಿ, ಭತ್ಯೆ, ಸೌಲಭ್ಯಗಳಿಂದ ವಂಚಿಸಿ ಶೋಷಣೆಗೆ ಗುರಿ ಮಾಡುವುದರ ಮೂಲಕ ಲಾಭಗಳಿಸುತ್ತಾ ಶಿಕ್ಷಣವನ್ನು

**ಬಿ. ಎನ್. ವೇಣುಗೋಪಾಲ್**

ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರೇ ನಿರ್ಧಾರಗಳನ್ನು ಕೈಗೊಳ್ಳಲು ಪ್ರಮುಖವಾಗಿ ಅವಶ್ಯಕವಾಗಿರುವ ಪರಿಕರವೆಂದರೆ 'ನಮ್ಯತೆ.'
ಕೈಗಾರಿಕೆಗಳಲ್ಲಿ ಈ ಒಂದು ಪರಿಕಲ್ಪನೆಯು ಅವಶ್ಯಕತೆಗಿಂತ ಅಧಿಕವಾಗಿಯೇ ಕೇಳಬರುತ್ತದೆ.
ಇದರರ್ಥ ಮಾಲೀಕ ತನ್ನ ಲಾಭ ಹೆಚ್ಚಿಸಿಕೊಳ್ಳಲು ಮತ್ತು ಉತ್ಪಾದನಾ ವೆಚ್ಚವನ್ನು ಕಡಿತಗೊಳಿಸಲು ಕಡಿಮೆ ಕೂಲಿಗೆ
ಕಾರ್ಮಿಕರನ್ನು ನೇಮಿಸಿಕೊಳ್ಳುವುದು, ನಂತರ ಅವರನ್ನು ನಿರ್ದಾಕ್ಷಿಣ್ಯವಾಗಿ ಹೊರದಬ್ಬುವುದು.
ಇದೇ ನಿಯಮ ವಿಶ್ವವಿದ್ಯಾಲಯಗಳಲ್ಲಿರುವ ಅಧ್ಯಾಪಕರಿಗೂ ಅನ್ವಯಿಸುತ್ತದೆ. ಇದು ಘೋರವಲ್ಲದೆ ಇನ್ನೇನು !

ಸಾಮಾಜಿಕ ಸೇವೆಯಿಂದ ದೂರತಳ್ಳಿ ವ್ಯಾಪಾರೀಕರಣಗೊಳಿಸುವ ಹುನ್ನಾರಗಳು, ಇವನ್ನೆಲ್ಲ 'ಸುಧಾರಣೆ'ಗಳೆಂಬಂತೆ ಬಿಂಬಿಸಲಾಗುತ್ತಿದೆ. ಶಿಕ್ಷಣದಲ್ಲಿ ಈ ಅಪಥ್ಯಕರವಾದ ಬದಲಾವಣೆಗಳನ್ನು ಸರ್ಕಾರ ವಿವಿಧ ಹಂತಗಳಲ್ಲಿ ಸಕ್ರಿಯವಾಗಿ ಜಾರಿಗೆ ತರುತ್ತಿದೆ. ಈ ನಿಟ್ಟಿನಲ್ಲಿ ನಮ್ಮಲ್ಲಿನ ಉನ್ನತ ಶಿಕ್ಷಣ ಕ್ಷೇತ್ರದಲ್ಲಿ ಮುಂಬರುವ ಸನ್ನಿವೇಶಗಳನ್ನು ಅಮೆರಿಕಾದಲ್ಲಿರುವ ಹಾಗೆ ಯಥಾವತ್ತಾಗಿ ಅಲ್ಲದಿದ್ದರೂ ಇನ್ನೊಂದು ನೆಲೆಯ ದೃಷ್ಟಿಕೋನದಲ್ಲಿ ಅರ್ಥೈಸಲು ಈ ಲೇಖನ ಸಂಗ್ರಹವು ಸಹಕಾರಿ.

ಅಮೆರಿಕ ದೇಶವು ಪ್ರಪಂಚದ ಮುಂದೆ ಪ್ರಜಾಪ್ರಭುತ್ವ, ನಾಗರಿಕ ಸಮಾಜ, ಮಾನವ ಹಕ್ಕುಗಳ ಸಂರಕ್ಷಣೆ, ಪ್ರಗತಿ, ಶಾಂತಿ–ಸಮನ್ವಯತೆ ಎಂದು ಬಣ್ಣಬಣ್ಣದ ಮಾತುಗಳಿಂದ ಬೊಬ್ಬೆಹೊಡೆಯುವುದರಲ್ಲಿ ತಲ್ಲೀನವಾಗಿರುವ ಸಂದರ್ಭದಲ್ಲಿ ಅಲ್ಲಿನ ಆಂತರಿಕ ಸಮಾಜದ ಸಾಂಸ್ಥಿಕ ಕ್ಷೇತ್ರಗಳು ಸಮಗ್ರವಾಗಿ ಪ್ರಾಚೀನ ಗುಲಾಮಗಿರಿ ಪದ್ಧತಿ ಕಡೆಗೆ ಚಲಿಸುತ್ತಿವೆ. ಇದನ್ನು ಅಲ್ಲಿನ ನಾನಾ ಕ್ಷೇತ್ರಗಳಲ್ಲಿ, ಅದರಲ್ಲೂ ಉನ್ನತ ಶಿಕ್ಷಣದಲ್ಲಿನ ಭಾಗವಾಗಿರುವ ವಿಶ್ವವಿದ್ಯಾಲಯಗಳಲ್ಲಿ ಇಂತಹ ಪದ್ಧತಿಯನ್ನನುಸರಿಸುತ್ತಿರುವುದು ಖಂಡನೀಯ. ಅಧ್ಯಾಪಕರ ಸಂಘಟನೆಗಳಲ್ಲಿ ಅಂತಹ ಸೂಕ್ಷ್ಮ ಅಂಶಗಳನ್ನು ಒಂದೊಂದಾಗಿ ಒಳಹೊಕ್ಕು ನೋಡುವ ಚಾಮ್‌ಸ್ಕಿ ಪ್ರಯತ್ನ ಅನನ್ಯ.

ನವಬಂಡವಾಳಶಾಹಿಯು ಎಷ್ಟೆಲ್ಲಾ ಕ್ಷೇತ್ರಗಳಲ್ಲಿ ತನ್ನ ಇರುವಿಕೆಯನ್ನು ವಿಸ್ತರಿಸಿಕೊಳ್ಳುತ್ತಾ ಮುಂದೆ ಸಾಗುತ್ತದೆ ಎಂಬುದಕ್ಕೆ ಅಲ್ಲಿನ ಉನ್ನತ ಶಿಕ್ಷಣ ಸಂಸ್ಥೆಗಳಾದ ವಿಶ್ವವಿದ್ಯಾಲಯಗಳು ಜ್ವಲಂತ ಸಾಕ್ಷಿ ಎಂಬಂತಿವೆ. ಇದು ದುರಂತವಲ್ಲದೆ ಮತ್ತೇನು? ಇಂತಹ ಖಾಸಗಿ ನುಸುಳುವಿಕೆಗೆ ಅಲ್ಲಿ ನಲವತ್ತು ವರ್ಷಗಳಿಗೂ ಮಿಗಿಲಾದ ಇತಿಹಾಸವಿದೆ. ಭಾರತದಲ್ಲೂ ಕಳೆದ ಇಪ್ಪತ್ತ ಮೂರು ವರ್ಷಗಳಲ್ಲಿ ಇಂತಹುದೇ ಸನ್ನಿವೇಶಗಳನ್ನು ನೋಡಬಹುದಾಗಿದೆ. ಇಂದು ನಮ್ಮಲ್ಲಿನ ವಾಲ್‌ಮಾರ್ಟ್‌ಗಳಿಗೂ ಹಾಗೂ ಕಾಲೇಜು ಅಥವಾ ವಿಶ್ವವಿದ್ಯಾಲಯಗಳಿಗೂ ಹೇಳಿಕೊಳ್ಳುವಂತಹ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಬಂಡವಾಳಶಾಹಿ (ಆಧುನಿಕ) ಕೈಗಾರಿಕೆಯಲ್ಲಿರುವಂತಹ ಜೀತದಾಳಿನ ರೀತಿಯಲ್ಲಿ ವಿಶ್ವವಿದ್ಯಾಲಯಗಳು ಅಲ್ಲಿನ ಅಧ್ಯಾಪಕರನ್ನು ನೋಡುವ ಹಾಗೂ ನಡೆಸಿಕೊಳ್ಳುವ ಹೇಯವಾದ ಪರಿಪಾಠವು ಅವ್ಯಾಹತವಾಗಿ ಸಾಗಿದೆ. ಕೈಗಾರಿಕೀಕರಣವು ಶೈಶವಾವಸ್ಥೆಯಲ್ಲಿದ್ದ ಕಾಲದಲ್ಲಿನ ಯಾಂತ್ರಿಕತೆ ಹಾಗೂ ಮಾನವೀಯತೆಯ ಕೊಂಡಿ ಕಳಚಿಬೀಳುವ ಸನ್ನಿವೇಶಗಳನ್ನು ಆಂಗ್ಲ ಕವಿ ವಿಲಿಯಂ ಬ್ಲೇಕ್ (೧೭೫೭–೧೮೨೭) ತನ್ನ ಕವನಗಳಲ್ಲಿ ಚಿತ್ರಿಸಿದ್ದಾನೆ. ವಿಶ್ವವಿದ್ಯಾಲಯಗಳಿಂದು ಮಾರುಕಟ್ಟೆಯಲ್ಲಿನ ಬೇಡಿಕೆ ಮತ್ತು ಪೂರೈಕೆಯ ಅಂಶಗಳನ್ನಾಧರಿಸಿ ಅಲ್ಲಿನ ಅಧ್ಯಾಪಕರನ್ನು 'ಕೂಲಿಯಾಳು'ಗಳಂತೆ ಮತ್ತು ವಿದ್ಯಾರ್ಥಿಗಳನ್ನು 'ಗ್ರಾಹಕ'ರಂತೆ ಕಾಣುತ್ತಿವೆ. ಕಲೆ, ಸಾಹಿತ್ಯ, ಭಾಷೆ, ಸಂಸ್ಕೃತಿ, ಸಾಮಾಜಿಕ ಮೌಲ್ಯ ಇತ್ಯಾದಿಗಳಿಗೆ ಮೌಲ್ಯವರ್ಧಿತವಾಗಿ ಬೆಲೆಕಟ್ಟುವುದರ ಮೂಲಕ ವ್ಯಾಪಾರೀಕರಣಗೊಳಿಸುತ್ತಿದೆ. ಈ ಎಲ್ಲಾ ಕೆಲಸಗಳನ್ನು ಬಹು ಜಾಣತನದಿಂದ ವ್ಯವಸ್ಥಿತವಾದ ಕಾರ್ಯತಂತ್ರಗಳ ಮೂಲಕ ಜಾರಿಗೊಳಿಸಲಾಗಿದೆ. ಕೈಗಾರಿಕೆಗಳಲ್ಲಿ ಶ್ರಮದ ವೆಚ್ಚವನ್ನು ಕಡಿತಗೊಳಿಸುವ ನಾನಾ ರೀತಿ ಕಾರ್ಯತಂತ್ರಗಳನ್ನು ಸರ್ಕಾರಿ, ಅನುದಾನಿತ, ಖಾಸಗಿ ವಿಶ್ವವಿದ್ಯಾಲಯಗಳಲ್ಲಿಯೂ ಅನುಸರಿಸಲಾಗುತ್ತಿದೆ. ವಿಶ್ವವಿದ್ಯಾಲಯದ ಆಡಳಿತ ಮಂಡಳಿಗಳಿಂದು ವೆಚ್ಚ ಕಡಿಮೆಗೊಳಿಸುವ ಅಂಶವೊಂದನ್ನು ಮುಂದುಮಾಡಿ ಅಲ್ಲಿರುವ ಅಧ್ಯಾಪಕರಿಗೆ ನೀಡಬೇಕಾದ ಪೂರ್ಣಕಾಲಿಕ ವೇತನ, ಮುಂಬಡ್ತಿ, ಭತ್ಯೆ, ಇತರೆ ಸೌಕರ್ಯಗಳಿಗೆ 'ಪಂಗನಾಮ' ಹಾಕಬಹುದೆಂಬ ನೀತಿಗಳನ್ನು ಹೆಣೆಯುವುದರಲ್ಲಿ ಕಾರ್ಯಪ್ರವೃತ್ತವಾಗಿವೆ. ಅಮೆರಿಕೆಯ ಪ್ರತಿಷ್ಠಿತ ಅಧ್ಯಯನ ಸಂಸ್ಥೆಯಾದ ಎಂ.ಐ.ಟಿಯಲ್ಲಿ ಇಂದಿಗೂ ಬೋಧನೆ, ಸಂಶೋಧನೆಯ ಕೆಲಸದಲ್ಲಿ ತೊಡಗಿಕೊಂಡಿರುವ ಚಾಮ್‌ಸ್ಕಿ ವಸ್ತುಸ್ಥಿತಿಯನ್ನು ವಿಶ್ಲೇಷಿಸುವ ರೀತಿ ಕೆಲವರಿಗೆ ಅಪಥ್ಯವೆನಿಸಿದರೂ ಇತರರಿಗೆ ಮಾದರಿಯಾಗಿದೆ. ಅಮೆರಿಕಾದ ಫೆಡರಲ್ ರಿಸರ್ವ್‌ನ ಕಾರ್ಯಾಧ್ಯಕ್ಷನಾಗಿ ಸುಮಾರು ಆರು ವರ್ಷಗಳ ಕಾಲ ದೇಶದ ಹಣಕಾಸು ಹಾಗೂ ಅದಕ್ಕೆ ಸಂಬಂಧಪಟ್ಟ ಹಲವು ನೀತಿ ನಿರ್ಣಯಗಳನ್ನು ನಿರೂಪಿಸಿ ಜಾರಿಗೆ ತರುವಲ್ಲಿ ಯಶಸ್ಸು ಕಂಡಿದ್ದ ಆಲೆನ್ ಗ್ರೀನ್‌ಸ್ಪ್ಯಾನ್ ಎಂಬ ಅಪ್ರಬುದ್ಧ ಮೇಧಾವಿಯು ೧೯೯೭ರಲ್ಲಿ ಅಮೆರಿಕೆಯ ಕಾಂಗ್ರೆಸ್ ಸಭೆಯ ಮುಂದೆ ಆ ದೇಶದ ಸಮಗ್ರವಾದ ಕಾರ್ಮಿಕ ವರ್ಗ ಹಾಗೂ ಅವರ ಉದ್ಯೋಗದ ಸ್ಥಿತಿಗತಿಗಳನ್ನು ಕುರಿತು ಹೀಗೆ ಹೇಳುತ್ತಾನೆ: ನೋಡಿ, 'ಕಾರ್ಮಿಕ/ಉದ್ಯೋಗಿಗಳನ್ನು ಅವರ ಕಾರ್ಯಸ್ಥಾನಗಳಲ್ಲಿ ಹೆಚ್ಚು ಅಭದ್ರತೆಯಲ್ಲಿಟ್ಟು ಮತ್ತದನ್ನು ಮುಂದುವರೆಸಿದಷ್ಟೂ ಕಾಲವನ್ನು ದುಂದುಮಾಡದೆ ಲಾಭ ಗಳಿಕೆ ಮತ್ತು ಆರ್ಥಿಕಾಭಿವೃದ್ಧಿಯಾಗುವುದರ ಜೊತೆಗೆ ಸಮಾಜವು ಆರೋಗ್ಯವಾಗಿದ್ದು, ಕಾರ್ಮಿಕರು/ಉದ್ಯೋಗಿಗಳು ತಮ್ಮ ಮಾಲೀಕ (ಸರ್ಕಾರ/ಖಾಸಗಿ)ರಿಂದ ಅಧಿಕ ಕೂಲಿ/ವೇತನಕ್ಕೆ ಬೇಡಿಕೆಯಿಡದೆ, ಹೆಚ್ಚಿನ ಸೌಲಭ್ಯಗಳನ್ನು ಕೇಳದೆ ಹಾಗೂ ಪ್ರತಿಭಟಿಸುವ ಧೈರ್ಯವನ್ನು ತೋರದೆ ತೆಪ್ಪಗಿದ್ದು ಅವರು ತಮ್ಮತಮ್ಮ ಮಾಲೀಕರಿಗೆ ವಿಧೇಯರಾಗಿಯೂ ಹಾಗೂ ವಿನಮ್ರವಾಗಿಯೂ ಇರುತ್ತಾರೆ.' ಈತನ ದಡ್ಡತನದ ವಿಚಾರಧಾರೆಗೆ ಅಲ್ಲಿ ನೆರೆದಿದ್ದ ಕಾಂಗ್ರೆಸ್ ಸಭಾ ಸದಸ್ಯ ಮಂಡಳಿಯು ಈತನಿಗೆ ಮೇಲೆದ್ದು ನಿಂತು ಚಪ್ಪಾಳೆ ಮೂಲಕ ಬೆಂಬಲ ಸೂಚಿಸಿದ್ದು ದುರಂತವೇ ಸರಿ! ಇದರ ಯಥಾರ್ಥವನ್ನು ವಿಶ್ವವಿದ್ಯಾಲಯಗಳಿಗೆ ಅನ್ವಯಿಸಿಕೊಂಡಲ್ಲಿ ಅಲ್ಲಿನ ಕಾರ್ಯನಿರತ ಅಧ್ಯಾಪಕರು ಯಾವ ಹಂತದಲ್ಲಿ ತಮಗೆ ದೊರಕಬೇಕಿದ್ದ ಸೌಲಭ್ಯಗಳಿಂದ ವಂಚಿತರಾಗಿದ್ದು ಉದ್ಯೋಗದ ಅಭದ್ರತೆಯಿಂದ ನಲುಗುತ್ತಿದ್ದಾರೆಂದು ಊಹಿಸಬಹುದು. ಯಾವುದೇ ಸಂದರ್ಭದಲ್ಲಿ ಅವರಲ್ಲಿ ಹೊರತಳ್ಳಲ್ಪಡುವ ಭಯವಿದ್ದು ಇಡೀ ವರ್ಷ ಆ ಅಭದ್ರತೆಯ ಮನಸ್ಥಿತಿಯಲ್ಲಿಯೇ ಕೆಲಸ ಮಾಡುತ್ತಾರೆ. ಈ ಉಕ್ತಿಯನ್ನು ಯಥಾವತ್ತಾಗಿ ಸಮರ್ಥಿಸುವ ಮನಸ್ಸುಗಳು ನಮ್ಮ ಮಧ್ಯೆ ಇವೆಯೆಂದರೆ ಆಶ್ಚರ್ಯವಿಲ್ಲ. ಭಾರತದಲ್ಲೂ ಇಂತಹ ಪರಿಸರವು ಶಿಕ್ಷಣ ಕ್ಷೇತ್ರದಲ್ಲಿ ಹೆಚ್ಚು ಜನಪ್ರಿಯವಾಗಿದೆ ಎಂದು ಹೇಳಬೇಕಾಗಿಲ್ಲ. ಇದು ಸಮಾಜದ ಸ್ವಾಸ್ಥ್ಯವನ್ನು ಬುಡದಿಂದಲೇ ರೋಗಗ್ರಸ್ತವನ್ನಾಗಿಸುತ್ತದೆ. ವಿಶ್ವವಿದ್ಯಾಲಯಗಳು ವಾಣಿಜ್ಯೀಕರಣದ ದಾರಿ ಹಿಡಿದಿರುವುದು ಖೇದನೀಯ.

ಖಾಸಗಿ ಕೈಗಾರಿಕೆಗಳಲ್ಲಿರುವಂತೆ ವಿಶ್ವವಿದ್ಯಾಲಯಗಳಲ್ಲಿಯೂ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳ ನಡುವೆ ನಿರ್ವಾಹಕರು ಹಾಗೂ ಅಧಿಕಾರಿಗಳನ್ನು ಪ್ರತಿಷ್ಠಾಪಿಸಿ ಅವರೀರ್ವರನ್ನೂ ನಾನಾ ಕೋನಗಳಿಂದ ಒಬ್ಬರ ಮೇಲೆ ಇನ್ನೊಬ್ಬರನ್ನು ಛೂ–ಬಿಡುವ ಜೊತೆಗೆ ಹೆಚ್ಚು ಅನಾರೋಗ್ಯಕರವಾದ ನಿರ್ಬಂಧಗಳನ್ನು ಹೇರುತ್ತಾ ಅವರನ್ನು ಅಧೀನದಲ್ಲಿಡಲು ಉತ್ಸುಕರಾಗಿರುತ್ತಾರೆ. ಈ ರೀತಿಯ ಕಾರ್ಯತಂತ್ರಗಳಿಗೆ ಹಲವು ಉದಾಹರಣೆಗಳನ್ನು ನೀಡಬಹುದು. ಅವುಗಳೆಂದರೆ: ಅಕಡೆಮಿಕ್ ಡೈರೆಕ್ಟರ್, ಕೊ–ಆರ್ಡಿನೇಟರ್, ಕೌನ್ಸಿಲರ್ ಇತ್ಯಾದಿ ಪಟ್ಟಿ ಬೆಳೆಯುತ್ತದೆ. (ಬ್ರಟೋಲ್ಟ್ ಬ್ರೆಕ್ಟ್‌ನ 'ತ್ರೀ ಪೆನ್ನಿ ಅಪೇರ' ನಾಟಕದಲ್ಲಿ ಬರುವ 'ಮ್ಯಾಕ್‌ಹೀತ್'ನ ಪಾತ್ರ ಹೆಚ್ಚು ಸೂಕ್ತವೆನಿಸುತ್ತದೆ. ಆತ ತನ್ನ ಸ್ವಂತಕ್ಕೋಸ್ಕರ

ಯಾರನ್ನಾದರೂ ಬಲಿಕೊಡಬಲ್ಲ. ಸ್ನೇಹ, ದಾಕ್ಷಿಣ್ಯ, ಉದಾರ ಮನೋಭಾವ ಇತ್ಯಾದಿಗಳು ಕೆಲಸಕ್ಕೆ ಬಾರದವು. ಆತ ಕೇವಲ ವ್ಯಾವಹಾರಿಕ ಮನೋಧರ್ಮದವ). ಕಳೆದ ಮೂವತ್ತು ನಲವತ್ತು ವರ್ಷಗಳಲ್ಲಿ ಈ ತೆರನಾದ ಮಹನೀಯರ ಸಂಖ್ಯೆಯು ವಿಶ್ವವಿದ್ಯಾಲಯಗಳಲ್ಲಿ ಗಣನೀಯವಾಗಿ ಹೆಚ್ಚುತ್ತಲೇ ಇದ್ದು ಅಧ್ಯಾಪಕರ ಹಾಗೂ ವಿದ್ಯಾರ್ಥಿಗಳ ನಡುವೆ ಅಗಾಧವಾದ ಅಂತರವನ್ನು ಸೃಷ್ಟಿಸಿದೆ. ಈ ಒಂದು ಸಾಮಾಜಿಕ ಸಂಬಂಧವನ್ನು ಆಳವಾಗಿ ಅಭ್ಯಸಿಸಿರುವ ಬೆಂಜಮಿನ್ ಗಿನ್ಸ್‌ಬರ್ಗ್ ತನ್ನ 'ದಿ ಫ಼ಾಲ್ ಆಫ಼್ ದಿ ಫ಼್ಯಾಕಲ್ಟಿ: ದಿ ರೈಸ್ ಆಫ಼್ ದಿ ಆಲ್ ಅಡ್ಮಿನಿಸ್ಟ್ರೇಟೀವ್ ಯೂನಿವರ್‌ಸಿಟಿ ಆಂಡ್ ವೈ ಇಟ್ ಮ್ಯಾಟರ್ಸ್' ಎಂಬ ಪುಸ್ತಕದಲ್ಲಿ ಸುದೀರ್ಘವಾಗಿ ವಿಶ್ಲೇಷಿಸಿದ್ದಾನೆ. ಶಿಕ್ಷಣಾಧ್ಯಯನ ಹಾಗೂ ಶಿಕ್ಷಣ ಸಮಾಜಶಾಸ್ತ್ರದ ಶಿಸ್ತಿನವರು ಇದನ್ನು ಅಭ್ಯಸಿಸುವುದು ಉತ್ತಮವೆನಿಸುತ್ತದೆ. ವಿಶ್ವವಿದ್ಯಾಲಯಗಳ ಆಡಳಿತ ಮಂಡಳಿಗಳಲ್ಲಿ ಕೆಲಸ ಮಾಡುವ ಅಧಿಕಾರಿಗಳಿಗೆ ನೀಡುವ ಗರಿಷ್ಠ ವೇತನಕ್ಕೂ ಅಧ್ಯಾಪಕರಿಗೆ ನೀಡುವ ಕನಿಷ್ಠ ವೇತನಕ್ಕೂ ಇರುವ ಅಂತರವನ್ನು ಈತ ನಮಗೆ ಸಾಂಖ್ಯಿಕ ದತ್ತಾಂಶಗಳ ಸಹಿತ ತಿಳಿಸುತ್ತಾನೆ. ವಿಶ್ವವಿದ್ಯಾಲಯಗಳಿಗೆ ವಿದ್ಯಾರ್ಜನೆಗೆಂದು ಬರುವ ವಿದ್ಯಾರ್ಥಿಗಳಿಂದ ಹಣ ಕಸಿದು ಅಲ್ಲಿನ ಅಧಿಕಾರಿಗಳು ತಮ್ಮ ಕಿಸೆಯನ್ನು ತುಂಬಿಸಿಕೊಳ್ಳುವ ಆತುರದಲ್ಲಿದ್ದಾರೆ – 'ಗುಂಡನ ಮದ್ವೇಲಿ ಉಂಡವನೇ ಜಾಣ' ಎಂಬಂತಿದೆ ಸ್ಥಿತಿ.

ವಿಶ್ವವಿದ್ಯಾಲಯಗಳು ಉನ್ನತ ಶೈಕ್ಷಣಿಕ ತತ್ವಗಳಾಧಾರದಿಂದ ವಿಮುಖವಾಗಿ ಅವಸಾನಗೊಳ್ಳುತ್ತಿರುವುದು ಹೀಗೆ. ಇಂದು ಜನರು ಸಕ್ರಿಯವಾಗಿ ರಾಜಕೀಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದು ಸಮಾಜದ 'ವಿಶೇಷ ಆಸಕ್ತಿ'ಯುಳ್ಳವರ ಅನೇಕ ಹಕ್ಕುಗಳಿಗೆ ಅದರಲ್ಲೂ ಮಹಿಳೆಯರ ಮತ್ತು ಮಕ್ಕಳ, ಕಾರ್ಮಿಕರ, ರೈತರ, ಯುವಕರ ಹಾಗೂ ವೃದ್ಧರ ಇತ್ಯಾದಿ ಪರವಾಗಿ ಹೋರಾಡುತ್ತಿದ್ದಾರೆ. ಆದರೆ ಈ ಹೋರಾಟಗಳು ನಿಜಕ್ಕೂ ದಿಕ್ಕು ತಪ್ಪಿದವಾಗಿದ್ದು ಅವು ನಶಿಸಿಹೋಗುತ್ತಿವೆ. ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಪ್ರಜಾಪ್ರಭುತ್ವ, ಸ್ವಾತಂತ್ರ್ಯ, ಮಾನವಹಕ್ಕು ಸಂರಕ್ಷಣೆ ಎಂದು ಬೊಗಳೆ ಬಿಡುವ ಅಮೆರಿಕಾ ದೇಶವು ವಾಸ್ತವದಲ್ಲಿ ಆಂತರಿಕವಾಗಿ ಮುಗ್ಗಟ್ಟಿಗೆ ಸಿಲುಕಿರುವುದನ್ನು ಅಲ್ಲಿನ ತ್ರಿಪಕ್ಷೀಯ ಆಯೋಗವು ಸಿದ್ಧಪಡಿಸಿರುವ 'ದಿ ಕ್ರೈಸಿಸ್ ಆಫ಼್ ಡೆಮಾಕ್ರೆಸಿ' ಎಂಬ ವರದಿಯಲ್ಲಿ ವಿವರವಾಗಿ ನಮೂದಿಸುವುದರ ಜೊತೆಗೆ ಅಲ್ಲಿ ಸರ್ಕಾರವು ಅಗತ್ಯಕ್ಕಿಂತ ಹೆಚ್ಚಾಗಿಯೇ ಪ್ರಭುತ್ವವನ್ನು ಹೇರತೊಡಗಿದೆ ಎಂಬುದನ್ನೂ ತಿಳಿಸಿದೆ. ಓದಲು ಬರುವ ವಿದ್ಯಾರ್ಥಿಗಳಿಗೆ ಆರ್ಥಿಕವಾಗಿ ಸಹಾಯ ಮಾಡುವ ಬದಲು ಅವರನ್ನು ಸಾಲದ ಕೂಪಕ್ಕೆ ತಳ್ಳಿ ಸಾಲಗಾರರನ್ನಾಗಿಸುವುದು ಎಂತಹ ಪ್ರಜಾಪ್ರಭುತ್ವವೆನಿಸುತ್ತದೆ ? ಈ ನಿಟ್ಟಿನಲ್ಲಿ ವಿದ್ಯಾರ್ಥಿ ಸಮುದಾಯವನ್ನು ಜಾಗೃತಗೊಳಿಸಿ ತಮ್ಮ ಹಕ್ಕುಗಳಿಗೆ ಹೋರಾಡುವಂತೆ ಅಣಿ ಮಾಡುವುದು ಅವಶ್ಯಕ.

ಪ್ರಪಂಚದಲ್ಲಿ ಹಲವೆಡೆ ಉನ್ನತ ಶಿಕ್ಷಣವು ಸಾರ್ವಜನಿಕ ವೆಚ್ಚದಲ್ಲೇ ನಡೆಯುತ್ತಿರುವುದಕ್ಕೆ ಫ಼ಿನ್‌ಲ್ಯಾಂಡ್ ಒಂದು ಉತ್ತಮ ಉದಾಹರಣೆಯಾಗಿದೆ. ಯುರೋಪ್ ಖಂಡದಲ್ಲಿರುವ ಬಂಡವಾಳಶಾಹಿ ದೇಶವೆನಿಸಿರುವ ಜರ್ಮನಿಯಲ್ಲಿ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣವು ಅತಿ ಕಡಿಮೆ ಶುಲ್ಕದಲ್ಲಿ ಕೈಗೆಟಕುತ್ತಿರುವುದು ಆಶ್ಚರ್ಯದ ವಿಷಯವೇನಲ್ಲ. ಇನ್ನೊಂದೆಡೆ ಅತ್ಯಂತ ಕಡುಬಡತನದಲ್ಲಿರುವ ಮೆಕ್ಸಿಕೊ ದೇಶವು ಕೂಡ ಅಲ್ಲಿನ ಜನರಿಗೆ ಸೂಕ್ತವಾದ ಶಿಕ್ಷಣವನ್ನೊದಗಿಸುತ್ತಿದೆ. ಆದರೆ ನಲವತ್ತರ ಹಾಗೂ ಐವತ್ತರ ದಶಕಗಳಲ್ಲಿ ಉನ್ನತ ಶಿಕ್ಷಣ ಸೌಲಭ್ಯವನ್ನು ಹೆಚ್ಚು ಅಮೆರಿಕಾ ಸರ್ಕಾರವೇ ಸರಿದೂಗಿಸುತ್ತಾ ಮುನ್ನಡೆದಿದ್ದ ಅಂಶ ಗತಕಾಲದ ಸತ್ಯ. ಅಮೆರಿಕ ಸರ್ಕಾರದ 'ಶಿಕ್ಷಣ ಹೂಡಿಕೆ ಕಾಯ್ದೆ' ಅಡಿಯಲ್ಲಿ ಅಂದು ಕಾಲೇಜಿಗಾಗಲಿ ವಿಶ್ವವಿದ್ಯಾಲಯಗಳಿಗಾಗಲಿ ಹೋಗದ ಅದೆಷ್ಟೋ ಜನರನ್ನು ಸರ್ಕಾರಿ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು ಸಕಲ ಸೌಲಭ್ಯಗಳನ್ನು ನೀಡುವ ಮೂಲಕ ಉತ್ತೇಜಿಸುತ್ತಿತ್ತು. ಈ ರೀತಿಯ ಕಾಯ್ದೆಗಳು ನಿಜಕ್ಕೂ ಆರ್ಥಿಕ ಹಾಗೂ ಸಾಮಾಜಿಕ ದೃಷ್ಟಿಕೋನದಿಂದ ಅತ್ಯುತ್ತಮವಾಗಿದ್ದು ಹಾಗೂ ಬಹಳ ಅಗತ್ಯವಾಗಿರುತ್ತವೆ. ಚಾಮ್‌ಸ್ಕಿ ತನ್ನನ್ನೇ ಉದಾಹರಿಸುತ್ತ ೧೯೪೫ರಲ್ಲಿ ಐವಿ ಲೀಗ್ ಎನಿಸುವ ಪೆನ್ಸಿಲ್ವೇನಿಯಾದ ವಿಶ್ವವಿದ್ಯಾಲಯಕ್ಕೆ ಕೇವಲ ನೂರು ಡಾಲರ್‌ನಷ್ಟು ಶುಲ್ಕ ಪಾವತಿಸಿದ್ದು ಜೊತೆಗೆ ಹಲವು ರೀತಿಯ ವಿದ್ಯಾರ್ಥಿ ವೇತನವು ಲಭಿಸಿತು ಎಂಬ ಸತ್ಯವನ್ನು ಹೊರಗೆಡವಿದರು. "ಆದರೆ ಇಂದು ಅದೇ ಒಬ್ಬ ವಿದ್ಯಾರ್ಥಿಯು ಎಂಟು ನೂರು ಡಾಲರ್‌ನಷ್ಟು ಶುಲ್ಕ ಪಾವತಿಸುವ ಸನ್ನಿವೇಶವಿದೆ. ನನ್ನ ಮೊಮ್ಮಕ್ಕಳು ಉನ್ನತ ಶಿಕ್ಷಣಕ್ಕೆಂದು ದುಬಾರಿ ಶುಲ್ಕವನ್ನು ಪಾವತಿಸಿ ಅದನ್ನು ಕೆಲಸ ಮಾಡುವುದರ ಮೂಲಕವೂ ಸರಿದೂಗಿಸಲಾಗದ ಪರಿಸ್ಥಿತಿಯಿದೆ. ಉನ್ನತ ಶಿಕ್ಷಣ ವಲಯದಲ್ಲಿ ಇಂತಹ ಬೆಳವಣಿಗೆಯು ಆಘಾತಕಾರಿ ! ಉನ್ನತ ಶಿಕ್ಷಣವು ಆರ್ಥಿಕವಾಗಿರುವ ಬಲಾಢ್ಯರಿಗಾಗಿಯೇ ಮೀಸಲಿರುವಂತೆ ಭಾಸವಾಗುತ್ತಿದೆ. ಇದು ಸಾಮಾನ್ಯವಾದ ಸಂಗತಿಯೆಂದು ತಿಳಿದಿರುವುದು ವಿಷಾದನೀಯ. ಆರ್ಥಿಕವಾಗಿ ದುರ್ಬಲರಾಗಿರುವವರನ್ನು ಉನ್ನತ ಶಿಕ್ಷಣದಿಂದ ದೂರವಿರಿಸುವ ಒಂದು ಕಾರ್ಯತಂತ್ರವಾಗಿಯೂ ಇದು ಕೆಲಸ ಮಾಡುತ್ತಿದೆ. ಅದನ್ನು ಸಮಾಜದ ವಿಘಟನೆಯೆನ್ನಲಡ್ಡಿಯಿಲ್ಲ" ಎನ್ನುತ್ತಾನೆ ಚಾಮ್‌ಸ್ಕಿ.

ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕ–ವಿದ್ಯಾರ್ಥಿಗಳ ನಡುವೆ ಇರುವ ಸಾವಯವ ಸಂಬಂಧವನ್ನು ನಾನಾ ವಿಧಾನಗಳಲ್ಲಿ ಭಗ್ನಗೊಳಿಸಲಾಗುತ್ತಿದೆ. ಉದಾಹರಣೆಗೆ, ಚಿಕ್ಕ ತರಗತಿಗಳನ್ನು ದೊಡ್ಡ ತರಗತಿಗಳಾಗಿ ಪರಿವರ್ತಿಸುವುದು, ಅಲ್ಲಿ ಅಸಂಖ್ಯಾತ ವಿದ್ಯಾರ್ಥಿಗಳು ತುಂಬಿ ಪಾಠ ಕೇಳುವುದು, ಒಂದು ರೀತಿ 'ಬಂದ–ಪುಟ್ಟ ಹೋದ–ಪುಟ್ಟ' ಎಂಬಂತಿದೆ. ಇಲ್ಲಿ ತಂತ್ರಜ್ಞಾನವೂ ನುಸುಳಿದೆ. ಒಬ್ಬ ಅಧ್ಯಾಪಕನಿಗೆ ಅತಿ ಕಡಿಮೆ ವೇತನಕ್ಕೆ ಹೆಚ್ಚಿನ ಬೋಧನಾವಧಿಯನ್ನು ದಯಪಾಲಿಸುವುದರೊಂದಿಗೆ ಬೌದ್ಧಿಕ ಹಾಗೂ ಪದವಿಗಳ ಅರ್ಹತೆಯಿದ್ದರೂ ಅಧ್ಯಾಪಕನನ್ನು ಖಾಯಂಗೊಳಿಸದೆ ಅರೆ, ಸಂದರ್ಶಕ, ಸಹಾಯಕ ಇನ್ನೂ ಏನೇನೋ ಬಿರುದು ಅಥವಾ ಪದನಾಮಗಳಡಿಯಲ್ಲಿ ನೇಮಿಸಿಕೊಳ್ಳುವ ಅಕ್ರಮಗಳು ಅವ್ಯಾಹತವಾಗಿ ನಡೆಯುತ್ತಿವೆ. ಅಂದಿನ ಬಾಲ್ಯಾವಸ್ಥೆಯಲ್ಲಿದ್ದ ಕೈಗಾರಿಕೀಕರಣದ ಕಾರ್ಮಿಕರಂತೆ ಇಂದಿನ ವಿಶ್ವವಿದ್ಯಾಲಯಗಳಲ್ಲಿನ ಆಡಳಿತ ಮಂಡಳಿಗಳ ಸದಸ್ಯರುಗಳಿಗೆ ಅಧ್ಯಾಪಕರು ಅಡಿಯಾಳುಗಳಾಗಿ ಜೀ–ಹುಜೂರ್‌ಗಳಾಗಿರಬೇಕಾಗಿದೆ. ಇದು ಶೋಷಣೆಯ ಪರಮಾವಧಿಯೆಂದೆನಿಸಿದೆ. ಸಮಕಾಲೀನ ಭಾರತದಲ್ಲಿರುವ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿಯೂ ಈ ವಿಚಿತ್ರ ಕಾಯಿಲೆಯ ಲಕ್ಷಣಗಳು ವ್ಯಾಪಕವಾಗಿ ಕಂಡುಬರುತ್ತಿವೆ.

ಸೂಚಿತ ಸನ್ನಿವೇಶಗಳನ್ನು ಅವಲೋಕಿಸಿಕೊಂಡಂತಹ ಸಂದರ್ಭದಲ್ಲಿ ಒಂದು ಪ್ರಮುಖವಾದ ಪ್ರಶ್ನೆ ವ್ಯಕ್ತವಾಗುತ್ತದೆ. ಅದು ಉನ್ನತ ಶಿಕ್ಷಣ ಸಂಸ್ಥೆಗಳಾದ ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಸ್ವರೂಪ ಹೇಗಿರಬೇಕು? ಎಂಬುದು. ಉನ್ನತ ಶಿಕ್ಷಣ ಕ್ಷೇತ್ರದಲ್ಲಿನ 'ಸುವರ್ಣ ಯುಗ' ಎಂಬ ಪರಿಕಲ್ಪನೆಯನ್ನು ಮೂಲೆಗೆಸೆದ ವಸ್ತುನಿಷ್ಠವಾದ ಉತ್ತರ ಕಂಡುಕೊಳ್ಳಲು ಪ್ರಯತ್ನಿಸಬೇಕು. ಗತಕಾಲದಿಂದ ಇಂದಿನವರೆಗೆ ಅನೇಕ ಏಳು–ಬೀಳುಗಳನ್ನು ಉನ್ನತ ಶಿಕ್ಷಣವು ಕಂಡಿದೆ. ಹಿಂದೆ ವಿಶ್ವವಿದ್ಯಾಲಯಗಳು ಅತಿ ಹೆಚ್ಚು ಶ್ರೇಣೀಕೃತವಾಗಿದ್ದು ಮಧ್ಯಮ ಹಾಗೂ ಕೆಳಸ್ತರಗಳಲ್ಲಿರುವವರಿಗೆ ನಿರ್ಣಯಗಳನ್ನು ಕೈಗೊಳ್ಳುವ ಯಾವುದೇ ಸ್ವಾತಂತ್ರ್ಯವಿರಲಿಲ್ಲ. ಆದರೆ ೬೦ ಮತ್ತು ೭೦ರ ದಶಕಗಳಲ್ಲಿ ವಿಶ್ವವಿದ್ಯಾಲಯಗಳು ತುಸು ಬದಲಾವಣೆಗಳಿಗೆ ಕಣ್ಣು ತೆರೆದು ಅಲ್ಲಿರುವ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಪಠ್ಯ ಹಾಗೂ ಪಠ್ಯೇತರ ಸಮಿತಿ/ಆಯೋಗಗಳಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ಹಂಚಿಕೊಳ್ಳುವಂತೆ ಉತ್ತೇಜಿಸಲಾಗುತ್ತಿತ್ತು. ಸಾಂಪ್ರದಾಯಕ ಉದಾರವಾದಿ

## ನಕಲಿ

ಕಾಪಿ ಪೇಸ್ಟ್
ಕೆಲಸ
ಚೆನ್ನಾಗಿ
ಕಲಿತಿದ್ದೇವೆ
ಅದಕ್ಕೇ
ಎಲ್ಲಾ
ವಾಟ್ಸಪ್ ಗ್ರೂಪ್‌ಗಳೂ
ಒಂದೇ
ಆಗಿವೆ !

**ರಾಮಪ್ರಸಾದ್. ಬಿ**
ಹೊಸಪೇಟೆ – ೫೮೩೨೦೧

ಚಿಂತಕರಲ್ಲೊಬ್ಬನಾದ ಜಾನ್ ಸ್ಟುವರ್ಟ್ ಮಿಲ್ (೧೮೦೬–೧೮೭೩) ಉದ್ಧರಿಸುವಂತೆ : 'ಎಲ್ಲಾ ಉದ್ಯೋಗ ಮಾಡುವ ಸ್ಥಳದಲ್ಲಿನ ನಿರ್ವಹಣೆ ಹಾಗೂ ಸ್ವಾತಂತ್ರ್ಯವನ್ನು ಅಲ್ಲಿನ ಕೆಲಸಗಾರರೇ ನಿಯಂತ್ರಿಸುವಂತಿರಬೇಕು.' ಅಮೆರಿಕಾದ ವಿಶ್ವವಿದ್ಯಾಲಯಗಳಲ್ಲಿ ಇದಕ್ಕೆ ತದ್ವಿರುದ್ಧವಾಗಿರುವುದನ್ನು ನಾವು ನೋಡಬಹುದು. ಆಡಳಿತ ಮಂಡಳಿ ಹಾಗೂ ಅಧ್ಯಾಪಕರಿಗೆ ಎಷ್ಟು ಸ್ವಾತಂತ್ರ್ಯವನ್ನು ನೀಡಿದ್ದಾರೆಂಬುದು ಇದರಿಂದ ವೇದ್ಯವಾಗುತ್ತದೆ. ಮೊದಲು ಯುರೋಪಿನಲ್ಲಿ ಊಳಿಗಮಾನ್ಯ ಪದ್ಧತಿ ಪ್ರಚಲಿತದ ಸಮಯದಲ್ಲಿ ರಾಜಪ್ರಭುತ್ವವನ್ನು ಧೀರೋದಾತ್ತವಾಗಿ ಹೊಗಳುತ್ತಿದ್ದ ಅಂದಿನ ಕೆಲ ಕಾರ್ಮಿಕರಿಗೆ ನೈಟ್‌ಹುಡ್ ಪದವಿಯನ್ನು ದಯಪಾಲಿಸಲಾಗುತ್ತಿತ್ತು. ಈ ನೈಟ್‌ಹುಡ್ ಪಡೆದ ಪ್ರಭೃತಿಗಳು ಕಾರ್ಮಿಕ ಶೋಷಣೆಯನ್ನು ಕಾರ್ಮಿಕ ಸಹಕಾರ ಸಂಘಗಳಿಂದ ಬಗೆಹರಿಸಿಕೊಳ್ಳುವುದು ಸೂಕ್ತವೆಂದು ಅಭಿಪ್ರಾಯಪಟ್ಟಿದ್ದರು. ಆದರೆ ಅವರಿಗೆ ಆ ಕಾರ್ಮಿಕ ಶೋಷಣೆಯನ್ನು ಪ್ರತಿಭಟಿಸುವುದರ ಮೂಲಕ ಹತ್ತಿಕ್ಕುವುದು ಅಪಥ್ಯವೆನಿಸಿರಬೇಕು. ಇಪ್ಪತ್ತನೆಯ ಶತಮಾನದ ಅಮೆರಿಕಾದ ಪ್ರಮುಖ ಸಾಮಾಜಿಕ ತತ್ವಜ್ಞಾನಿಯಾದ ಜಾನ್ ಡ್ಯುಯಿ (೧೮೫೯–೧೯೫೨)ಯು ಪ್ರಜಾಪ್ರಭುತ್ವವನ್ನು ಬಣ್ಣಿಸುತ್ತಾ, 'ಕೈಗಾರಿಕೆಗಳಲ್ಲಿ ಕಾರ್ಮಿಕರ ಸೃಜನಾತ್ಮಕ ಸ್ವಾತಂತ್ರ್ಯಕ್ಕೆ ಒತ್ತು ನೀಡು'ವಂತೆ ಹೇಳುತ್ತಾನೆ. ಶಾಲೆಗಳಲ್ಲಿ ಹಾಗೂ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರಿಗೂ ಹಾಗೂ ವಿದ್ಯಾರ್ಥಿಗಳಿಗೂ ಇಂತಹದೊಂದು ಮುಕ್ತವಾದ ಸ್ವಾತಂತ್ರ್ಯ ಪರಿಸರವನ್ನು ನಿರ್ಮಿಸುವ ಅವಶ್ಯಕತೆಯಿದೆ ಎಂದು ಅಭಿಪ್ರಾಯಪಡುತ್ತಾನೆ. ವಿದ್ಯಾರ್ಥಿ ಮತ್ತು ಅಧ್ಯಾಪಕರುಗಳ ಅಭಿವ್ಯಕ್ತಿ ಸ್ವಾತಂತ್ರ್ಯದ ಮೇಲೆ ಬಲು ನಯವಾದ ನಿರ್ಬಂಧಗಳನ್ನು ಹೇರಲಾಗುತ್ತದೆ. ಚಾಮ್‌ಸ್ಕಿಯೇ ಕೆಲಸ ಮಾಡುವ ವಿವಿಧ ವಿಭಾಗಗಳಲ್ಲಿ ವಿದ್ಯಾರ್ಥಿಗಳ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಳೆದ ನಲವತ್ತು ವರ್ಷಗಳಿಂದ ಹಂತ ಹಂತವಾಗಿ ಹರಣಮಾಡುತ್ತಿರುವುದು ಕಂಡುಬಂದಿದೆ. ಇದರ ವಿರುದ್ಧ ಪ್ರತಿಭಟಿಸಿ ಅಲ್ಪಸ್ವಲ್ಪ ಯಶಸ್ಸು ಕಂಡಿರುವುದುಂಟು. ಈ ಹಂತದಲ್ಲಿ ಇನ್ನೊಂದು ಮುಖ್ಯವಾದ ಪ್ರಶ್ನೆ ಉದ್ಭವವಾಗುತ್ತದೆ. ಅದೇಂದರೆ, ವಿಶ್ವವಿದ್ಯಾಲಯಗಳಲ್ಲಿ ಈ ತೆರನಾದ ರಾಜಕೀಯ ಹಾಗೂ ವ್ಯಾಪಾರದ ತಂತ್ರಗಳನ್ನು ನಿಯಂತ್ರಿಸಲು ಸಾಧ್ಯವಿಲ್ಲವೆ ? ಇದೆ, ಅಲ್ಲಿ ಕೆಲಸ ಮಾಡುವವರ ಮಧ್ಯೆ ಅಧಿಕಾರವನ್ನು ಸಮಾನವಾಗಿ ಹಂಚುವುದರೊಂದಿಗೆ ಅದರ ನಿಯಂತ್ರಣದ ಪಾರುಪತ್ಯವನ್ನು ಅವರಿಗೇ ವಹಿಸುವುದು. ಉದಾಹರಣೆಗೆ, ವಿಭಾಗಗಳಲ್ಲಿನ ಅಧ್ಯಾಪಕರು ತಮ್ಮ ಬೋಧನೆಯ ಕಾಲಾವಧಿ ಮತ್ತು ಪಠ್ಯ ವಿಷಯಗಳನ್ನು ವಿದ್ಯಾರ್ಥಿಗಳೊಂದಿಗೆ ಸಮಾಲೋಚಿಸಿ ನಿರ್ಧರಿಸುವುದು. ಇದೊಂದು ಉತ್ತಮವಾದ ಬೆಳವಣಿಗೆಯಾಗಿದ್ದು, ಜೊತೆಗೆ ಆಡಳಿತಾತ್ಮಕ ಕೆಲಸಗಳಿಗೆ ತಮ್ಮಲ್ಲಿಯೇ ಒಬ್ಬ ಪ್ರತಿನಿಧಿಯನ್ನು ಆಯ್ಕೆ ಮಾಡಿ ಕಳಿಸುವ ವ್ಯವಸ್ಥೆಯು ಅರ್ಥಪೂರ್ಣವಾಗಿರುತ್ತದೆ. ಜಾನ್ ಹಾಫ್‌ಕಿನ್ಸ್, ಕಾರ್‌ನೆಲ್ ವಿಶ್ವವಿದ್ಯಾಲಯಗಳಲ್ಲಿ ಇಂತಹ ಪ್ರಯೋಗಗಳು ನಡೆದಿವೆ. ಈ ಎಲ್ಲಾ ಪ್ರಕ್ರಿಯೆಗಳನ್ನು ಹತ್ತಿರದಿಂದ ವಿಶ್ಲೇಷಣೆಗೆ ಒಳಪಡಿಸಿರುವ ಬೆಂಜಮಿನ್ ಗಿನ್ಸ್‌ಬರ್ಗ್ 'ದಿ ಫ಼ಾಲ್ ಆಫ಼್ ದಿ ಫ಼್ಯಾಕಲ್ಟಿ' ಎಂಬ ಪುಸ್ತಕದಲ್ಲಿ ದಾಖಲಿಸುತ್ತಾ ಅಮೆರಿಕದ ವಿಶ್ವವಿದ್ಯಾಲಯಗಳು ಮೇಲೆ ಹೇಳಿದ ಉತ್ತಮ ಮಾದರಿಯನ್ನು ತಿರಸ್ಕರಿಸುತ್ತಾ ಸಾಗುತ್ತಿವೆ ಎಂದು ಅಭಿಪ್ರಾಯಪಡುತ್ತಾನೆ.

ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರೇ ನಿರ್ಧಾರಗಳನ್ನು ಕೈಗೊಳ್ಳಲು ಪ್ರಮುಖವಾಗಿ ಅವಶ್ಯಕವಾಗಿರುವ ಪರಿಕರವೆಂದರೆ 'ನಮ್ಯತೆ.' ಕೈಗಾರಿಕೆಗಳಲ್ಲಿ ಈ ಒಂದು ಪರಿಕಲ್ಪನೆಯು ಅವಶ್ಯಕತೆಗಿಂತ ಅಧಿಕವಾಗಿಯೇ ಕೇಳಿಬರುತ್ತದೆ. ಇದರರ್ಥ ಮಾಲೀಕ ತನ್ನ ಲಾಭ ಹೆಚ್ಚಿಸಿಕೊಳ್ಳಲು ಮತ್ತು ಉತ್ಪಾದನಾ ವೆಚ್ಚವನ್ನು ಕಡಿತಗೊಳಿಸಲು ಕಡಿಮೆ ಕೂಲಿಗೆ ಕಾರ್ಮಿಕರನ್ನು ನೇಮಿಸಿಕೊಳ್ಳುವುದು, ನಂತರ ಅವರನ್ನು ನಿರ್ದಾಕ್ಷಿಣ್ಯವಾಗಿ ಹೊರದಬ್ಬುವುದು. ಇದೇ ನಿಯಮ ವಿಶ್ವವಿದ್ಯಾಲಯಗಳಲ್ಲಿರುವ ಅಧ್ಯಾಪಕರಿಗೂ ಅನ್ವಯಿಸುತ್ತದೆ. ಇದು ಘೋರವಲ್ಲದೆ ಇನ್ನೇನು ! ಉದಾಹರಣೆಗೆ, ಚಾಮ್‌ಸ್ಕಿಯೇ ಹೇಳುವಂತೆ, ಅವನ ಮಗಳೇ ಒಂದು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕಿಯಾಗಿದ್ದು ಪಠ್ಯವಿಷಯಕ್ಕೆ ಸಂಬಂಧಪಟ್ಟಂತೆ ವಿದ್ಯಾರ್ಥಿಗಳು ಪ್ರವೇಶ ಪಡೆಯಲ್ಲಿಲ್ಲವೆಂದು ಆಕೆಯನ್ನು ಇನ್ನಾವುದೊ ವಿಭಾಗದಲ್ಲಿ ಕೆಲಸಕ್ಕೆ ಬಾರದ ಕೆಲಸಕ್ಕೆ ನಿಯೋಜಿಸಿದ್ದಾರೆ. ಜೊತೆಗೆ ಪರಿಸ್ಥಿತಿಯು ಹೀಗೇ ಮುಂದುವರೆದಲ್ಲಿ ಅವಳು ಕೆಲಸ ಕಳೆದುಕೊಳ್ಳುವ ಪರಿಸ್ಥಿತಿಯು ಎದುರಾಗುವುದೆಂದು ಎಚ್ಚರಿಸಲಾಗಿದೆ. ಇದು ವ್ಯಾಪಾರೀಕರಣಗೊಂಡ ಉನ್ನತ ಶಿಕ್ಷಣ ಕ್ಷೇತ್ರದ ಒಳಮರ್ಮ. ಇದು ಖಾಸಗಿ ಅಥವಾ ಬಂಡವಾಳಶಾಹಿ ಸರ್ಕಾರದ ಧೋರಣೆಯಾಗಿದ್ದು ಅದಕ್ಕೆ 'ಸುಧಾರಣೆ'ಯೆಂಬ ಹಣೆಪಟ್ಟಿಯನ್ನು ಕಟ್ಟುತ್ತಾರೆ. ಬಂಡವಾಳಶಾಹಿ ಮುಕ್ತ ಮಾರುಕಟ್ಟೆಯಲ್ಲಾಗುವ ತ್ವರಿತ ಬದಲಾವಣೆಗಳಿಗನ್ವಯ ವಿದ್ಯಾಸಂಸ್ಥೆಗಳಲ್ಲಿನ ಪಠ್ಯಕ್ರಮ, ಬೋಧನೆ, ಸಂಶೋಧನೆಯನ್ನು ಸಿದ್ಧಪಡಿಸಲು ಎಲ್ಲರೂ ಕಾರ್ಯೋನ್ಮುಖರಾಗುತ್ತಾರೆ. ಖಾಸಗಿ ವಲಯದ ಕೈಗಾರಿಕೆಯಂತಿರುವ ವಿಶ್ವವಿದ್ಯಾಲಯಗಳಲ್ಲಿ ಶ್ರಮದೊಂದಿಗೆ ತೊಡಗಿಸಿಕೊಂಡಿರುವ ವರ್ಗವು



ಸದಾಕಾಲ ಅಭದ್ರತೆಯಿಂದ ನಲುಗುತ್ತಾ ತಮ್ಮ ಹಕ್ಕುಗಳಿಗೆ ಪ್ರತಿಭಟಿಸಲಾಗದೆ ತಾವು ತಿನ್ನುವ ತುಂಡು ರೊಟ್ಟಿಗಾಗಿ ಪರದಾಡುವ ಸ್ಥಿತಿಗೆ ತಳಲ್ಪಟ್ಟಿದ್ದಾರೆ.

ಪ್ರಸ್ತುತ ಭಾರತದ ಉನ್ನತ ಶಿಕ್ಷಣದ ಅಧ್ಯಾಪಕರು ಎಂ.ಫಿಲ್, ಪಿಎಚ್.ಡಿ. ಪದವೀಧರರಾದ ಅರೆಕಾಲಿಕ / ಗುತ್ತಿಗೆಯಾಧಾರಿತ ಅಧ್ಯಾಪಕರು ಬೆಳಗಿನ ವೇಳೆ ಕಾಲೇಜಿನಲ್ಲಿ ತತ್ವಪದ ಪಾಠ ಮಾಡಿ ರಾತ್ರಿ ಬಾರ್‌ನಲ್ಲಿ ಕೆಲಸ ಮಾಡುವ ಸ್ಥಿತಿಯನ್ನು ತಲುಪಿರುವುದನ್ನು ನಮ್ಮ ಕನ್ನಡ ದೈನಿಕವೊಂದು ವರದಿ ಮಾಡಿದೆ. ಈ ಕ್ರೂರವಾದ ಅವ್ಯವಸ್ಥೆಯು ಇನ್ನೂ ಮುಂದುವರಿಯುತ್ತಿರುವುದು ಖಂಡನೀಯ. ಆದರೆ ಈ ಎಲ್ಲಾ ದಮನಕಾರಿ ಚಟುವಟಿಕೆಗಳಿಗೆ ಪರಿಹಾರವಿದೆಯೇ ? ಇದೆ ಎಂದಾದರೆ, ಅಲ್ಲಿರುವ ಮುಖ್ಯ ಪ್ರಶ್ನೆ: ಶಿಕ್ಷಣದ ಮೂಲ ಉದ್ದೇಶವಾದರೂ ಏನು ? ಇದಕ್ಕೆ ಶಿಕ್ಷಣದ ಇತಿಹಾಸವನ್ನು ಒಳಹೊಕ್ಕು ನೋಡಿದಲ್ಲಿ ಅದು ನಮ್ಮನ್ನು ಎಚ್ಚರಿಸುತ್ತದೆ. ಹದಿನೆಂಟನೆ ಶತಮಾನದ ಕಾಲಘಟ್ಟದಲ್ಲಿ ಪ್ರಾರಂಭವಾದ 'ಜ್ಞಾನೋದಯ' ಚಳವಳಿಯಲ್ಲಿ ಇದಕ್ಕೆ ಸೂಕ್ತವಾದ ಉತ್ತರವನ್ನು ಕಾಣಬಹುದು. ಅಲ್ಲಿ ಎರಡು ರೀತಿಯ ಮಾದರಿಗಳಿದ್ದು ಅವುಗಳಲ್ಲಿ ಮೊದಲನೆಯದು ಜ್ಞಾನಾರ್ಜನೆಯ ಕಲ್ಪನೆಯ ಮಾದರಿ ಕೇವಲ ಜ್ಞಾನವೇ ಶಿಕ್ಷಣದ ಪರಮೋಚ್ಚ ಗುರಿ. ಆದರೆ ಇಂದು ಅದೇ ಮಾದರಿಯು ಹೆಚ್ಚೆಂದರೆ 'ಅಧ್ಯಾಪನದಿಂದ ಪರೀಕ್ಷೆಯವರೆಗೆ' ಎಂಬಂತಹ ಮಾದರಿಯಾಗಿ ಪರಿವರ್ತನೆಯಾಗಿದೆ. ನಾವೆಲ್ಲರೂ ಇದೇ ಮಾದರಿಯಲ್ಲಿ ಬೆಳೆದುಬಂದವರಾಗಿದ್ದೇವೆ. ಪರೀಕ್ಷೆಗೆಂದು ಓದುವುದು, ಪರೀಕ್ಷೆ ಬರೆದು ಅಂಕಗಳಿಸಿದ ನಂತರ ಅದನ್ನು ಮರೆತುಬಿಡುವುದು ಸಾಮಾನ್ಯವಾದ ಸಂಗತಿಯಾಗಿದ್ದು ಈ ಪ್ರಕ್ರಿಯೆಯು ನಿರಂತರವಾಗಿದೆ. ಎರಡನೆಯದಾಗಿ ವಿದ್ಯಾರ್ಥಿ ಕೇಂದ್ರಿತ ಶಿಕ್ಷಣದ ಮಾದರಿ: ಇಪ್ಪತ್ತೊಂದನೆ ಶತಮಾನದ ಮೊದಲು ಪ್ರವರ್ಧಮಾನಕ್ಕೆ ಬಂದ ಸುಧಾರಿತ ಪದ್ಧತಿ. ಒಬ್ಬ ವಿದ್ಯಾರ್ಥಿಯು ತಾನು ಏನು ಕಲಿಯಬೇಕೆಂಬುದರ ನಿರ್ಧಾರವನ್ನು ಕೈಗೊಳ್ಳುವ ಹಾಗೂ ಅದರಂತೆ ಪ್ರಶ್ನಿಸುವ, ವಿಶ್ಲೇಷಿಸುವ, ಅರ್ಥಮಾಡಿಕೊಳ್ಳುವ ಹಾಗೂ ವಿವಿಧ ವಿಧಾನಗಳಿಂದ ಅನ್ವಯಿಸಿಕೊಳ್ಳುವ ಸ್ವಾತಂತ್ರ್ಯ ಆ ವಿದ್ಯಾರ್ಥಿಗಿರಬೇಕೆಂಬುದು. ಆದರೆ, ಎರಡನೆಯ ಮಾದರಿಗಿಂತ ಮೊದಲ ಮಾದರಿಯನ್ನೇ ಹೆಚ್ಚು ಬಳಸುವ ಇಂದಿನ ವಿಶ್ವವಿದ್ಯಾಲಯಗಳು ಅಳಿಯುತ್ತಿರುವುದಂತೂ ಖಂಡಿತ. ಯಾರೋ ಒಬ್ಬಾತ ಭೌತಶಾಸ್ತ್ರಜ್ಞನಿಗೆ 'ನೀವು ಈ ಸೆಮೆಸ್ಟರ್‌ನಲ್ಲಿ ಏನನ್ನು ಕಲಿಸುತ್ತೀರಿ' ಎಂದು ಪ್ರಶ್ನಿಸಿದ್ದಕ್ಕೆ ಆತ 'ಸ್ವಾಮಿ ಏನನ್ನು ಕಲಿಸುತ್ತೀರೆಂದು ಕೇಳುವ ಬದಲು, ಏನನ್ನು ಆವಿಷ್ಕರಿಸುತ್ತೀರೆಂದು ಕೇಳಿ' ಎಂದು ಮರುಪ್ರಶ್ನಿಸಿದನಂತೆ. ಕಲಿಯುವ, ಕಲಿತದ್ದನ್ನು ಸೃಜನಾತ್ಮಕವಾಗಿ ಚಿಂತಿಸುವ, ನಾವೀನ್ಯತೆಯೊಂದಿಗೆ ಕಾರ್ಯರೂಪಕ್ಕೆ ತರುವ ನಮ್ಯತೆಯ ಮೂಲಕ ಅದರ ಹೊಳಹುಗಳನ್ನು ಅಂತರ್ಗತಗೊಳಿಸುವ ಪ್ರಯತ್ನವೇ ಶಿಕ್ಷಣದ ಗುರಿಯಲ್ಲವೇ! ಪ್ರಾಥಮಿಕ ಕಲಿಕಾ ಹಂತದಿಂದ ಸ್ನಾತಕ ಸಂಶೋಧನೆಯವರೆಗೆ ಇಂತಹ ಅಂಶಗಳ ಬಗ್ಗೆ ಗಮನ ಹರಿಸುವುದು ಹೆಚ್ಚು ವೈಜ್ಞಾನಿಕವೆನಿಸುತ್ತದೆ.

ಮುಂದಿನ ಪೀಳಿಗೆಗೆ ಇಂದಿನ ಅಧ್ಯಾಪಕರನ್ನು ಈ ಹಾದಿಯಲ್ಲಿ ಸಿದ್ಧಪಡಿಸಿ ಅವರು ಬೋಧನಾವೃತ್ತಿಯನ್ನು ಪ್ರೀತಿಸುವಂತೆ ಮತ್ತದಕ್ಕೆ ಸೂಕ್ತ ಪರಿಸರವನ್ನು ನಿರ್ಮಿಸುವುದು ಹಿಂದೆಂದಿಗಿಂತಲೂ ಈಗ ಅವಶ್ಯಕವಾಗಿದೆ. ಅಧ್ಯಾಪಕ ಮತ್ತು ವಿದ್ಯಾರ್ಥಿ ಸಮೂಹವು ತೃಪ್ತಿಕರವಾಗಿ ಆಸಕ್ತಿಯಿಂದ ಶಿಕ್ಷಣದಲ್ಲಿ ತೊಡಗಲು ಅನುಕೂಲವಾಗುತ್ತದೆ.

ಬಾಲ್ಯದಲ್ಲಿ ಒಂದು ಮಗುವು ಅತ್ಯಂತ ಸೃಜನಾತ್ಮಕವಾಗಿ, ಆಸಕ್ತಿಯಿಂದ ಎಲ್ಲವನ್ನೂ ಅರ್ಥಮಾಡಿಕೊಳ್ಳುವ ಕಾತರವನ್ನು ವ್ಯಕ್ತಪಡಿಸಿದಂತೆ ಅದಕ್ಕೆ ಕಲಿಕೆಯ ಪರಿಸರವನ್ನೂ ನಿರ್ಮಾಣ ಮಾಡಬೇಕಾಗುತ್ತದೆ. ಆ ಹಂತದಲ್ಲಿ ಕಲಿಕೆಯ ಪ್ರಕ್ರಿಯೆಯು ಯಾವುದೇ ಅಡೆತಡೆಗಳಿಲ್ಲದೆ ಸುಗಮ ಸಾಗಬಲ್ಲದು.

ಪ್ರೌಢಶಾಲೆಯಲ್ಲಿರುವ ಒಬ್ಬ ಅಧ್ಯಾಪಕ ವಿದ್ಯಾರ್ಥಿಗಳಿಗೆ ಸಾಮಾನ್ಯ ಪ್ರಶ್ನೆಗಳನ್ನು ಕೇಳುವುದರ ಮೂಲಕ ಅವರ ಆಸಕ್ತಿಯನ್ನು ಕೆರಳಿಸಿ ಆಲೋಚನೆಗೆ ಒಡ್ಡಬಹುದು. ಉದಾಹರಣೆಗೆ, ಒಂದು ಸೊಳ್ಳೆಯು ಹೇಗೆ ಮಳೆಯಲ್ಲಿಯೂ ಹಾರಬಲ್ಲದು ? ಮಳೆ ಹನಿಗಳು ಬೀಳುವ ರಭಸಕ್ಕೆ ಅದು ನೆಲಕಚ್ಚುವುದಿಲ್ಲವೇಕೆ ? ಇತ್ಯಾದಿ. ಇಂತಹ ಪ್ರಶ್ನೆಗಳು ಗಣಿತಶಾಸ್ತ್ರ, ಭೌತಶಾಸ್ತ್ರ, ಪವನಶಾಸ್ತ್ರ ಇತ್ಯಾದಿ ಜ್ಞಾನದ ವಿವಿಧ ಶಾಖೆಗಳಿಂದ ಉತ್ತರಗಳನ್ನು ಕಂಡುಕೊಳ್ಳಲು ವಿದ್ಯಾರ್ಥಿಗೆ ಪ್ರಚೋದಿಸುತ್ತವೆ. ಭೌತಶಾಸ್ತ್ರಜ್ಞನಾಗಲಿ ಅಥವಾ ಮರಗೆಲಸದವನಾಗಲಿ ಮಾಡುವ ಕೆಲಸವನ್ನು ಸಂಪೂರ್ಣವಾಗಿ ಪ್ರೀತಿಸುತ್ತ ಸೃಜನಾತ್ಮಕವಾಗಿ ತೊಡಗಿಕೊಂಡಲ್ಲಿ ಅದರಿಂದ ಹೊರಹೊಮ್ಮುವ ಫಲಿತಾಂಶಗಳು ವಿಶಿಷ್ಟವಾಗಿರುತ್ತವೆ. ಇದು ವಿಶ್ವವಿದ್ಯಾಲಯಗಳ ನಾನಾ ವಿಭಾಗಗಳಲ್ಲಿ ಅಗತ್ಯವಾಗಿ ಆಗಬೇಕಾಗಿರುವ ಕೆಲಸ. ಇದನ್ನು ಉತ್ತೇಜಿಸದೆ ಅನ್ಯಮಾರ್ಗವಿಲ್ಲ. ಆದರೆ ದುರದೃಷ್ಟವಶಾತ್ ಉನ್ನತ ಶಿಕ್ಷಣದ ಜ್ಞಾನ ವಿಭಾಗಗಳು ಇದರ ತದ್ವಿರುದ್ಧವಾಗಿ ಚಲಿಸುತ್ತಾ ಹೋಗಿವೆ. ಈ ಸಾವಿನ ಸಂಕೋಲೆಯಿಂದ ಮುಕ್ತಿ ಪಡೆಯಲು ವಿಶ್ವವಿದ್ಯಾಲಯಗಳಲ್ಲಿರುವ ಅಧ್ಯಾಪಕರಿಗೆ ಸೇವಾ ಭದ್ರತೆ, ನ್ಯಾಯಯುತ ವೇತನ, ಭತ್ಯೆ, ಮುಂಬಡ್ತಿ, ಸ್ವಾತಂತ್ರ್ಯ, ಸಮಾನತೆ, ವಿದ್ಯಾರ್ಥಿ ಸಮೂಹದ ವಿಶ್ವಾಸ ಗಳಿಸುವ ಪರಿಸರ ಅತ್ಯಗತ್ಯ. ಅಧ್ಯಾಪಕರ ಹಾಗೂ ವಿದ್ಯಾರ್ಥಿಗಳ ಸಂಘಟನೆಗಳನ್ನು ಕೆಟ್ಟ ರಾಜಕೀಯ, ಪುಂಡಾಟಿಕೆ ಮಾಡುವ ಕೇಂದ್ರಗಳೆಂದು ನಕಾರಾತ್ಮಕವಾಗಿ ಬಣ್ಣಿಸುವ ಮೂಲಕ ಹೀಗಳೆಯುವ ಬದಲು ಅವುಗಳನ್ನು ಶಿಕ್ಷಣ ಸಂಸ್ಥೆ ಆಡಳಿತ ಮಂಡಳಿಗಳ ಜೊತೆಗೆ ಸೌಹಾರ್ದಯುತ ಹಾಗೂ ಉತ್ತಮ ಒಡಂಬಡಿಕೆಗಳಿಗಿರುವ ಜೀವಂತ ಘಟಕಗಳೆಂದು ಪರಿಗಣಿಸಬೇಕು. ಸಂಘಟನೆಯ ಎಲ್ಲಾ ಸದಸ್ಯರು ಶ್ರಮವಹಿಸಿ ಆಡಳಿತಗಾರರಿಗೆ ಹೆದರದೆ ನಿರಂತರವಾಗಿ ಅದರ ಉದ್ದೇಶಗಳನ್ನು ಬಲಗೊಳಿಸುವುದು ಅಗತ್ಯವಾದ ಕರ್ತವ್ಯ. ಈ ನಿಟ್ಟಿನಲ್ಲಿ ಅಧ್ಯಾಪಕರ ಸಂಘಟನೆಗಳು ಕಾರ್ಯಪ್ರವೃತ್ತವಾಗಬೇಕಿದೆ. ಇದರಿಂದಾದರೂ ಅಳಿವಿನಂಚಿನಲ್ಲಿರುವ ವಿಶ್ವವಿದ್ಯಾಲಯಗಳನ್ನು ಬದುಕಿಸುವ ಪ್ರಯತ್ನ ಮಾಡಬಹುದಾಗಿದೆ.

ಅಮೆರಿಕಾ ದೇಶವು ಪ್ರಪಂಚದ ಅಗ್ರಮಾನ್ಯ ಬಂಡವಾಳಶಾಹಿ ದೇಶವಾಗಿದ್ದು, ಅದು ಅತಿ ವೇಗದ ಪ್ರಗತಿಯ ಹಾದಿಯಲ್ಲಿ ಸಾಗುತ್ತಿದೆ. ಗುರಿಯನ್ನು ಮುಟ್ಟುವುದೊಂದೇ ಮುಖ್ಯವೆಂದು ಪರಿಗಣಿಸುತ್ತದೆ. ಆದರೆ ಆ ಗುರಿಯನ್ನು ತಲುಪುವ ಹಾದಿಯು ಯಾವ ತೆರನಾದದ್ದು ಎಂಬುದರ ಕುರಿತು ಆ ದೇಶವು ಪ್ರಗತಿಯನ್ನು ಸಾಧಿಸಲು ಇನ್ನೂ ಸನ್ನದ್ಧವಾಗದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

ಅಲ್ಲಿಯ ಎಲ್ಲಾ ಕ್ಷೇತ್ರಗಳು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆಗುತ್ತಿರುವ ಬದಲಾವಣೆಗಳನ್ನು 'ಸುಧಾರಣೆ'ಗಳೆಂಬ ಹೆಸರಿನಲ್ಲಿ ಕೂಪಕ್ಕೆ ತಳ್ಳುವುದು, ಅದರಿಂದ ಎಲ್ಲವನ್ನೂ ಅಸ್ಥಿರಗೊಳಿಸಿ 'ಪ್ರಗತಿ'ಯೆಂದು ಭ್ರಮಿಸುವುದು, ಇದು ಇಂದಿನ ಅಮೆರಿಕಾದ ಸ್ಥಿತಿ. ಸಾಮಾನ್ಯವಾಗಿ ನಮ್ಮ ಭಾರತದ ದಾರ್ಶನಿಕರು ಹೇಳುವಂತೆ 'ಎಲ್ಲವೂ ಕಾಲಚಕ್ರಕ್ಕೊಳಪಟ್ಟಿದೆ' ಎಂದು ಹೇಳಿ ಅಪ್ರಸ್ತುತರಾಗುವ ಹಂತದಲ್ಲಿ ಜರ್ಮನಿಯ ತತ್ವಶಾಸ್ತ್ರಜ್ಞನಾದ ಹೆಗಲ್ (೧೭೭೦–೧೮೩೧) ಹೆಚ್ಚು ಪ್ರಸ್ತುತವೆನಿಸುತ್ತಾನೆ. ಆತ ಹೀಗೆ ಹೇಳುತ್ತಾನೆ: 'ವ್ಯವಸ್ಥೆ ಇರುವುದು ಹೀಗೆ, ಆದರೆ ಅದನ್ನು ಬದಲಿಸುವುದೊಂದೇ ಪರಿಹಾರ'. ಸಮಕಾಲೀನ ಭಾರತ ಶಿಕ್ಷಣ ಕ್ಷೇತ್ರದಲ್ಲಾಗುತ್ತಿರುವ ಪಲ್ಲಟಗಳನ್ನು ನಾವಿಂದು ಯಾವುದೇ ಭಾವನಾತ್ಮಕ ಅಥವಾ ನಿರಾಸೆಯ ನಿಟ್ಟುಸಿರುಬಿಡದೆ ವೈಚಾರಿಕ ಮತ್ತು ವಸ್ತುಸ್ಥಿತಿಯನ್ನಾಧರಿಸಿ ವಿಶ್ಲೇಷಣೆಗೆ ಒಳಪಡಿಸಿದಲ್ಲಿ ನಮ್ಮಲ್ಲಿರುವ ಪ್ರಭುತ್ವದ ಹಾಗೂ ಖಾಸಗಿ ಒಡೆತನದಲ್ಲಿರುವ ಶಿಕ್ಷಣ ಸಂಸ್ಥೆಗಳ ಧೋರಣೆ ಮತ್ತವರ ನೀತಿಗಳು ಜ್ಞಾನ ಪಡೆಯುವ ಸಾಮಾಜಿಕ ಸಂಸ್ಥೆಗಳನ್ನು ಹಂತ ಹಂತವಾಗಿ ಹಾಳುಗೆಡಹುವ ಹಾಗೂ ಹಣ ಮಾಡುವ ಮಾಲುಗಳನ್ನಾಗಿ ಪರಿವರ್ತಿಸುತ್ತಿರುವ ಸಂದರ್ಭದಲ್ಲಿ ಅಮೆರಿಕಾದ ವಿಶ್ವವಿದ್ಯಾಲಯಗಳು ಅಳಿದಿರುವ ಹಾದಿಯನ್ನು ಚಾಮ್‌ಸ್ಕಿಯು ವಿವರಿಸಿರುವ ಅಂಶಗಳು ನಮ್ಮನ್ನು ಎಡೆಬಿಡದೆ ಎಚ್ಚರಿಸುತ್ತವೆ. ಅಲ್ಲಿನ ವಿಶ್ವವಿದ್ಯಾಲಯಗಳು ಅಳಿಯದಂತೆ ಉನ್ನತ ವಿದ್ಯಾಸಂಸ್ಥೆಗಳಾದ ಕಾಲೇಜು ಹಾಗೂ ವಿಶ್ವವಿದ್ಯಾಲಯಗಳನ್ನು ಉಳಿಸುವ ಪ್ರಯತ್ನವನ್ನು ಮಾಡದಿದ್ದಲ್ಲಿ ಮುಂದಿನ ಪೀಳಿಗೆಯು ಇಂದಿನ ಪ್ರಸಂಗಗಳನ್ನು ಇತಿಹಾಸದ ಪುಟಗಳನ್ನು ತಿರುವಿ ನೋಡುವ ಸಂದರ್ಭದಲ್ಲಿ ಹೆಚ್ಚು ಕರಾಳವಾದ ಸಂಗತಿಗಳನ್ನು ಪ್ರತಿಬಿಂಬಿಸುವಲ್ಲಿ ಯಾವುದೇ ಸಂಶಯವಿರದು. ನಮ್ಮ ಪರಿಸ್ಥಿತಿ ಅದಕ್ಕಿಂತಲೂ ಹೆಚ್ಚು ಕರಾಳವಾದ್ದು ಎನಿಸುತ್ತಿದೆ.

(ನೋಮ್ ಚಾಮ್‌ಸ್ಕಿಯ ಒಂದು ಲೇಖನವನ್ನಾಧರಿಸಿ ಈ ಪ್ರಬಂಧವನ್ನು ಬರೆಯಲಾಗಿದೆ.)

**ಬಿ. ಎನ್. ವೇಣುಗೋಪಾಲ್**
ನಂ. ೪೬೬/ಎ, ೮ನೇ ಮುಖ್ಯರಸ್ತೆ, ತ. ರಾ. ಸುಬ್ಬರಾವ್ ರಸ್ತೆ
ಹನುಮಂತನಗರ, ಬೆಂಗಳೂರು – ೫೬೦ ೦೧೯



# ಅಂಕೆ–ಸಂಖ್ಯೆಗಳ ಹೊಂದಾಣಿಕೆ

**ಸಾ**ಮಾನ್ಯವಾಗಿ ಕ್ಯಾಲೆಂಡರ್‌ಗಳಲ್ಲಿ ನಮೂದಿಸುವ ೧, ೨ ತಾರೀಖುಗಳು, ಚಾಂದ್ರಮಾನ ಮಾಸಕ್ಕಾಗಲೀ, ಸೌರಮಾನ ಮಾಸಕ್ಕಾಗಲೀ ಹೊಂದುವುದಿಲ್ಲ. ಸೌರಮಾಸಗಳ ಗಣನೆ ಸಾಮಾನ್ಯವಾಗಿ ೧೪, ೧೫, ೧೬ ಈ ತಾರೀಖುಗಳಿಗೆ ಆರಂಭವಾಗುವುದರಿಂದ (ಮೇಷ ಸಂಕ್ರಮಣ, ತುಲಾ ಸಂಕ್ರಮಣ, ಮಕರ ಸಂಕ್ರಮಣ – ಈ ಹೆಸರುಗಳನ್ನು ನೆನಪಿಸಿಕೊಳ್ಳಿ ) ಅಲ್ಲಿ ಹೊಂದಾಣಿಕೆ ಸಾಧ್ಯವೇ ಇಲ್ಲ. ಆದರೆ ಚಾಂದ್ರಮಾನದ ೧, ೨ ಇವು ಅಮಾವಾಸ್ಯೆಯ ಮರುದಿನದಂದು ಆರಂಭವಾಗುವುದರಿಂದ ಆಗೊಮ್ಮೆ ಈಗೊಮ್ಮೆ ಈ ಸಂಖ್ಯೆಗಳು ತಾಳೆಯಾಗುತ್ತವೆ. ಸೆಪ್ಟೆಂಬರ್ ೧ರಂದೇ ಅಮಾವಾಸ್ಯೆ. ೨ರಂದು ಪಾಡ್ಯ. ಹೀಗೆ ಎಣಿಸುತ್ತಾ ಹೋದರೆ ೧೫ನೆಯ ದಿನಕ್ಕೆ ಅಂದರೆ ೧೬ನೇ ತಾರೀಖಿನಂದು ಹುಣ್ಣಿಮೆ ಆಗಬೇಕು. ಹುಣ್ಣಿಮೆ ಎಂಬ ಘಟನೆ ೧೭ರ ಬೆಳಗಿನ ಜಾವ ೦೦:೦೫ಕ್ಕೆ ನಡೆಯುತ್ತದೆ. ಆದ್ದರಿಂದ ಮುಂದಿನ ಅಮಾವಾಸ್ಯೆ ಅಕ್ಟೋಬರ್ ೧ಕ್ಕೆ ನಿಗದಿಯಾಗುತ್ತದೆ. ಹುಣ್ಣಿಮೆ ತಡವಾಯಿತು ಎನ್ನಿಸಿದರೂ ಅಮಾವಾಸ್ಯೆ ೩೦ ದಿನಗಳ ನಂತರವೇ ನಡೆಯಿತು – ಇದು ಹೇಗೆ? ಇದಕ್ಕೆ ಉತ್ತರವೂ ಆಕಾಶದಲ್ಲಿಯೇ ಇದೆ. ದೀರ್ಘವೃತ್ತ ಆಕಾರದ ಕಕ್ಷೆಯ ಕಾರಣ ಅದರ ವೇಗ ಬದಲಾಗುತ್ತಲೇ ಇರುತ್ತದೆ. ೬ರಂದು ವೇಗ ಕಡಿಮೆ. ಏಕೆಂದರೆ ಅದು ಅಪಭೂ ಬಿಂದುವಿನಲ್ಲಿ, ಅಂದರೆ ಭೂಮಿಯಿಂದ ಗರಿಷ್ಠ ದೂರದಲ್ಲಿರುತ್ತದೆ. ೧೮ರಂದು ಪುರಭೂ ಬಿಂದುವಿನಲ್ಲಿ ಇರುತ್ತದೆ. ಆಗ ಅದರ ವೇಗ ಗರಿಷ್ಠ; ದೂರ ಕನಿಷ್ಠ. ಹೀಗೆ ಅಮಾವಾಸ್ಯೆಯಿಂದ ಅಮಾವಾಸ್ಯೆಯವರೆಗಿನ ಅವಧಿ ೩೦ ಪೂರ್ಣ ದಿನಗಳಾಗುವುದಿಲ್ಲ. ಈ ತಿಂಗಳಲ್ಲಿ ೨೯ ದಿನ ೨೩ ಗಂಟೆಗಳ ಅಂತರವಿದೆ. ಪಠ್ಯಗಳಲ್ಲಿ ಸೂಚಿತವಾಗುವ ೨೯.೫೩ (೨೯ ದಿನ ೧೩ ಗಂಟೆ) ಎಂಬುದು ಸರಾಸರಿ ಎನ್ನಬಹುದು.

ಸಂಜೆಯ ಆಕಾಶದಲ್ಲಿ ಕಳೆದ ತಿಂಗಳು ಲಭ್ಯವಿದ್ದ ಗ್ರಹಗಳಲ್ಲಿ ನಾಲ್ಕು ಈ ತಿಂಗಳಲ್ಲಿಯೂ ಕಾಣುತ್ತವೆ. ೧೨ರಂದು ಸೂರ್ಯನನ್ನು ದಾಟಿ ಬರುವ ಬುಧ ಗ್ರಹ ತಿಂಗಳ ಕೊನೆಗೆ ಮುಂಜಾವಿನಲ್ಲಿ ಕಾಣುತ್ತದೆ. ಗುರುಗ್ರಹ ಸೂರ್ಯನ ನೇರಕ್ಕೇ ಬರುವ ಯುತಿ ೨೬ರಂದು ನಡೆಯುವುದರಿಂದ ತಿಂಗಳ ಕೊನೆಗೆ ಕಾಣದಂತಾಗುತ್ತದೆ. ೨ನೇ ತಾರೀಖು ಸಂಜೆ ಗುರುಗ್ರಹ ಚಂದ್ರನ ಪಕ್ಕವೇ ಕಾಣುತ್ತದೆ. ಇದನ್ನು ಮುಸ್ಸಂಜೆಯ ಆಕಾಶದಲ್ಲಿ ಕಾಣುವುದು ಸವಾಲೇ ಎನ್ನಬಹುದು. ಚಂದ್ರ ಅದನ್ನು ಮರೆ ಮಾಡುವ ಘಟನೆ ಸಹ ನಡೆಯಲಿದೆ. ಆದರೆ ಅದು ನಮಗೆ ಅನುಕೂಲಕರವಾಗಿಲ್ಲ. ಅದರ ಮರುದಿನ ಚಂದ್ರನ ಪಕ್ಕದಲ್ಲಿಯೇ ಶುಕ್ರ ಕಾಣಲಿದೆ. ಈ ದೃಶ್ಯ ಕ್ಯಾಮೆರಾದಲ್ಲಿ ಸೆರೆ ಹಿಡಿಯಲು ಯೋಗ್ಯವಾಗಿದೆ. ಆ ದಿನ ಮಧ್ಯಾಹ್ನ ಚಂದ್ರ ಶುಕ್ರನನ್ನು ಮರೆ ಮಾಡುವ ಆಚ್ಛಾದನೆ ಇದೆ. ಸಂಜೆಗೆ ಚಂದ್ರ ಶುಕ್ರನನ್ನು ದಾಟಿ ಹೊರಬಂದಿರುತ್ತದೆಯಾದರೂ ಪರಸ್ಪರ ತಗುಲಿಕೊಂಡಂತೆ ಕಾಣುತ್ತದೆ. ಮುಂದೆ ೨೨ರಂದು ಚಂದ್ರ ರೋಹಿಣಿ ನಕ್ಷತ್ರವನ್ನು ಮುಂಜಾವಿನಲ್ಲಿ ಆಚ್ಛಾದಿಸುವುದನ್ನು ಬರಿ ಕಣ್ಣಿನಿಂದಲೇ ನೋಡಬಹುದು. ಬೆಳಗಿನ ಜಾವ ೨:೩೪ಕ್ಕೆ ಮರೆಯಾಗುವ ರೋಹಿಣಿ ೩:೫೪ಕ್ಕೆ ಇನ್ನೊಂದು ಬದಿಯಿಂದ ಹೊರಬರುತ್ತದೆ. ಚಂದ್ರನ ಚಲನೆಯನ್ನು ಲೆಕ್ಕ ಮಾಡಲು ಇದು ಒಂದು ಒಳ್ಳೆಯ ಅವಕಾಶ.



**ಸೆಪ್ಟೆಂಬರ್ ೩ರ ಸಂಜೆ**
**ಶುಕ್ರ ಮತ್ತು ಚಂದ್ರ**

ಸಂಜೆಯ ಆಕಾಶದಲ್ಲಿ ಆಕಾಶಗಂಗೆಯನ್ನು ನೋಡಲು ಈ ತಿಂಗಳು ಅತ್ಯಂತ ಸೂಕ್ತವಾದ ಅವಕಾಶ ಕಲ್ಪಿಸಿದೆ. ಮೋಡವಿಲ್ಲದಾಗ ಶನಿ ಮತ್ತು ಮಂಗಳ ಗ್ರಹಗಳ ಆಸುಪಾಸನ್ನು ಸೂಕ್ಷ್ಮವಾಗಿ ಗಮನಿಸಿ. ವೃಶ್ಚಿಕ ಮತ್ತು ಧನು ರಾಶಿಗಳನ್ನು ವ್ಯಾಪಿಸಿರುವ ತೆಳ್ಳನೆಯ ಮೋಡದಂತಹ ರಚನೆಯೇ ಆಕಾಶಗಂಗೆಯ ಕೇಂದ್ರಭಾಗ.



ಚಂದ್ರ ಸೃಷ್ಟಿಸುವ ಇನ್ನೆರಡು ಆಕರ್ಷಕ ಘಟನೆಗಳಿವೆ. ಸೆಪ್ಟೆಂಬರ್ ೧ರಂದು ಮಧ್ಯಾಹ್ನ ಸೂರ್ಯಗ್ರಹಣವಿದೆ. ಅದು ಭಾರತೀಯ ಕಾಲಮಾನ ೧೧:೪೩ಕ್ಕೆ ಆರಂಭವಾಗಿ ೧೭:೩೦ಕ್ಕೆ ಮುಗಿಯುತ್ತದೆ. ಆದರೂ ಭಾರತಕ್ಕೆ ಕಾಣುವುದಿಲ್ಲ. ಚಂದ್ರನ ನೆರಳು ಆಫ್ರಿಕ ಮತ್ತು ಹಿಂದೂ ಮಹಾಸಾಗರದ ಮೂಲಕ ಹಾದುಹೋಗಲಿದೆ. ಇದು ಕಂಕಣ ಗ್ರಹಣ – ಅಂದರೆ ಸೂರ್ಯ ಕಂಕಣ, ಅಂದರೆ ಬಳೆಯಂತೆ ಕಾಣುತ್ತದೆ. ೧೬ರ ರಾತ್ರಿ ಹುಣ್ಣಿಮೆಯಂದು ಚಂದ್ರ ಭೂಮಿಯ ನೆರಳಿನ ಪಾರ್ಶ್ವ ಛಾಯೆಯ ಭಾಗವನ್ನು ಮಾತ್ರ ಹಾದುಹೋಗುತ್ತದೆ. ಈ ಬಗೆಯ ಗ್ರಹಣವನ್ನು "ಆಚರಿಸು" ವುದಿಲ್ಲವಾದ್ದರಿಂದ ಕ್ಯಾಲೆಂಡರ್‌ಗಳಲ್ಲಿ ನಮೂದಾಗಿರುವುದಿಲ್ಲ. ಆದರೆ ನಡುರಾತ್ರಿಯಲ್ಲಿ ನೀವು ಚಂದ್ರನತ್ತ ದೃಷ್ಟಿ ಹರಿಸಿದರೆ ಅದರ ಒಂದು ಅಂಚು ಸ್ವಲ್ಪ ಮಂಕಾಗಿದೆಯೇನೋ ಎಂದು ಅನ್ನಿಸಬಹುದು.

೨೯ರ ಮುಂಜಾವು ಬುಧ ಗ್ರಹವನ್ನು ನೋಡಲು ಒಳ್ಳೆಯ ಅವಕಾಶವಿದೆ. ೨೯–೩೦ರ ಅವಧಿಯಲ್ಲಿ ರೇಖಾಚಂದ್ರ ಅದನ್ನು ದಾಟಿಹೋಗುವುದನ್ನೂ ತಿಳಿಯಬಹುದು. ಇಲ್ಲಿಯೂ ಚಂದ್ರ ಅದನ್ನು ಮುಚ್ಚುವ ಆಚ್ಛಾದನೆ ನಡೆಯುತ್ತದೆಯಾದರೂ ನೋಡಲು ನಮಗೆ ಅನುಕೂಲಕರವಾಗಿಲ್ಲ.

ಸೆಪ್ಟೆಂಬರ್ ೨೨ರಂದು ಶರದ್ ವಿಷುವ; ಅಂದರೆ ಹಗಲು – ರಾತ್ರಿಗಳ ಅವಧಿ ಸಮ. ಇದಾದ ನಂತರ ಹಗಲಿನ ಅವಧಿ ಕಡಿಮೆಯಾಗತೊಡಗುತ್ತದೆ.

## ಸೆಪ್ಟೆಂಬರ್ ತಿಂಗಳ ಖಗೋಳ ದಿನಚರಿ

| | |
|---|---|
| ೧ | ಅಮಾವಾಸ್ಯೆ ೧೪:೩೩ಕ್ಕೆ ಕಂಕಣ ಗ್ರಹಣ. ಭಾರತಕ್ಕೆ ಕಾಣುವುದಿಲ್ಲ. |
| ೨ | ಗುರು – ಬುಧ – ಚಂದ್ರ ಪುಟ್ಟ ಗುಂಪು * |
| | ಗುರುಗ್ರಹದ ಆಚ್ಛಾದನೆ (ಕಾಣುವುದಿಲ್ಲ) |
| ೩ | ಶುಕ್ರ – ಚಂದ್ರ ಜೋಡಿ. ಆಚ್ಛಾದನೆ ಕಾಣುವುದಿಲ್ಲ * |
| ೬ | ಭೂಮಿ – ಚಂದ್ರ ನಡುವೆ ಗರಿಷ್ಠ ಅಂತರ |
| ೮ | ಶನಿ – ಚಂದ್ರ ಜೋಡಿ * |
| ೯ | ಚಾಂದ್ರಮಾಸದ ಮೊದಲ ಪಾದ |
| | ಚಂದ್ರ – ಮಂಗಳ – ಶನಿ – ಪುಟ್ಟ ಗುಂಪು * |
| ೧೨ | ಬುಧ ಗ್ರಹದ ಯುತಿ |
| ೧೬ | ಹುಣ್ಣಿಮೆ ರಾತ್ರಿ ೧೨:೦೫ಕ್ಕೆ ಪಾರ್ಶ್ವ ಛಾಯಾಗ್ರಹಣ |
| ೧೭ | ಶುಕ್ರ – ಚಿತ್ರಾ ಜೋಡಿ * |
| ೧೮ | ಚಂದ್ರ –ಭೂಮಿ ನಡುವೆ ಕನಿಷ್ಠ ಅಂತರ |
| ೨೧ | ಬುಧ ಗ್ರಹದ ಹಿನ್ನಡೆ ಮುಕ್ತಾಯ |
| ೨೨ | ಶರದ್ ವಿಷುವ |
| | ರೋಹಿಣಿ ನಕ್ಷತ್ರದ ಆಚ್ಛಾದನೆ ಮುಂಜಾವು ೨:೩೪ರಿಂದ ೩:೫೩ರವರೆಗೆ * |
| ೨೬ | ಗುರುಗ್ರಹದ ಯುತಿ |
| ೨೮ | ಬುಧ ಗ್ರಹದ ಗರಿಷ್ಠ ಕೋನೋನ್ನತಿ (ಮುಂಜಾವು) * |
| ೨೯ | ಬುಧ ಗ್ರಹದ ಆಚ್ಛಾದನೆ (ಕಾಣುವುದಿಲ್ಲ) |
| ೩೦ | ಗುರು – ಚಂದ್ರ ಜೋಡಿ |

(* ಛಾಯಾಗ್ರಹಣಕ್ಕೆ ಸದವಕಾಶ)


**ಡಾ|| ಬಿ. ಎಸ್. ಶೈಲಜಾ**
ಜವಾಹರ್ ಲಾಲ್ ನೆಹರು ತಾರಾಲಯ,
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಹುಟ್ಟು ಸಾವು ಸಂವಾದ



### ಶಾಂತಾದೇವಿ ಹಿರೇಮಠ

(ಹುಟ್ಟು ಸಾವು ಆಕಸ್ಮಿಕವಾಗಿ ಬಹಳ ದಿನಗಳ ನಂತರ ಭೆಟ್ಟಿಯಾದರು)

**ಹುಟ್ಟು** : ಅಬ್ಬಬ್ಬಾ ! ಏನ್ರೀ ಬಹಳ ದಿನಕ್ಕೆ ಭೆಟ್ಟಿಯಾದರಲ್ರೀ ?

**ಸಾವು** : ಯಾಕ್ರೀ, ಯಾಽಕ ನನ್ನನ್ನು 'ರೀ' ಹಚ್ಚಿ ಮಾತಾಡಸ್ತೀರಲ್ರೀ. ಏನ ಸುದ್ದಿ ?

**ಹುಟ್ಟು** : ಹಾಗೇನಿಲ್ರೀ, ಬಹಳ ದಿನಕ್ಕೆ ಭೆಟ್ಟಿಯಾದರಲ್ರೀ ಅದಕ್ಕ ಹಾಂಗಂದೆ.

**ಸಾವು** : ನೋಡಪಾ ನಾವಿಬ್ಬರೂ ಚಡ್ಡಿ ದೋಸ್ತಿಗಳು. ಆಗ ಹ್ಯಾಂಗ ಮಾತಾಡತ್ತಿದ್ದಿವಿ, ಇಂದೂ ಹಾಂಗ ಮಾತಾಡೋಣ. ಹಾಗೆಲ್ಲ ನನಗ 'ರೀ' ಹಚ್ಚಬ್ಯಾಡರಿ.

**ಹುಟ್ಟು** : ಆಯ್ತು ಆಯ್ತು : ಮತ್ತೇನು ಸಮಾಚಾರ.

**ಸಾವು** : ಹಾಂಗ ನೋಡಕೊಂಡ ಹೋಗೋಣ ಅಂತ ಬಂದೆ.

**ಹುಟ್ಟು** : ಒಳ್ಳೆಯದಾಯ್ತು ಬಿಡು.

**ಸಾವು** : ನಾ ಬಂದ್ಯಾ ಅಂತ ಚಿಂತೆ ಮಾಡಬ್ಯಾಡಪಾ. ಸುಮ್ಮನೆ ಬಂದೆ.

**ಹುಟ್ಟು** : ನಾ ಏನ ಚಿಂತೆ ಮಾಡಂಗಿಲ್ಲ. ಯಾಕಂದ್ರ ನಿನ್ನ ನಾ ಯಾವಾಗ ನೆನಸ್ತೀನಿ ಗೊತ್ತಲ್ಲ.

**ಸಾವು** : ನನಗ ಗೊತ್ತಿರಲಾರದ್ದು ಯಾವದದ. ನಾನು ಕರದವರ ಹತ್ತಿರ ಬಂದು ಹೋಗಾವ.

**ಹುಟ್ಟು** : ನೋಡಪಾ, ನಾನು ಹಿಂದಿನದು ನೆನೆಸಿಕೊಂಡರ ನನಗ ಬಹಳ ಸಂತೋಷ ಆಗ್ತದ. ನಿನಗ ಗೊತ್ತಲ್ಲ.



**ಸಾವು** : ಏನಪಾ ಅದು. ಸ್ವಲ್ಪ ಹೇಳು, ಅಂದರ ನನಗೂ ನೆನಪಾಗ್ತದ.

**ಹುಟ್ಟು** : ನಾ ಹುಟ್ಟಿದಾಗ ಎಷ್ಟು ಸಂಭ್ರಮ ! ಅದು ಹೇಳತೀರದ್ದು. ಅದರಾಗ ನಾ ಗಂಡಾದರಂತೂ ಬ್ಯಾಡ ಅದರ ಸುದ್ದಿ. 'ಗಂಡು' ಅಂದ ತಕ್ಷಣ ಸಕ್ಕರಿ ಹಂಚೂದೇನು. ಹೆರಿಗೆ ಮಾಡಿದವರಿಗೆ ಕೇಳಿದ ಬಹುಮಾನ. ಮನ್ಯಾಗಿನ ಆಳುಕಾಳುಗಳಿಗೆ ಸುಗ್ಗಿಯೋ ಸುಗ್ಗಿ. ಸಂಬಂಧಿಕರಿಗೆಲ್ಲ ಸಂತೋಷ ಹಂಚೂದೇನು. ಪೇಡೆ ಕೊಡೋದೇನು. ಒಂದ, ಎರಡ, ಅಬ್ಬಾ ನನಗ ನೆನಸಿಕೊಂಡರ ಮೈ ನವಿರೇಳ್ತದ, ತಲ್ಯಾಗ ನವಿಲ ಕುಣೀತದ.

**ಸಾವು** : ಮಗನ, ನೀ ಹುಟ್ಟಿದ ಕೂಡಲೇ 'ನಾ' ನಿನ್ನ ಅಪ್ಪಿಕೊಂಡರ ಹ್ಯಾಂಗಿರತದ ಗೊತ್ತೇನ?

**ಹುಟ್ಟು** : ಮಗನ, ನನಗ ಗೊತ್ತಿರಲಾರದ ನಿನಗ ಗೊತ್ತೇನಲೇ !

**ಸಾವು** : ಅದನ್ನ ಹೇಳಿದೆ.

**ಹುಟ್ಟು** : ಹೊಟ್ಯಾಗ ಮೂಡಿದಾಗಿನಿಂದ ನೀ ನನ್ನ ಬೆನ್ನಹಿಂದ ಇರ್ತಿ. ಅದನ್ನ ಹ್ಯಾಂಗ ಮರೀಲಿ. ನಾವಿಬ್ಬರೂ ಒಂದೇ ನಾಣ್ಯದ ಎರಡು ಮುಖಗಳು ಇದ್ಹಾಂಗ.

**ಸಾವು** : ಅದನ ಹೇಳಪಾ. ಸ್ವಲ್ಪ ನನ್ನ ನೆನೆಸಿಕೋ.

**ಹುಟ್ಟು** : ನಿನ್ನ ನೆನೆಸಿಕೊಳ್ಳದಿದ್ದರ ಹ್ಯಾಂಗ ? ಹೇಳ್ತೀನಿ ಕೇಳು, ಸಂತೋಷ. ಸಂಭ್ರಮ ಎಲ್ಲ ನೀ ಬಂದ ಕೂಡಲೆ ಎದಿ ಒಡೆದು ನೀರಾಗತೈತಿ. ಮಾತಾಡಾಕ ಬಾಯಿ ಬರೋದಿಲ್ಲ. ಎರಡೂ ಕೈ ತಲಿ ಮ್ಯಾಲ ಹೊತ್ತಕೊಂಡ ಕುಂದರೂದ. ಕಣ್ಣಾಗಿನ ನೀರು ಧಾರಾಕಾರವಾಗಿ ಅಲ್ಲ ಪ್ರವಾಹದೋಪಾದಿ ಹರೀತದ. ಯಾರು ಏನು ಹೇಳಿದರೂ ಕೇಳು ಪರಿಸ್ಥಿತಿ ಇರೋದಿಲ್ಲ. ಅದರಾಗ ಹಡೆದಾಕಿಯದಂತೂ ಹೇಳಾಕ ಬರೂದಿಲ್ಲ. ಮನ್ಯಾಗ ಹೆರಿಗೆ ಆದರ ಆಕೆಗೆ ಗೊತ್ತಾಗ್ತದ.

---

**ಆಧಾರಸ್ತಂಬ ಆದವರು ಅಂತೀಯಲ್ಲ. ಅವರೂ ಏನ ಮಾಡಿರತಾರ ಗೊತ್ತಾ ? 'ಸಾಲ' ಮಾಡಿರ್ತಾರ, ಒಂದು. ಇಲ್ಲ ದುಶ್ಚಟಕ್ಕೆ ಬಲಿಯಾಗಿ ಹಣದ ದುರುಪಯೋಗ ಮಾಡಿರ್ತಾರ. ಇಂಥವರು ತಮ್ಮ ಸಾವನ್ನು ತಾವೇ ಕರೆದುಕೊಳ್ತಾರ. ಧೈರ್ಯ ಇದ್ದವರು ಹೇಗಾದರೂ ಬದುಕಿಕೊಳ್ತಾರ. ಸಮಯ ಸಂದರ್ಭ ಅರಿತುಕೊಳ್ತಾರ. ಇಲ್ಲದವರು ನಾ ಬರೂ ಮುಂಚೆಯೇ ಆತ್ಮಹತ್ಯೆ ಮಾಡಿಕೋತಾರ. ಅದಕ್ಕ ನಾ ಹ್ಯಾಂಗ ಹೊಣೆಯಾಗಲಿ ? ಇನ್ನು ಸಣ್ಣ ಮಕ್ಕಳು ಅಂತಿ. ಹೆಣ್ಣಕೂಸು ಹೊಟ್ಯಾಗ ಐತಿ ಅಂದ್ರ ಅವಾಗ ಕೊಂದಹಾಕ್ತಾರ, ಮಕ್ಕಳಿಗೆ ರೋಗರುಜಿನ ಬಂದ್ರ ದವಾಖಾನಿಗಿ ಹೋಗುದು ಬಿಟ್ಟು ದೇವ್ರು ದಿಂಡ್ರು ಮುಲ್ಲಾ, ಹರಕಿ ಅಂತ ತಡಾ ಮಾಡ್ತಾರ. ಅವ್ರಾಗೆ ಸಾಯೂ ದಾರಿ ಹುಡುಕ್ಕೋತಾರ ಅದು ನನ್ನ ತಪ್ಪ ?**

---

ಬೆಲೆ ಸ್ಥಿರತೆ ಕಾಯ್ದುಕೊಳ್ಳಲು ಬೇಳೆಕಾಳು ಆಮದು



'ಬೆಲೆ ಸ್ಥಿರತೆ' ನೆಪದಲ್ಲಿ ವಿದೇಶದ ಬೇಳೆಕಾಳು ತಂದು ಯಾರ್ಯಾರೆಲ್ಲ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೋ ಎಂಬ ಸಣ್ಣ ಅನುಮಾನವಿದೆ..ಕಣೋ!

ದವಾಖಾನೆಗಾದರ ಡಾ॥ ಅಮ್ಮ ಇಂಜೆಕ್ಷನ್ ಕೊಟ್ಟು ಮಲಗಸ್ತಾಳ. ಎಚ್ಚರಾದರ ಕೂಸಿನ್ನ ಕೇಳಿದರ, ಅದರ ಆರೋಗ್ಯ ಸರಿಯಾಗಿಲ್ಲ. ಬ್ಯಾರೆ ಇಟ್ಟಾರ ಅಂತ ಏನಾದರೂ ಹೇಳಿ ಮತ್ತೊಂದು ಇಂಜೆಕ್ಷನ್ ಚುಚ್ಚಿ ಹೀಂಗ ೧-೨ ದಿನ ಆದ ನಂತರ ಆಕೀಗೆ ತಾನಾಗೇ ಗೊತ್ತಾಗೂ ಹಾಂಗ ಮಾಡ್ತಾರ.

**ಸಾವು :** ಪಾಪ ! ಏನ ಮಾಡಬೇಕಪಾ. ಒಂಭತ್ತು ತಿಂಗಳು ಹೊಟ್ಯಾಗ ಹೊತ್ತಿರತಾಳ. ಕರಳು ಹರಿದು ಬಂದಿರ್ತದ. ನನಗೂ ಹೊಟ್ಯಾಗ ಸಂಕಟ ಆಗ್ತದ.

**ಹುಟ್ಟು :** ನಿನಗ್ಯಾಕಪಾ ಸಂಕಟ ಆಗ್ತದ. ಏನಿದ್ದರೂ ನನಗಾಗುವ ಸ್ಥಿತಿ.

**ಸಾವು :** ಹೌದಪಾ, ಇಲ್ಲಂದವರಾರು ? ಒಟ್ಟಿಗೆ ಒಂದs ಮಾತ ಹೇಳುದೇನಂದರ ನೀ ಮುಂದಿನ ಭಾಗ – ನಾ ಹಿಂದಿನ ಭಾಗ ಗೊತ್ತಾಯ್ತಿಲ್ಲೊ. ಅಂದರ ನಾ ನಿನ್ನ ಬೆನ್ನು ಭಾಗನ ನಾನು. ನಿನ್ನ ಬಿಟ್ಟು ಇರಲಾಕ ನನಗೆ ಆಗೂದಿಲ್ಲ ಅಷ್ಟು ನಾವಿಬ್ಬರು ಅಗಲಲಾರದ ಗೆಳೆಯರು ಗೊತ್ತಾ ?

**ಹುಟ್ಟು :** ಗೊತ್ತಾಗಲಾರದ ಇರ್ತದೇನು, ನೀ ಯಾವಾಗಲೂ ನನ್ನ ಹಿಂದ ಇರ್ತೀದಿ. ನಾವಿಬ್ಬರೂ ಅನ್ಯೋನ್ಯತೆಯ ಜೀವಾಳಗಳ ಹಾಂಗ ಇರ್ತೀವಿ. ತಂದೆ ತಾಯಿ – ಬಂಧು ಬಳಗ ಬಿಟ್ಟುಹೋದರೂ, ನಾವಿಬ್ಬರೂ ಸದಾ ಅಗಲಲಾರದಂಗ ಇರ್ತಿವಿ. ನಾವಿಬ್ಬರೂ ಇರದಿದ್ದರ ಈ ಲೋಕನ ನಡಿಯಾಂಗಿಲ್ಲ.

**ಸಾವು :** ಹೌದು... ಹೌದು... ನನ್ನ ಬಿಟ್ಟು ನೀ ಇರಂಗಿಲ್ಲ. ನಿನ್ನ ಬಿಟ್ಟು ನಾ ಇರಂಗಿಲ್ಲ.

**ಹುಟ್ಟು :** ಹೀಂಗ ಸಂತೋಷದಿಂದ ಸದಾಕಾಲ ಇರೋಣ. ಜಗತ್ತಿನ್ಯಾಗ ನಮ್ಮ ಜೀವನಾನ ಶಾಶ್ವತ ನೋಡು.

**ಸಾವು :** ಅದು ಹ್ಯಾಂಗ ಶಾಶ್ವತ ಅಂತೀದಿ? ನನಗ ಗೊತ್ತಾಗಲಿಲ್ಲ.

**ಹುಟ್ಟು :** ನೋಡಪಾ. ಶಾಶ್ವತ ಅಂದರ 'ನಾ' ಹುಟ್ಟಿದ್ದು "ಸಂತೋಷ". ಶಾಶ್ವತ, "ಸತ್ತದ್ದು" ಶಾಶ್ವತ. ಜಗತ್ತಿನ್ಯಾಗ ಏನಾರ ದೊಡ್ಡ ಕೆಲಸ ಮಾಡಿ ಹೋದರ ಜನ ನನ್ನನ್ನು ನೆನೆಸ್ತಾರ. ದೊಡ್ಡ ದೊಡ್ಡ ಮಹಾತ್ಮರು, ವೀರರು, ದೇಶ ಕಾಯುವ ಸೈನಿಕರು, ಅನ್ನದಾತರು, ದಾನಶೂರರು, ಇನ್ನೊಬ್ಬರ ಸಲುವಾಗಿ ಕಷ್ಟದಲ್ಲಿರುವವರಿಗೆ, ಅನಾಥರಿಗೆ, ಸಹಾಯ, ಸಹಕಾರ ಮಾಡಿದವರು ತ್ಯಾಗ ಮಾಡಿ ಜೀವ ಉಳಿಸಿದವರನ್ನು ಒಬ್ಬರ, ಇಬ್ಬರ ಇಂಥವರು ಸತ್ತರೂ ಇದ್ದಾಂಗ. ಅಂದರ ಸೂರ್ಯ-ಚಂದ್ರರು ಹ್ಯಾಂಗ ಎಲ್ಲರಿಗೂ ಭೇದಭಾವ ಇಲ್ಲದ ಬೆಳಕು ಕೊಡ್ತಾರ, ಹಾಂಗ ಇವರೂ ಜಗತ್ತಿನ್ಯಾಗ ಇರುವದು ಶಾಶ್ವತ. ಇಲ್ಲಾಂದರss

**ಸಾವು :** ಇಲ್ಲಾಂದರ ?

**ಹುಟ್ಟು :** ಇಲ್ಲಾಂದರ ನಾ ಹುಟ್ಟಿದರೂ ಸಾರ್ಥಕ ಇಲ್ಲದಾಂಗ. ಕಳ್ಳತನ ಸುಳ್ಳು, ಭ್ರಷ್ಟತೆ, ಇನ್ನೊಬ್ಬರ ಅನ್ನ ಕಸಿದುಕೊಂಡು ತನ್ನ ಹೊಟ್ಟೆ ತುಂಬಿಸಿಕೊಂಡು ಇರೋದು, ಅನ್ಯಾಯ, ಅಕ್ರಮಗಳಿಂದ ಬಾಳಿದರ, ಇನ್ನೊಬ್ಬರಿಗೆ ಕಣ್ಣೀರು ಹರಿಸಿ ಸ್ವಾರ್ಥಜೀವನ ನಡೆಸೋದು, ಹಿಂಸಿಸುವದು. ಇನ್ನೊಬ್ಬರ ಜೀವ ತೆಗೆಯೋದು ಮುಂತಾಗಿ ಕೆಟ್ಟ ಕೆಲಸ ಯಾರು ಮಾಡಿರ್ತಾರ, ಮಾಡತಾರ, ಅಂಥವರು ಹುಟ್ಟಿದ್ದಕ್ಕೂ ನನ್ನ ಬೈಯೋದು, ನಂತರ ನಿನ್ನನ್ನೂ ಬಿಡದೆ ಅವನು ಸತ್ತಿದ್ರ ಛಲೋ ಆಯ್ತು. ಅಥವಾ ಇವನಿಗೆ ಯಾವಾಗ ಸಾವು ಬರ್ತದ. ಅಂತ ಶಾಪ ಹಾಕೋದು ಆಗ ಅವರು ಎಲ್ಲಾರೂ ನಿನ್ನ ಮೊರೆಹೋಗ್ತಾರ. ಆದರ ನೀ ಅವರಿಗೆ ನೀ ಬೇಗ ಯಾಕ ಅಪ್ಪಿಗೊಳ್ಳಾಂಗಿಲ್ಲ. ನನಗ ಅದs ಗೊತ್ತಾಗೋದಿಲ್ಲ ನೋಡು.

**ಸಾವು :** ನನಗೂ ಗೊತ್ತಾಗ್ತದ ಇಲ್ಲ ಅನಬ್ಯಾಡ. ಆದರ ನಮ್ಮಿಬ್ಬರಿಗೂ ಇನ್ನೊಬ್ಬವ 'ವೈರಿ' ಅದಾನ. ಗೊತ್ತದ ಏನು ?

**ಹುಟ್ಟು :** ಗೊತ್ತಿಲ್ಲದ ಏನು ! 'ಧೈರ್ಯ' ಅಂತ ಅದಾನ. ಅವನು ಬಹಳ ಶಕ್ತಿವಂತ.

**ಸಾವು :** ಹಾಂ ನಿನಗೂ ಗೊತ್ತದ ನೋಡು. ನಾನು ಅವನ ಬಗ್ಗೆ ಹೇಳಾವ ಇದ್ದೆ.

**ಹುಟ್ಟು :** 'ಧೈರ್ಯಂ, ಸರ್ವತ್ರ ಸಾಧನಂ' ಅಂತ ಹೇಳ್ಯಾರ, ಇದು ಎಲ್ಲಾರಲ್ಲೂ ಇರ್ತದ. ಆದರ ಅವರಿಗೆ ಗೊತ್ತಾಗೂದಿಲ್ಲ. ಒಂದು ವೇಳೆ ಗೊತ್ತಿದ್ರೂ ಅದರ ಉಪಯೋಗ ತಕ್ಕೊಳ್ಳುವದಿಲ್ಲ.

**ಸಾವು :** ಗೊತ್ತಾಗದ ಏನು ? ಎಲ್ಲರಿಗೂ ಗೊತ್ತಿರತದ, ಆದರ ಅವರಲ್ಲಿ ಆ ಧೈರ್ಯ ಹೆಚ್ಚು ಕಡಿಮೆ ಇರ್ತದ.

**ಹುಟ್ಟು :** ನೋಡಪಾ. ನೀ ಅವರಿಗೆ ಸಾವು ಯಾಕ ತರೂದಿಲ್ಲ ಹೇಳಲೇನು, ಅಶಕ್ತರು, ಸೋಮಾರಿಗಳು, ಪುಕ್ಕಲಗೋಡಿಗಳಿಗೆ ಮಾತ್ರ ಧೈರ್ಯ ಕಡಿಮೆ. ಹಣದಿಂದ ದೊಡ್ಡವರೆನಿಸಿಕೊಂಡವರಿಗೆ, ಭ್ರಷ್ಟರಿಗೆ, ಅನ್ಯಾಯಿಗಳಿಗೆ, ಕಳ್ಳರಿಗೆ ಧೈರ್ಯ ಹೆಚ್ಚು. ಅದಕ್ಕ ಅವರಿಗೆ ಮೊಂಡ ಧೈರ್ಯದವರು ಅಂತಾರ, ಅಂಥವರಿಗೆ ಆಯಸ್ಸು ಹೆಚ್ಚು. ಅವರಿಗೆ ನೀ ಮರಣ ಬೇಗ ತರೂದಿಲ್ಲ. ಅಥವಾ ಅವರೆಂದರ ಹೆದರಿಕೆ ಇದ್ದಂಗ ಕಾಣಸ್ತದ ನಿನಗ.

**ಸಾವು :** ಛೇ ! ನಾ ಯಾಕ ಅವರಿಗೆ ಹೆದರಲಿ, ನೋಡಪಾ, ಈಗ ಹುಡುಗರು ಗಾಳಿಪಟ ಹಾರಿಸತಾರ. ಗಾಳಿಪಟ ಮೇಲಕ್ಕೇರಿದಂತೆ ಎಷ್ಟು ಸಂತೋಷ ಆಗತದ ಹಾಂಗ ಈ ದುಷ್ಟರಿಗೂ ಸಂತೋಷ ಆಗತಿರತದ, ಪಾಪ ! ಹಾರಿಸಲಿ ಬಿಡು, ಅಂತ ನೋಡತಿರತೀನಿ. ಎಷ್ಟು ದಿನ, ಎಷ್ಟು ಹೊತ್ತು ಹಾರತದ ಕೊನೆಗೆ ಅದು ಯಾವುದಕ್ಕೋ ಬಡಿದು ಕೆಳಗೆ ಬೀಳತದ, ನೋಡು. ಆಗ ಅವರ ಧೈರ್ಯ ಎಲ್ಲ ಕುಗ್ಗಿಬಿಡ್ತದ. ಅವರು ಇದ್ದರೂ ಇಲ್ಲದಂಗ ಆಗ್ತಾರಲ್ಲ. ಅಂದರ ಜೀವವಿದ್ದೂ ಸತ್ತಾಂಗ. ಇರಲೀಂತ ಅವರ ಪಾಡಿಗೆ ಅವರನ್ನು ಬಿಟ್ಟುಬಿಡ್ತೀನಿ.

ಆಗ ಜನಾ ಒಳ್ಳೆಯದಾಯ್ತು, ಅಂತ ಸಂತೋಷಪಡ್ತಾರ. ಅಷ್ಟು ಸಾಕಾಂತ ಹ್ಯಾಂಗಾದರೂ ಬದುಕಿಕೊಳ್ಳಲಿ ಅಂತ ನಾನೂ ನಿರ್ಲಕ್ಷ್ಯ ಮಾಡ್ತೀನಿ. ನೀ ಏನ ತಿಳಕೊಂಡಿ ಅಂದರ ನಾನು ಅವರಿಗೆ ಹೆದರಿ ಸಾವು ತರಂಗಿಲ್ಲ ಎಂದು ಈಗಾಗಲೇ ತಿಳೀತಾ ?

**ಹುಟ್ಟು :** ಹೌದು ಅದೂ ಒಂದ ರೀತಿ ಛಲೋನ. ಆದರ ಒಳ್ಳೆಯ ಜನರನ್ನು ದೌಡ ಅಪಗೋತಿ. ಅದನ್ನ ಹೇಳು.

**ಸಾವು :** ಅದಕ್ಕೂ ಒಂದು ಕಾರಣ ಐತಿ. ಹೇಳತೀನಿ : ಅವರಿಗೆ ಯಾಕ ಬೇಗ ಸಾವು ತರ್ತೀನಿ, ಅಂದರ ಅವರು, ಬಹಳ ಒಳ್ಳೆಯವರು. ನೀ ಹೇಳಿದಾಂಗ ಅವರು 'ಶಾಶ್ವತ' ಕೆಲಸ ಮಾಡಿರ್ತಾರ. ನನ್ನ "ಕೆಲಸಾನೂ" ಮಾಡಿದಾರ. ಅವರು ನನ್ನ ಮ್ಯಾಲೆ ಅಪವಾದ ತರೂದಿಲ್ಲ. ಅಂದರ ಜನಾ 'ಅವನು ಸಾಯತಿದ್ದಿಲ್ಲ. ಇವರ (ಕೆಟ್ಟ ಜನರು) ಅವನ್ನ ಕೊಂದರು ಅಂತ. ನನ್ನ ಕೆಲಸಾನೂ ಉಳೀತು. ನಾನೂ ಉಳಿದೆ. ಸತ್ತವನು ಜಗತ್ತಿನಾಗ ಶಾಶ್ವತ ಜನರ ಬಾಯಾಗ ಇರ್ತಾನ. ಹಾಡಿ-ಹೊಗಳ್ತಾರಂತ'. ನಾ ಅವರ ಸಮೀಪ ಹೋಗಾಂಗಿಲ್ಲ. ಇದ ನನ್ನ ಗುಟ್ಟು .

**ಹುಟ್ಟು :** ಮಗನ, ನಿನ್ನ ಗುಟ್ಟಲ್ಲ. ಅದು ನನ್ನ ಹುಟ್ಟು . ನಾ ಮತ್ತ ಅವರ ಬಾಯಾಗ, ಹೃದಯದಾಗ ಹುಟ್ಟಿರ್ತೀನಿ. ಆಗ ನನ್ನ ಬದುಕು ಸಾರ್ಥಕ.

**ಸಾವು :** ಮಗನ, ನೀ ಒಬ್ಬನ ಸಾರ್ಥಕ ಅಲ್ಲ. ನಾನೂ ನಿನ್ನ ಜೊತೆಗೇ ಇರ್ತೀನಿ. ನೀ ನನ್ನ ಬಿಡಬ್ಯಾಡ. 'ನಾವಿಬ್ಬರೂ' ಸಾರ್ಥಕ ಅನ್ನು.

**ಹುಟ್ಟು :** ಹೂನಪಾ. ಬಹಳ ಹೊತ್ತಾತು. ಮತ್ತ ಭೆಟ್ಟಿಯಾಗೋಣ.

* * *

**ಹುಟ್ಟು :** ಬಾರಪಾ ಬಾ. ಈ ಸಲ ಬೇಗ ಬಂದೆಯಲ್ಲಪ್ಪಾ .

**ಸಾವು :** ಯಾಕೋ ನಿನ್ನ ನೆನಪಾತು. ಬಂದೆ, ಬ್ಯಾಸರಿಲ್ಲಲ್ಲ !

**ಹುಟ್ಟು :** ನನಗ್ಯಾಕೋ ಬ್ಯಾಸರ.

**ಸಾವು :** ನನಗೂ ಯಾಕೋ ಬಹಳ ಕರೆ ಬರ್ತಾ ಇದೆ. ಬ್ಯಾಸರಾತು ಬಂದೆ.

**ಹುಟ್ಟು :** ಯಾಕ ನೀನೂ ಮೊಬೈಲು ಇಟ್ಟುಕೊಂಡಿ ಏನು ?

**ಸಾವು :** ಲೇ, ನನಗ ಮೊಬೈಲು ಬೇಕಿಲ್ಲ. ಅದು ಈಗ ಬಂದದ. ಮೊದಲಿಂದ ಮೊಬೈಲು ಇತ್ತೇನು ?

**ಹುಟ್ಟು :** ಹಂಗಲ್ಲ. ಈಗ ನೋಡಪಾ. ಯಾರ ಕೈಯಾಗೂ ನೋಡಿದರೂ ಮೊಬೈಲು. ನೀನೂ ಯಾಕ ತೊಗೊಬಾರದು ಬಿಡು. ಇಟ್ಟುಕೊಂಡರಾಯ್ತು.

**ಸಾವು :** ನೋಡಪಾ ಅದನ್ನ ಇಟ್ಟುಕೊಂಡರ ರೀಚಾರ್ಜು ಮಾಡಿಸಬೇಕು. ನನ್ನ ಹತ್ತಿರ ಹಣ ಇಲ್ಲ.

**ಹುಟ್ಟು :** ಹಣ ಅಷ್ಟ ಅಲ್ಲ, ನಿನಗ ಗುಣಾನೂ ಇಲ್ಲ.

**ಸಾವು :** ಯಾಕಪಾ ಹೆಂಗೆಂಗ ಮಾತಾಡಕ ಹತ್ತೀದಿ. ನನಗ್ಯಾಕ ಗುಣ ಇಲ್ಲ ಅಂತೀದಿ.

**ಹುಟ್ಟು :** ಅದು ಹೋಗಲಿ, ನಿನಗ ಒಮ್ಮೊಮ್ಮೆ ಕರುಣಾನೂ ಇರೂದಿಲ್ಲ, ಅಂದರ ಚಿಕ್ಕಮಕ್ಕಳ ಪ್ರಾಣ, ಪ್ರೀತಿ–ಪ್ರೇಮ ಮಾಡುವ ಹದಿಹರೆಯದ ಪ್ರೇಮಿಗಳು, ಜೊತೆಗೆ ಮನೆಗೆ ಆಧಾರಸ್ತಂಬದಂತೆ ಇರುವವರು, ಗಂಡ–ಹೆಂಡತಿಯರನ್ನು ಅಗಲಿಸುವದು, ಶಾಲೆಗೆ ಹೋಗುವ ಚಿಕ್ಕಮಕ್ಕಳನ್ನು ಗೋಳಾಡಿಸುವದು, ಅಂದರ (ಇತ್ತ ಸಾಯಲೂ ಬ್ಯಾಡ. ಬದುಕಲೂ ಬ್ಯಾಡ) ಹೀಂಗ ಒಬ್ಬೊಬ್ಬರಿಗೆ ಒಂದೊಂದು ತರಹದ ನೋವು ದುಃಖ ತಂದು ಇಡ್ತೀದಿ. ಇದಕ್ಕ ಒಳ್ಳೆಯ ಗುಣ ಅಂತಾರೇನು ? ಇದಕ್ಕೆ ಎಲ್ಲಾರೂ ಏನಂತಾರ ಗೊತ್ತೇನು ? ಕರುಣಾ ಇಲ್ಲದವ ಕಟುಕ ಅಂತಾರ. ಇದು ನಿನಗ ಬೇಕನಪಾ ?

**ಸಾವು :** ಹೌದಪಾ, ನೀ ಅನ್ನೂದು ಖರೆ. ಜನ ಅನ್ನೂದು ಖರೆ. ಆದರೆ ನಾನು ಏನು ಮಾಡಲಿ ? ಅವರ ಹತ್ತಿರ 'ಧೈರ್ಯ' ಇರೂದಿಲ್ಲ. ಒಂದನೇಯ ಮಾತು ಅವರ ಹತ್ತಿರ ಹಣ ಇದೆ ಅಂತ ಸಿಕ್ಕಸಿಕ್ಕದ್ದು ತಿಂದು, ಭೂಲೋಕದ ಅಮೃತ ಕುಡಿದು ರೋಗಿಗಳಾಗಿ ನಂತರ ಅವರು ನನ್ನನ್ನು ಕರೀತಾರೆ.

ಇನ್ನು ಆಧಾರಸ್ತಂಬ ಆದವರು ಅಂತೀಯಲ್ಲ. ಅವರೂ ಏನ ಮಾಡಿರತಾರ ಗೊತ್ತಾ ? 'ಸಾಲ' ಮಾಡಿರ್ತಾರ, ಒಂದು, ಇಲ್ಲ ದುಶ್ಚಟಕ್ಕೆ ಬಲಿಯಾಗಿ ಹಣದ ದುರುಪಯೋಗ ಮಾಡಿರ್ತಾರ. ಇಂಥವರು ತಮ್ಮ ಸಾವನ್ನು ತಾವೇ ಕರೆದುಕೊಳ್ತಾರ. ಧೈರ್ಯ ಇದ್ದವರು ಹೇಗಾದರೂ ಬದುಕಿಕೊಳ್ತಾರ. ಸಮಯ ಸಂದರ್ಭ ಅರಿತುಕೊಳ್ತಾರ. ಇಲ್ಲದವರು ನಾ ಬರೂ ಮುಂಚೆಯೇ ಆತ್ಮಹತ್ಯೆ ಮಾಡಿಕೋತಾರ. ಅದಕ್ಕ ನಾ ಹ್ಯಾಂಗ ಹೊಣೆಯಾಗಲಿ ?

ಇನ್ನು ಸಣ್ಣ ಮಕ್ಕಳು ಅಂತಿ. ಹೆಣ್ಣಕೂಸು ಹೊಟ್ಟ್ಯಾಗ ಐತಿ ಅಂದ್ರ ಅವಾಗ ಕೊಂದಹಾಕ್ತಾರ, ಮಕ್ಕಳಿಗೆ ರೋಗರುಜಿನ ಬಂದ್ರ ದವಾಖಾನಿಗಿ ಹೋಗುದು ಬಿಟ್ಟು ದೇವ್ರು ದಿಂಡ್ರು ಮುಲ್ಲಾ, ಹರಕಿ ಅಂತ ತಡಾ ಮಾಡ್ತಾರ. ಅವ್ರಾಗೆ ಸಾಯೂ ದಾರಿ ಹುಡುಕ್ಕೋತಾರ ಅದು ನನ್ನ ತಪ್ಪ ?

**ಹುಟ್ಟು :** ತಿಳೀತಪಾ, ನಿನ್ನ ಪುರಾಣ ಕತೆ. ಸಾಕಪ್ಪಾ ಸಾಕು. ಆದರೆ ನಿನ್ನ ಈ ಪರಿಸ್ಥಿತಿ ನನಗಿಲ್ಲ. ಹುಟ್ಟಿದ್ದು ಹೆಣ್ಣಾಗಲಿ, ಗಂಡಾಗಲಿ, ಖುಷಿಯೇ ಖುಷಿ. ಆ ನನ್ನ ಸಂತೋಷಕ್ಕೆ ನನ್ನ ಜನ್ಮ ಸಾರ್ಥಕ (ನಗುವನು).

**ಸಾವು :** ಹೌದಪಾ, ನೀ ನಗು. ಆದರೆ ನಾನು ಅಳುತ್ತೇನೆ. ನೋಡುವವರಿಗೆ ನಾವಿಬ್ಬರೂ ವಿರುದ್ಧ ವಾದರೂ, ನಾವಿರುವದು ಮಾತ್ರ ಜೊತೆ ಜೊತೆಗೆ. ಬೆಂಬಿಡದ ಸ್ನೇಹಿತರು. "ನೀ ಹುಟ್ಟು, ನಾ ಸಾವು." ನಾವಿಬ್ಬರೂ ಜೋಡಿ ಎಂದು ತಿಳಿದವರು ನಮ್ಮನ್ನು ದ್ವೇಷಿಸುವದಿಲ್ಲ. ಒಟ್ಟಾರೆ, ನಾವಿಬ್ಬರೂ ಈ ಜಗತ್ತಿನಲ್ಲಿ ಅಮರರೇ, ಮತ್ತ ನಾವಿಬ್ಬರೂ ಸೇರೋಣ. ಹೊತ್ತಾಯ್ತು.

**ಶಾಂತಾದೇವಿ ಹಿರೇಮಠ**
'ಪ್ರಭು ಸಿದ್ದಪ್ಪ ನಿಲಯ', ವಿಕಾಸನಗರ
ಕೊಪ್ಪಳ – ೫೮೩ ೨೩೧

---

## ಅಂತರ

ಬೆಳಕಲಿ
ನಿನ್ನಾ ನೆರಳು
ನಿನ್ನಾ ಹಿಂಬಾಲಕ,
ಕತ್ತಲಲಿ
ಅಡಗಿ ಕುಳಿತ
ಸಂಚಾಲಕ

**ದ್ವಾರನಕುಂಟೆ ಪಾತಣ್ಣ**
ಬೆಂಗಳೂರು – ೭೩

---



## ನಿರ್ಗತಿಕರು




ಅದೇ ಪಾಳು ಕಟ್ಟಡಗಳ
ಬೆನ್ನಿಗಂಟಿ ಮಲಗಿ
ನಮ್ಮ ಕೈ ಕಾಲು ಮನಸುಗಳು
ಹರಕು ಗೋಡೆಗಳಾಗಿವೆ...
ಕಲ್ಲುಗಳನ್ನೆ ಮೆತ್ತನೆ
ದಿಂಬುಗಳೆಂದು ಭಾವಿಸಿ
ಕನಸು ಕಾಣುವ ನಮಗೆ
ಕಥೆ ಹೇಳಿ ಮಲಗಿಸುವ
ನಕ್ಷತ್ರಗಳು
ಮಗ್ಗಲು ಬದಲಾಯಿಸಲು ಒಪ್ಪುತ್ತಿಲ್ಲ !

ಬೆಳಗ್ಗೆ ಮತ್ತದೇ ಮೂರು ಕಲ್ಲೇರಿಸಿ
ರಾತ್ರಿ ಸಾಥ್ ನೀಡಿದ
ತರಗೆಲೆಗಳ ಬೆಂಕಿಗೆ
ನಜ್ಜುಗುಜ್ಜಾದ ಅಲ್ಯುಮಿನಿಯಂ
ಪಾತ್ರೆಯಿಟ್ಟು
ಅಕ್ಕಿ ಅನ್ನವಾಗುವ
ಅಮೃತ ಘಳಿಗೆಗೆ
ಕಾಯುತ್ತಿದೆ ಈ ಜೀವನ...

ಅಲ್ಲೇ ದಾರಿಗುಂಟ
ರಸ್ತೆ ಕೆಲಸ ಮುಗಿಸಿ ಬಂದ ಯಜಮಾನ
ಹುಣ್ಣಿಮೆ ರಾತ್ರಿಯ ಮಹೋತ್ಸವಕ್ಕೆ
ಆಸ್ಥೆ ತೋರಿದರೆ
ನಾಚಿಕೆ ಬಿಟ್ಟು ಊಳಿಡುತ್ತಾ
ಸನಿಹಕ್ಕೆ ಬರುವ ಬೀದಿನಾಯಿಗಳು
ನಮಗೆ ಸರಹದ್ದುಗಳೇ ಇಲ್ಲ !

ಲೋಕ ಮಾತು ಮರೆತಂತೆ
ತಲೆ ಮೇಲೆ ಕೈ ಹೊತ್ತ
ಮೌನಪ್ರಿಯರು
ಮತ್ತೆ ಮತ್ತೆ ಕಾಣಸಿಗುತ್ತಾರೆ
ನಾವೋ ಅವರ ಪಕ್ಕದಲ್ಲಿ
ಅತ್ಯಂತ ಬಿರುಸಾಗಿ ನಡೆಯುತ್ತೇವೆ !

**ಸಂಗೀತ ರವಿರಾಜ್**
ಹೊಸೂರು ಮನೆ, ಚಾಲಂಬಿ ಅಂಚೆ
ಚೆಂಬು ಗ್ರಾಮ, ಮಡಿಕೇರಿ ತಾಲೂಕು
ಕೊಡಗು ಜಿಲ್ಲೆ – ೫೭೪ ೨೩೪



# ಯಜ್ಞಾಚರಣೆ



ಹಿಂದೂಧರ್ಮದಲ್ಲಿ ದೇವತಾಮೂರ್ತಿಗಳಿಗೆ ಅಭಿಷೇಕ ಮಾಡಲು ಹಾಲು ಎಳನೀರು –ಜೇನು ಇತ್ಯಾದಿ ಪಂಚಾಮೃತ ಪರಿಕರಗಳನ್ನು ಬಳಸಲಾಗುತ್ತದೆ. ಇದು ಆಹಾರದ ಅಪವ್ಯಯ. ಬಡತನ–ಹಸಿವಿನಿಂದ ನರಳಿ ಸಾಯುತ್ತಿರುವವರ ಸಂಖ್ಯೆ ನಮ್ಮ ದೇಶದಲ್ಲಿ ದೊಡ್ಡದು ಎಂಬ ಮೂಲಾಂಶವನ್ನು ಇಟ್ಟುಕೊಂಡು ಬಿಂಡಿಗನವಿಲೆ ಭಗವಾನರು ಅನೇಕ ಮೌಲ್ವಿಕ ವಿಚಾರಗಳನ್ನು ಪ್ರತಿಪಾದಿಸುತ್ತ ವಾಸ್ತವಾಂಶದ ಕಡೆಗೆ ನಮ್ಮ ಗಮನ ಸೆಳೆಯುತ್ತಾರೆ (ಸಂಗತ, ಪ್ರಜಾವಾಣಿ, ದಿನಾಂಕ ೨೯–೬–೨೦೧೬).

ನಮ್ಮ ಹಿಂದೂಧರ್ಮದ ಪರಂಪರೆಯಲ್ಲಿ ಇಂಥ ಅರ್ಥರಹಿತ ಆಚರಣೆಗಳೇ ಸಿಂಹಪಾಲು ಪಡೆದಿವೆ. ಅಭಿಷೇಕದಂತೆಯೇ ಅಮೂಲ್ಯ ಆಹಾರ ಹಾಗೂ ಇತರ ವಸ್ತುಗಳನ್ನು ವ್ಯರ್ಥಗೊಳಿಸುವ ಮತ್ತೊಂದು ಆಚರಣೆ ಎಂದರೆ ಯಜ್ಞ–ಯಾಗಾದಿಗಳು. ದೇವರ ಹೆಸರು ಹೇಳುತ್ತ ಬೆಲೆಯುಳ್ಳ ಆಹಾರ ಪದಾರ್ಥಗಳು ಹಾಗೂ ರೇಷ್ಮೆ ವಸ್ತ್ರಗಳನ್ನು ಅಗ್ನಿಗೆ ಅರ್ಪಿಸಿ ಸುಟ್ಟು ಬೂದಿ ಮಾಡಲಾಗುತ್ತದೆ. ಹಿಂದೆಲ್ಲಾ ಈ ಯಾಗಗಳಿಗೆ, ಗೋವೂ ಸೇರಿದಂತೆ ಅನೇಕ ರೀತಿ ಪ್ರಾಣಿಗಳನ್ನು ಬಲಿಕೊಡುತ್ತಿದ್ದುದು ರೂಢಿಯಲ್ಲಿತ್ತು. ಇತ್ತೀಚೆಗಷ್ಟೆ ಮತ್ತೂರಿನಲ್ಲಿ ಸಂಕೇತಿ ಬ್ರಾಹ್ಮಣರು ನಡೆಸಿದ ಸೋಮ ಯಾಗದಲ್ಲಿ ಎಂಟು ಮೇಕೆಗಳನ್ನು ಆಹುತಿ ನೀಡಲಾಗಿದೆ ಎಂಬ ವರದಿ ಓದಿದ್ದು ಇನ್ನೂ ಹಸಿಯಾಗಿಯೇ ಇದೆ. ಆದರೆ ಯಜ್ಞಕುಂಡದಲ್ಲಿ ಬೆಂದ ಪಶುಗಳ ಮಾಂಸವನ್ನು ವ್ಯರ್ಥ ಗೊಳಿಸದಂತೆ ಯಾಜ್ಞಿಕರು ಪ್ರಸಾದವನ್ನಾಗಿ ಸೇವಿಸುತ್ತಿದ್ದರೆಂಬುದು ಬೇರೆ ವಿಷಯ. ಇಂದೂ ಕೂಡ ದೊಡ್ಡ ಪ್ರಮಾಣದಲ್ಲಿ ಯಜ್ಞ–ಯಾಗಗಳ ಹೆಸರಿನಲ್ಲಿ ದೇಶದ ಅಮೂಲ್ಯ ಸಂಪತ್ತಾದ ಆಹಾರ ವಸ್ತುಗಳ ಅಪವ್ಯಯವಾಗುತ್ತಿರುವುದೂ ಅಷ್ಟೇ ಸತ್ಯಸಂಗತಿ.

ಆದಿಮಾನವ ಅಲೆಮಾರಿ ಜೀವನದಲ್ಲಿದ್ದಾಗ ಪ್ರಕೃತಿಯ ವಿಕೋಪದ ವಿರುದ್ಧ ಉಗ್ರವಾಗಿ ಸೆಣಸಬೇಕಾಗಿತ್ತು. ಬಿರುಗಾಳಿ–ಮಳೆ–ಸಿಡಿಲು ಇತ್ಯಾದಿಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಮರದ ಪೊಟರೆಗಳು – ಗುಹೆಗಳು ಬಂಡೆಯ ಸಂದುಗೊಂದುಗಳಿಗೆ ಹರಸಾಹಸಪಡಬೇಕಾಗಿತ್ತು. ಯಾವಾಗಲೋ ಒಮ್ಮೆ ಕಲ್ಲುಗಳ ಹೊಡೆತದಿಂದ ಉಂಟಾದ ಬೆಂಕಿಯ ಕಿಡಿ ಹಾರಿ, ತರಗೆಲೆಯ ಮೇಲೆ ಬಿದ್ದು ಹತ್ತಿ ಉರಿದಾಗ, ಅವನಿಗೆ ಅದ್ಭುತ ಪವಾಡ ದರ್ಶನವಾದಂತಾಗಿರಬೇಕು. ನಂತರ ಕಲ್ಲುಗಳನ್ನು ಘರ್ಷಿಸಿ ಬೆಂಕಿ ಮಾಡುವುದು ಅವನ ದಿನಚರಿಯಲ್ಲೊಂದಾಯಿತು. ಇದು ಮನುಕುಲದ ಚರಿತ್ರೆಯಲ್ಲಿ ಒಂದು ಪ್ರಮುಖ ಘಟ್ಟ. ಹೀಗೆ ಬೆಂಕಿಯ ಆವಿಷ್ಕಾರ ಕತ್ತಲಿನಲ್ಲಿ ಬೆಳಕು, ಚಳಿಯಲ್ಲಿ ಹಿತವಾದ ಶಾಖ, ಹಸಿಮಾಂಸವನ್ನು ಬೇಯಿಸಲು, ಜೀವನಾವಶ್ಯಕತೆಯ ನಾನಾ ವಸ್ತುಗಳನ್ನು, ಆಯುಧಗಳನ್ನು ತಯಾರಿಸಲು ಶಕ್ತಿಮೂಲವಾಯಿತು. ಈ ಅನುಕೂಲಗಳು ನಾಗರಿಕತೆಯ ಮೆಟ್ಟಿಲನ್ನು ಹತ್ತಲು ಸರಾಗವಾದ ಮಾರ್ಗವೊಂದು ಗೋಚರಿಸಿದಂತಾಯಿತು. ಬೇಕೆನಿಸಿದಾಗಲೆಲ್ಲಾ ಕಲ್ಲುಗಳನ್ನು ಘರ್ಷಿಸಿ ಬೆಂಕಿ ಮಾಡಿಕೊಳ್ಳುವುದು ಅಷ್ಟು ಸುಲಭವಾಗೇನೂ ಇರಲಿಲ್ಲ. ಆದ್ದರಿಂದ ಒಮ್ಮೆ ಮಾಡಿದ ಬೆಂಕಿಯನ್ನು ಕೆಲವರು ಆರಿಸದೆ ಸದಾ ಉರಿಸುತ್ತಲೇ ಇರಬೇಕಾದ ಅನಿವಾರ್ಯತೆ ಇತ್ತು. ಕಾಡಿನ ಒಡನಾಡಿಗಳಾಗಿದ್ದ ಅವರು ಯಥೇಚ್ಛವಾಗಿ ದೊರಕುತ್ತಿದ್ದ ಒಣಕಟ್ಟಿಗೆಯ ಉರುವಲಿಂದ ಬೆಂಕಿಯನ್ನು ನಂದದಂತೆ ಉರಿಸಿಡುತ್ತಿದ್ದರು. ಇಂಥವರಿಂದ ಇತರರು ಬೆಂಕಿಯನ್ನು ಪಡೆದು ತಮ್ಮ ಅಗತ್ಯಗಳನ್ನು ಪೂರೈಸಿ ಕೊಳ್ಳುತ್ತಿದ್ದರು. ಇದು ವಿಶ್ವದ ಆದಿಮಕಾಲದ ಎಲ್ಲಾ ಜನಾಂಗಗಳಲ್ಲೂ ಕಂಡುಬರುವ ಸಾಮಾನ್ಯ ಲಕ್ಷಣ. ಆನಂತರದ ಕಾಲದಲ್ಲಿ ಭಾರತೀಯ ವೈದಿಕ ಸಂಸ್ಕೃತಿಯಲ್ಲಿ ಈ 'ಅಗ್ನಿಕುಂಡ'ಗಳು ಅತ್ಯಂತ ಪ್ರಮುಖ ಸ್ಥಾನಗಳಿಸಿದ್ದನ್ನು ಇಂದೂ ಕಾಣಬಹುದು. ಜನಪದರಲ್ಲೂ, ಬೆಂಕಿಪೆಟ್ಟಿಗೆ ಆವಿಷ್ಕಾರವಾಗುವವರೆಗೂ ಕೆಲವರು ಬೆಂಕಿಯನ್ನು ನಂದದಂತೆ ಅಗ್ಗಿಷ್ಟಿಕೆಗಳಲ್ಲಿ ರಕ್ಷಿಸಿಡುತ್ತಿದ್ದರು. ಇದಕ್ಕೆ ಉದಾಹರಣೆಯಾಗಿ ಕೋಳಿ ಮತ್ತು ಅಗ್ಗಿಷ್ಟಿಕೆಯನ್ನು ಹೊಂದಿದ್ದ 'ಜಂಭದ ಅಜ್ಜಿ'ಯ ಕಥೆಯನ್ನು ಪ್ರಾಥಮಿಕ ತರಗತಿಯ ಪಠ್ಯದಲ್ಲಿ ಓದಿದ್ದನ್ನು ಅನೇಕರು ಸ್ಮರಿಸಬಹುದು.

ಆರ್ಯರು ಭಾರತಕ್ಕೆ ಬಂದಮೇಲೆ, ಪ್ರಕೃತಿಯ ಆರಾಧಕರಾಗಿದ್ದ ಅವರೂ ಸಹ, ಅಗ್ನಿಗೇ ಪ್ರಥಮ ಆದ್ಯತೆಯನ್ನು ಕೊಟ್ಟಿದ್ದು ಎಲ್ಲರಿಗೂ ತಿಳಿದದ್ದೇ. ಪ್ರಕೃತಿ ಒಲಿದರೆ ಮಾತ್ರ ಅವರ ಬದುಕು ಹಸನು. ಒಂದೊಮ್ಮೆ ಪ್ರಕೃತಿ ಏನಾದರೂ ಮುನಿದರೆ ಅವರ ಬದುಕು ಮೂರಾಬಟ್ಟೆಯಾಗುತ್ತಿತ್ತು. ನಾಗರಿಕತೆಯ ಶೈಶವ ಹಂತದಲ್ಲಿದ್ದ ಅವರು, ಪ್ರಕೃತಿಯ ವಿಕೋಪದಿಂದ ಪಾರಾಗಲು ಪ್ರಕೃತಿಗೆ ತಮಗಿಷ್ಟವಾದ ತಿಂಡಿ–ತಿನಿಸು, ಬಟ್ಟೆ–ಬರೆಗಳನ್ನು ಅರ್ಪಿಸಿ ಸಂತೃಪ್ತಿ ಪಡಿಸಬಹುದೆಂದು ನಂಬಿದ್ದರು. ಪ್ರಕೃತಿಯ ವಿಕೋಪ ಶಮನಗೊಳಿಸುವುದೆಂದರೆ, ಪ್ರವಾಹ – ಕಾಡ್ಗಿಚ್ಚು – ಅತಿವೃಷ್ಟಿ – ಅನಾವೃಷ್ಟಿ , ರೋಗ – ರುಜಿನಗಳಿಲ್ಲದೆ, ಸುಖ–ಸಂತೋಷ – ಆರೋಗ್ಯದಿಂದ ಕೂಡಿದ ಸಮೃದ್ಧಿಯ ಬದುಕನ್ನು ಪಡೆಯಬಹುದೆಂಬ ಅಚಲವಾದ ನಂಬಿಕೆ ಅವರದಾಗಿತ್ತು. ಹಾಗಾದರೆ ಪ್ರಕೃತಿಯನ್ನು ಸಂತೃಪ್ತಿಪಡಿಸುವ ವಿಧಾನ ಯಾವುದು? ಪ್ರಕೃತಿ – ದೇವರ ಹೆಸರಿನಲ್ಲಿ ಇಂದ್ರ–ವರುಣ ಮುಂತಾದವರಿಗೆ ಆಹಾರವನ್ನು ಎಲ್ಲೋ ಒಂದೆಡೆ ಅರ್ಪಿಸಿದರೆ, ಅದು ಕೆಟ್ಟು ಕೊಳೆತು ದುರ್ನಾತ ಬೀರುತ್ತದೆ. ದೇವರಿಗೆ ಸಲ್ಲುವುದಿಲ್ಲ. ಆದ್ದರಿಂದ ತಾವು ಅರ್ಪಿಸಿದ ಹವಿಸ್ಸನ್ನು (ಆಹಾರ ವಸ್ತುಗಳು) ಸಂಬಂಧಪಟ್ಟ ದೇವರಿಗೆ ತಲುಪಿಸುವ ಮಧ್ಯವರ್ತಿಯೊಂದು ಬೇಕಾಗಿತ್ತು. ಅವನೇ ಅಗ್ನಿದೇವ. ಅಗ್ನಿಗೆ ಏನನ್ನು ಅರ್ಪಿಸಿದರೂ ಅದು ಲವಲೇಶವಿಲ್ಲದಂತೆ ಸುಟ್ಟು ಭಸ್ಮವಾಗುತ್ತದೆ. ಅಗ್ನಿಯ ಮೂಲಕ ಹವಿಸ್ಸು , ಅರ್ಪಿಸಿದ ದೇವರಿಗೆ ತಲುಪಿ ಸಂತೃಪ್ತನಾಗುತ್ತಾನೆಂಬ ಅಚಲವಾದ ನಂಬಿಕೆ ಅವರದು. ಇದೇ ಮುಂದಿನ ಯಜ್ಞಾಚರಣೆಯ ಮೂಲವೆನ್ನಬಹುದು.

ಅರಣ್ಯವಾಸಿಗಳಾಗಿದ್ದ ಆರ್ಯರು ಹೊಂಡವನ್ನು ಮಾಡಿ ಕಾಡಿನಲ್ಲಿ ಯಥೇಚ್ಛವಾಗಿ ದೊರಕುತ್ತಿದ್ದ ಕಟ್ಟಿಗೆಗಳನ್ನು ಹಾಕಿ ಬೆಂಕಿಯನ್ನು ಸ್ಥಾಪಿಸಿ ಪ್ರಕೃತಿ ದೇವರ ಹೆಸರು ಹೇಳಿ ಸ್ವಾಹ ಎಂದ ಕೂಡಲೆ ದಹಿಸಿ ಹೋಗುತ್ತಿತ್ತು. ಅಂದಿನ ಜನಸಮೂಹ ಸಾಮೂಹಿಕವಾಗಿ ಪ್ರಕೃತಿಯ ಒಂದೊಂದು ಅಂಶವನ್ನೂ ಒಂದೊಂದು ದೇವತೆಗಳಾಗಿ ಪರಿಭಾವಿಸಿ (ಇಂದ್ರ–ವರುಣ–ಸೂರ್ಯ–ಚಂದ್ರ ಮುಂತಾದವರು) ಆ ದೇವರುಗಳಿಗೆ ಹವಿಸ್ಸನ್ನು ಕೃತಜ್ಞತಾಪೂರ್ವಕವಾಗಿ ಅರ್ಪಿಸುತ್ತಿದ್ದರು. ಸಕಾಲದಲ್ಲಿ ಮಳೆ–ಬೆಳೆ–ಪಶುಸಂಪತ್ತು ಇತ್ಯಾದಿ ನೆಮ್ಮದಿಯ ಐಹಿಕ ಜೀವನಕ್ಕೆ ಬೇಕಾದ ಅನುಕೂಲಗಳನ್ನು ಪೂರೈಸುವಂತೆ ಬೇಡುವ ಪ್ರಾರ್ಥನಾ ಪದಬಂಧಗಳನ್ನು ಅಂದಿನ ತಮ್ಮ ಭಾಷೆಯಲ್ಲಿ ರಚಿಸಿ ಅದನ್ನು ಉಚ್ಚರಿಸುತ್ತಾ ಹವಿಸ್ಸನ್ನು ಅಗ್ನಿಕುಂಡಕ್ಕೆ ಅರ್ಪಿಸುತ್ತಿದ್ದರು. ಇದೊಂದು ಆತ್ಮೀಯತೆಯಿಂದ ಕೂಡಿದ ಅಂದಿನ ಜನರ ಮುಗ್ಧ–ಸರಳ ಮಾಂತ್ರಿಕ (ಮಂತ್ರಗಳ) ಆಚರಣೆಯಾಗಿತ್ತು. ಕಾಲಕ್ರಮೇಣ ಋಗ್ವೇದದ ಹೊತ್ತಿಗೆ ಯಜ್ಞ, ಹಲವಾರು ವಿಧಿ–ವಿಧಾನಗಳಿಂದ ಶಿಷ್ಟಾಚಾರವಾಗಿ ಪರಿವರ್ತನೆಗೊಂಡು, ಸಂಕೀರ್ಣತೆಯನ್ನು ಹೊಂದಿದ ತಾಂತ್ರಿಕ ಆಚರಣೆಯಾಗಿ ವೈಭವೀಕರಿಸಲ್ಪಟ್ಟಿತು. ಯಜ್ಞಕಾರ್ಯಕ್ಕೆ ಉಪಯೋಗಿಸುತ್ತಿದ್ದ ಬೆಂಕಿಯನ್ನು ಆರದಂತೆ ಸದಾ ಉರಿಸಿ ರಕ್ಷಿಸುತ್ತಿದ್ದವರನ್ನು 'ಅಗ್ನಿಹೋತ್ರಿ'ಗಳೆಂದು ಕರೆಯಲಾಗುತ್ತಿತ್ತು. ಈ ಹೆಸರಿನ ಪಳೆಯುಳಿಕೆ ಬ್ರಾಹ್ಮಣ ಜಾತಿಯಲ್ಲಿ ಈಗಲೂ ಕಾಣಬಹುದಾಗಿದೆ.

ನಾಗರಿಕತೆಯ ಆದಿಮ ಹಂತದಲ್ಲಿದ್ದ ಜನರು ತಮ್ಮ ಸೀಮಿತಜ್ಞಾನದ ಪರಿಧಿಯಲ್ಲಿ, ತಾವು ನಂಬಿದ್ದ ದೈವದ ಸಂತೃಪ್ತಿಗಾಗಿ ಅಂದು ತಾವು ಕಂಡುಕೊಂಡಿದ್ದ ಈ ಸರಳ ಯಜ್ಞ–ಯಾಗಗಳ ಆಚರಣೆಗೆ, ಮುಂದಿನ ಕಾಲಮಾನದಲ್ಲಿ ಕೃತಕ ನಿಗೂಢತೆಯನ್ನು ಕಲ್ಪಿಸಿ, ಕ್ಲಿಷ್ಟಕರ ವಿಧಿ–ವಿಧಾನಗಳನ್ನು ಹೇರಲಾಗಿದೆ. ಪ್ರಾಚೀನ ಕಾಲದಲ್ಲಿ ಕೇವಲ ಪ್ರಕೃತಿ ದೇವತೆಗಳಿಗೆ ನಡೆಯುತ್ತಿದ್ದ, ಯಜ್ಞಗಳು ಇಂದು ನೂರಾರು ದೇವತೆಗಳ ಹೆಸರಿನಲ್ಲಿ ವೈಭವೋಪೇತವಾಗಿ ನಡೆಯುತ್ತಿದ್ದು, ಹವಿಸ್ಸಿನ ರೂಪದಲ್ಲಿ ಅಪಾರ ಪ್ರಮಾಣದ ಆಹಾರ–ವಸ್ತುಗಳ ಅಪವ್ಯಯವಾಗುತ್ತಿದೆ. ಹತ್ತು ಸಾವಿರ ವರ್ಷಗಳ ಹಿಂದಿನ ಚಾರ್ವಾಕರಿಂದ ಹಿಡಿದು ಇತಿಹಾಸದುದ್ದಕ್ಕೂ ವಿಶ್ವಮಾನ್ಯ ದಾರ್ಶನಿಕರು ಇಂಥ ಆಚರಣೆಗಳ ಅರ್ಥಹೀನತೆಯನ್ನು ಧಿಕ್ಕರಿಸುತ್ತಲೇ ಬಂದಿದ್ದಾರೆ. ಈಗಲೂ ಬಡತನ, ಹಸಿವುಗಳು ನಮ್ಮ ದೇಶದ ಜ್ವಲಂತ ಸಮಸ್ಯೆಯಾಗೇ ಉಳಿದಿವೆ. ಅಂಧ ವಿಶ್ವಾಸದಿಂದ ಕೂಡಿದ ಇಂಥ ನೂರಾರು ಆಚರಣೆಗಳು ಹಿಂದೂ ಧರ್ಮವನ್ನು ಅಪಮೌಲ್ಯಗೊಳಿಸುತ್ತಿರುವುದಲ್ಲದೆ, ದೇಶದ ಪ್ರಗತಿಗೆ ಕಂಟಕಪ್ರಾಯವಾಗಿವೆ. ಜ್ಞಾನ – ವಿಜ್ಞಾನದ ಅತ್ಯುನ್ನತ ಪ್ರಗತಿ ಸಾಧಿಸಿರುವ ಇಂದಿನ ಜಾಗತೀಕರಣದ ಕಾಲಘಟ್ಟದಲ್ಲೂ ಇಂಥ ದುಂದುವೆಚ್ಚದ ಆಚರಣೆಗಳು ಎಷ್ಟರಮಟ್ಟಿಗೆ ಪ್ರಸ್ತುತ ಎಂಬುದನ್ನು ಪ್ರಜ್ಞಾವಂತರೆಲ್ಲರೂ ಗಂಭೀರವಾಗಿ ಯೋಚಿಸಬೇಕಾಗಿದೆ.

**ಎನ್. ವಿ. ಅಂಬಾಮಣಿ ಮೂರ್ತಿ**
ನಂ. ೨೨, ಬಿಸಿಸಿ ಬಡಾವಣೆ, ೨ನೇ ಮುಖ್ಯರಸ್ತೆ , ವಿಜಯನಗರ
ಬೆಂಗಳೂರು – ೫೬೦ ೦೪೦

# ಕರ್ನಾಟಕದ ಸಮಗ್ರ ದಲಿತ ಚರಿತ್ರೆ



**ಸಂಪಾದನೆ - ರಚನೆ : ಡಾ. ಎನ್. ಚಿನ್ನಸ್ವಾಮಿ ಸೋಸಲೆ**

✦ ಮೈಸೂರು ಸಂಸ್ಥಾನದ ದಲಿತ ಚರಿತ್ರೆ ✦ ಮುಂಬಯಿ ಕರ್ನಾಟಕದ ದಲಿತ ಚರಿತ್ರೆ ✦ ಕರಾವಳಿ ಕರ್ನಾಟಕದ ದಲಿತ ಚರಿತ್ರೆ ✦ ಹೈದರಾಬಾದ್ ಕರ್ನಾಟಕದ ದಲಿತ ಚರಿತ್ರೆ ✦ ಪ್ರಸ್ತುತ ಸಂದರ್ಭದ ಕರ್ನಾಟಕದಲ್ಲಿ ದಲಿತರು ಬೌದ್ಧ ಧರ್ಮಕ್ಕೆ ಮತಾಂತರವಾಗುತ್ತಿರುವ ಕುರಿತು ಚರ್ಚೆ – ವಿಶ್ಲೇಷಣೆ ✦ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ದಲಿತರು ✦ ಸಮಕಾಲೀನ ಕರ್ನಾಟಕದಲ್ಲಿ ದಲಿತರ ಬದುಕಿನ ಸಾಧಕ–ಬಾಧಕಗಳ ಚಿತ್ರಣ ✦ ಕರ್ನಾಟಕದ ನೆರೆ ರಾಜ್ಯಗಳಲ್ಲಿನ ದಲಿತ ಸಾಧಕರುಗಳ ಚರಿತ್ರೆ




¼ ಕ್ರೌನ್  900 ಪುಟಗಳು  ₹ 890

ನೂರಕ್ಕೂ ಹೆಚ್ಚು ಪರಾಮರ್ಶನ ಗ್ರಂಥಗಳಿಂದ ಮಾತ್ರವಲ್ಲದೆ, ಒಂಭತ್ತಕ್ಕೂ ಹೆಚ್ಚು ನಿಯತಕಾಲಿಕೆಗಳಿಂದ ಮತ್ತು ಹತ್ತು ಹಲವು ದಿನಪತ್ರಿಕೆಗಳಿಂದ ಮತ್ತು ವಾರ್ತಾಪತ್ರಿಕೆಗಳಿಂದ ಮಾಹಿತಿಯನ್ನು ಸಂಗ್ರಹಿಸಿರುವುದಲ್ಲದೆ, ಪತ್ರಾಗಾರದ ದಾಖಲೆಗಳು, ಸರ್ಕಾರದ ವಿವಿಧ ಇಲಾಖೆಯ ವಾರ್ಷಿಕ ವರದಿಗಳು ಮತ್ತು ವಿಶೇಷ ಸಂಚಿಕೆಗಳಿಂದ ಮಾತ್ರವಲ್ಲದೆ, ಪ್ರಕಟಿತ ಹಾಗೂ ಅಪ್ರಕಟಿತ ಮಹಾಪ್ರಬಂಧಗಳೂ ಸೇರಿ, ಮೌಖಿಕ ಆಕರಗಳಿಗೂ ಗೌರವ ನೀಡಿ ಸಂಗ್ರಹಿಸಿರುವ ವಿಶಿಷ್ಟ ಮಾಹಿತಿಗಳನ್ನು ಕ್ರಮಬದ್ಧವಾಗಿ ಅಭ್ಯಾಸ ಮಾಡಿ, ದೀರ್ಘವಾದ ವಿಶ್ಲೇಷಣಾತ್ಮಕ ಕೃತಿಯನ್ನು ರಚಿಸುವುದು ಸುಲಭದ ಮಾತಲ್ಲ; ಸುಲಭವಲ್ಲದ ಕೆಲಸದಲ್ಲೂ ಯಶಸ್ಸನ್ನು ಸಾಧಿಸಿರುವ ಚಿನ್ನಸ್ವಾಮಿ ಸೋಸಲೆ, ಕರ್ನಾಟಕದ ದಲಿತರಿಗೆ, ತಮ್ಮ ಇತಿಹಾಸವನ್ನು ತಿಳಿಯಲು ಮತ್ತು ದಲಿತೇತರರು ಸತ್ಯ ಸಂಗತಿಗಳನ್ನು ತಿಳಿಯಲು ಈ ಕೃತಿಯ ಮೂಲಕ ನೆರವಾಗಿದ್ದಾರೆ.

ಈವರೆಗಿನ ದಲಿತ ಚರಿತ್ರೆಯನ್ನು ತಿಳಿಯುವುದರ ಜೊತೆಗೆ ವರ್ತಮಾನದಲ್ಲಿಯೂ ಮುಂದುವರಿದಿರುವ ಅಮಾನವೀಯ ಮತ್ತು ಅಸಹ್ಯಕರ ಆಚರಣೆಗಳನ್ನು ನಿವಾರಿಸಿ, ಪಂಪ ಹೇಳಿದ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಮಾತು ಅಕ್ಷರಶಃ ನಿಜವಾಗುವ ದಿನ, ಯಾವುದೇ ವಿಕಾರ ಭಾವನೆಯಿಲ್ಲದೆ, ಎಲ್ಲರೂ ಕೂಡಿ ಬಾಳುವ ದಿನ, ಇಲ್ಲಿ ಯಾರೂ ಅಸ್ಪೃಶ್ಯರಲ್ಲ ಎಂದು ಘೋಷಿಸುವ ದಿನ, ಎಲ್ಲ ವಿಧದಲ್ಲೂ ಸಮಾನತೆಯನ್ನು ಸಾಧಿಸುವ ದಿನ ನಮ್ಮ ಜೀವಿತಾವಧಿಯಲ್ಲೇ ಬರಲಿ ಎಂದು ಆಶಿಸಿದರೆ ಯಾರೂ ದುರಾಸೆ ಎಂದು ಭಾವಿಸಬೇಕಾದ್ದಿಲ್ಲ.

ಅಂತಹ ಒಳ್ಳೆಯ ದಿನಗಳಿಗೆ ಹಂಬಲಿಸಲು ಅನುವು ಮಾಡಿಕೊಡುವ ಇಂತಹ ಕೃತಿಗಳು ಹೆಚ್ಚು ಸಂಖ್ಯೆಯಲ್ಲಿ ಬರಲಿ ಎಂಬುದು ನನ್ನಂತಹ ಆಶಾವಾದಿಗಳ ನಿರೀಕ್ಷೆ.

**– ಡಾ. ಎಚ್. ಎಸ್. ಗೋಪಾಲ ರಾವ್** (ಮುನ್ನುಡಿಯಿಂದ)







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

**HOSATHU** Kannada Monthly / SEPTEMBER 2016 / ₹ 20  (No. of Pages 64)
RNI Regd. KARKAN / 1999 / 614.   Karnataka Regd. KARN/BGE/07/2015-17
Licenced to post without prepayment. WPP No.14.
Posted at BENGALURU PSO, MYSORE ROAD, BENGALURU-560 026 on the 28th of every month.